


ಆಗಸ್ಟ್ ೨೦೦೬
ಬೆಲೆ : ರೂ. ೧೨

ನೆಮ್ಮದಿಯ ನಾಳೆ ನಮ್ಮದು

# ಹೊಸತು




# ಬೆಡಗಿನ ಶಿಲ್ಪಗಳ ಕಿರಣ್ ಸುಬ್ಬಯ್ಯ



ಸಮಕಾಲೀನ ಶಿಲ್ಪಕಲೆಯಲ್ಲಿ ಅಪರೂಪದ ಹೆಸರು ಕಿರಣ್ ಸುಬ್ಬಯ್ಯ. ಚಾಮರಾಜೇಂದ್ರ ತಾಂತ್ರಿಕ ಶಾಲೆ ಸೇರಿ ೧೯೭೫ರಲ್ಲಿ ಶಿಲ್ಪಕಲಾ ಮೂಲ ತರಬೇತಿಯನ್ನು ಮುಗಿಸಿದರು. ಅನಿವಾರ್ಯವಾಗಿ ಪೂರ್ಣ ವ್ಯಾಸಂಗ ಮುಗಿಸಲು ಸಾಧ್ಯವಾಗದಿದ್ದರೂ ಸ್ವಯಂಶಕ್ತಿಯಿಂದ ಸೃಜನಶೀಲ ಶಿಲ್ಪಕಲಾ ಕೀರ್ತಿಯನ್ನು ಪಡೆದರು. ಒಂದೇ ಶಿಲೆಯಲ್ಲಿ ಮೂರು ನಾಲ್ಕು ಕೃತಿಗಳನ್ನು ರಚಿಸಿ ಕೀರ್ತಿಪಡೆದರು.

ಮೊದಲನೇ ವರ್ಷದ ವಿದ್ಯಾರ್ಥಿಯಾಗಿದ್ದಾಗಲೇ ಕಲಾ ಮತ್ತು ಕೈಗಾರಿಕಾ ವಸ್ತು ಪ್ರದರ್ಶನದಲ್ಲಿ ೧೯೭೩ರಲ್ಲಿ ಪ್ರಥಮ ಬಹುಮಾನ ಸೇರಿದಂತೆ ಸಾಕಷ್ಟು ಪ್ರಥಮ ಬಹುಮಾನಗಳನ್ನು ಗಿಟ್ಟಿಸಿದ್ದಾರೆ.

ಕರ್ನಾಟಕ ಲಲಿತಕಲಾ ಅಕಾಡೆಮಿ ಏರ್ಪಡಿಸಿದ್ದ ೧೧ನೇ ವಾರ್ಷಿಕ ಚಿತ್ರಕಲಾ ಪ್ರದರ್ಶನದಲ್ಲಿ ಇವರ ಎರಡು ಕೃತಿಗಳಲ್ಲಿ ಒಂದನ್ನು ಸ್ಪರ್ಧೆ ಹಾಗೂ ಪ್ರದರ್ಶನಕ್ಕೂ, ಮತ್ತೊಂದನ್ನು ಅಕಾಡೆಮಿಯವರು ಖರೀದಿಸಿದ್ದರು.

ಬೆಂಗಳೂರು ಲಲಿತಕಲಾ ಅಕಾಡೆಮಿಯಲ್ಲಿ ಇವರ ಕೃತಿಗಳು ಪ್ರದರ್ಶನವಾಗಿವೆ ಹಾಗೂ ಆಸ್ಟ್ರೇಲಿಯಾ ಮೊದಲಾದ ದೇಶವಿದೇಶಗಳಲ್ಲಿ ಖ್ಯಾತಿಯಾಗಿವೆ. ೧೯೮೦ರಲ್ಲಿ ಕೊಡವ ಭಾಷೆಯ ಹೊಸ ಲಿಪಿಯಾಗಿ ೩೫ ಪೂರ್ಣಾಕ್ಷರ, ೨೫ ಅರ್ಧಾಕ್ಷರಗಳನ್ನು ಸೃಷ್ಟಿಸಿದ ಕೀರ್ತಿ ಇವರದು.

ಸಮಾಜ ಜಾಗೃತಿ ಮೂಡಿಸುವಂಥಾ ಶಿಲ್ಪಗಳನ್ನು ರಚಿಸಿ ಗಮನ ಸೆಳೆದರು. ಸ್ತ್ರೀಶಕ್ತಿ, ಫ್ಯಾಂಟಸಿ, ಇಲ್ಯೂಷನ್, ಬ್ಯಾಕ್‌ಮನಿ, ಗಾರ್ಡಿಯನ್ ಸ್ಪಿರಿಟ್, ಸರ್‌ಕಂಸ್ಟಾನ್ಸಿಯಲ್ ವಿಕ್ಟಿಂ ಮೊದಲಾದವು ನೂರಾರು ಕೃತಿಗಳಲ್ಲಿ ಕೆಲವು ಇಲ್ಲಿವೆ.

ಪಿ. ಎಂ. ರಾಜನ್
ಕಲಾವಿಮರ್ಶಕ – ಪತ್ರಕರ್ತ
೪ಸಿ (೪೨), ಥೀಯೋಬಾಲ್ಡ್ ರಸ್ತೆ
ನಜ಼ರ್‌ಬಾದ್, ಮೈಸೂರು - ೫೭೦ ೦೧೦















# ಹೊಸತು

ನೆಮ್ಮದಿಯ ನಾಳೆ ನಮ್ಮದು

## ಒಳಗೇನಿದೆ ...




ಚಿತ್ರಗಳು : ಶ್ರೀಹರಿ, ರಾಂಚಂದ್ರಕೊಪ್ಪಲು, ಮೋನಪ್ಪ ಎಸ್. ತಾರಾನಾಥ್
ರವೀಂದ್ರ, ಜಿ. ಎಂ. ಬೊಮ್ನಳ್ಳಿ , ಬಿ. ವಿಲ್ಸನ್

ಮುಖಪುಟ : ಮಳೆಯ ನಿರೀಕ್ಷೆಯಲ್ಲಿ (ವರ್ಣಚಿತ್ರ : ಕೆ. ಪಿ. ಸ್ವಾಮಿ)

ವಿನ್ಯಾಸ : ನವಕರ್ನಾಟಕ ವಿನ್ಯಾಸ

ಕಚೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

**ಕಾ**ಶ್ಮೀರದಲ್ಲಿ ಮಾತ್ರವಲ್ಲದೆ ದೇಶದ ಹಲವೆಡೆ ಆಗಾಗ್ಗೆ ಬಾಂಬುಗಳ ಧಾಳಿ ನಡೆಯುವುದು ಪರಿಪಾಠವಾಗಿಬಿಟ್ಟಿದೆ. ಇತ್ತೀಚೆಗೆ ಮುಂಬಯಿಯಲ್ಲಿ ೧೧/೭ರ ಸರಣಿ ಬಾಂಬಿನ ತರದ ಆಘಾತ ಮತ್ತೊಮ್ಮೆ ನಡೆದು ಎಲ್ಲರನ್ನೂ ದಿಗ್ಭ್ರಾಂತಗೊಳಿಸಿದೆ. ಅದೇ ದಿನ ಕಾಶ್ಮೀರದಲ್ಲಿ ಸರಣಿ ಬಾಂಬಿನ ಧಾಳಿ ನಡೆದಿದ್ದು, ಎರಡೂ ಪ್ರಸಂಗಗಳ ಹಿಂದೆ ಒಂದೇ ದುಷ್ಟಕೂಟದ ಕೈವಾಡವಿರಬಹುದೇನೋ ಎಂದೆನಿಸಿದೆ. ಪಾಕಿಸ್ತಾನದ ವಿದೇಶಾಂಗ ಮಂತ್ರಿ ಎರಡಕ್ಕೂ ಪರಸ್ಪರ ಸಂಬಂಧವಿದೆ ಎಂಬಂತೆ ಪ್ರತಿಕ್ರಿಯಿಸಿದ್ದೂ ಆಕಸ್ಮಿಕವೇನಲ್ಲ. ೧೧/೭ರ ಧಾಳಿಗೆ ಕಾರಣನಾದ ದಾವೂದ್ ಇಬ್ರಾಹಿಂಗೆ ರಕ್ಷಣೆ ನೀಡಿ, ಈಗ ಅವನನ್ನು ಸೆರೆಹಿಡಿಯಲು ಅವನ ವಿಳಾಸ ಸಮೇತ ಇಂಟರ್‌ಪೋಲ್‌ಗೆ ಪುಕಾರು ನೀಡಲಾಗಿರುವ ಹಾಗೂ ಅವನ ಅನುಚರ ಅಬು ಸಲೀಮನ ವಿಚಾರಣೆ ಗಂಭೀರ ಮಟ್ಟಕ್ಕೆ ಮುಟ್ಟಿರುವಾಗ, ಅವನ ಉಪ್ಪು ತಿನ್ನುವ ಮುಂಬಯಿ ಭೂಗತ ಲೋಕದ ಸಮಾಜವಿರೋಧೀ ಪುಂಡರು ಇಂಥದೊಂದು ಧಾಳಿ ನಡೆಸಿ ತಮ್ಮ ಅಸ್ತಿತ್ವವನ್ನು ಸಾರಿಕೊಳ್ಳುವುದು ಅನಿವಾರ್ಯವಾಗಿದ್ದಿರಬಹುದು. ಇಂಥ ಪ್ರಸಂಗಗಳಿಗೆ ಪರದೇಶದ ಅಂದರೆ ಪಾಕಿಸ್ತಾನದ ಕುಮ್ಮಕ್ಕು, ಅದರಿಂದ ಸ್ಫೂರ್ತಿಪಡೆಯುವ ಆಂತರಿಕ ಮತೀಯ ಮೂಲಭೂತವಾದಿಗಳು ಎಂದರೆ ಯಾವಾಗಲೂ ಅಂತಹವರನ್ನು ಮುಸ್ಲಿಮರೆಂದೇ ಅರ್ಥೈಸಿ ವಿವರಣೆ ನೀಡುವುದು ಕಾನೂನುಪಾಲಕರಿಗೆ ರೂಢಿಯಾಗಿಬಿಟ್ಟಿದೆ. ಈ ಯಾವ ಕಾರಣಗಳೂ ಹೊಸದೇನೂ ಅಲ್ಲ. ಹಾಗೆಯೇ ಒಂದು ಬಾರಿಯೂ ಅಂಥ ದುರಂತವನ್ನು ತಪ್ಪಿಸಲು ಪೊಲೀಸರಿಗೆ ಸಾಧ್ಯವಾಗದೆ ಹೋಗಿರುವುದು ಹೊಸದೇನಲ್ಲ. ಭಯೋತ್ಪಾದಕರು ಗಡಿಯಾಚೆಯಿಂದ ನುಸುಳಿಬರುತ್ತಾರೆ ಎಂದಿಟ್ಟುಕೊಂಡರೂ ಅಷ್ಟು ದೊಡ್ಡ ಸಂಖ್ಯೆಯಲ್ಲಿ ಮಿಲಿಟರಿ ಮತ್ತು ಗಡಿಭದ್ರತಾ ಪಡೆಗಳು ಏನು ಮಾಡುತ್ತಿವೆ ಎಂದು ಪ್ರಜೆಗಳಿಗೆ ಅರ್ಥವಾಗುತ್ತಿಲ್ಲ. ಹೊರದೇಶದ ಕುಮ್ಮಕ್ಕಿನ ವಿಷಯ ಎಷ್ಟೇ ಸತ್ಯಸಂಗತಿ ಎನಿಸಿದರೂ ದೇಶದೊಳಗಿರುವವರೇ ಅವರ ಪರವಾಗಿ ಈ ಕೆಲಸ ನಿರ್ವಹಿಸುತ್ತಿರಬಹುದು ಎಂದಾಗ ಬೇಹುಗಾರಿಕೆ-ಭದ್ರತಾವ್ಯವಸ್ಥೆಗಳ ವೈಫಲ್ಯ ಇಲ್ಲಿ ಸ್ಪಷ್ಟವಾಗುತ್ತದೆ. ಪ್ರಭುತ್ವದ ಪ್ರಪ್ರಥಮ ಮತ್ತು ಕನಿಷ್ಠ ಕರ್ತವ್ಯವೆಂದರೆ, ತನ್ನ ಪ್ರಜೆಗಳನ್ನು ರಕ್ಷಿಸುವುದು. ಪ್ರಭುತ್ವದಿಂದ ಈ ಕೆಲಸವೂ ಆಗುತ್ತಿಲ್ಲವೆಂದಾದರೆ ಅದರ ಅಗತ್ಯವಾದರೂ ಏನು ? ಪ್ರಜೆಗಳು ಈ ಕೆಲಸವನ್ನು ತಾವೇ ನಿರ್ವಹಿಸಲು ಮುಂದಾಗಬೇಕೆ ? ಹೀಗೆ ಏಕೆ ಹೇಳಬೇಕಾಗಿದೆ ಎಂದರೆ, ಈ ಬಾರಿ ಇಂಥದೊಂದು ಆಘಾತ ನಡೆಯುತ್ತದೆಂದು ಸಾಕಷ್ಟು ಮುನ್ಸೂಚನೆಗಳು ಇದ್ದವು ಎಂಬುದಾಗಿ ವರದಿಯಾಗಿದೆ. ಗೃಹ ಮಂತ್ರಿಗಳಿಗೂ ರಕ್ಷಣಾ ಮಂತ್ರಿಗಳಿಗೂ ಈ ಬಗ್ಗೆ ನಾಚಿಕೆಯಾಗಬೇಕು. ದಾವೂದ್ ಇಬ್ರಾಹಿಂಗೆ ರಕ್ಷಣೆ ನೀಡುವ ಪಾಕಿಸ್ತಾನಕ್ಕೆ ಅಮೆರಿಕಾದ ಅಭಯಹಸ್ತ; ಅಂಥ ಅಮೆರಿಕಾದೊಡನೆ ಆಂತರಿಕ ರಕ್ಷಣೆಯ ವಿಷಯದಲ್ಲೂ ಒಡಂಬಡಿಕೆ ಮಾಡಿಕೊಂಡಿರುವ ಭಾರತ ಸರ್ಕಾರದ ನೀತಿಯಿಂದ ಭಯೋತ್ಪಾದಕರ ಧಾಳಿಯನ್ನು ತಡೆಯುವುದು ಹೇಗೆ ತಾನೆ ಸಾಧ್ಯ ?

ಕಾಶ್ಮೀರ, ಕಾಶಿ, ಬೆಂಗಳೂರು ಹಾಗೂ ಈಗಾಗಲೇ ವರದಿಯಾಗುತ್ತಿರುವಂತೆ ಮುಂಬಯಿಯ ಪ್ರಕರಣಗಳಿಗೆ ಇಲ್ಲಿಯವರೆಗೂ ವಿದೇಶೀ ಮೂಲದ ಪಿತೂರಿಯನ್ನು ಶಂಕಿಸಲಾಗಿದೆಯೇ ವಿನಾ ಸಾಬೀತುಮಾಡಲು ಸಾಧ್ಯವಾಗಿಲ್ಲ. ರಾಜಕೀಯ ವ್ಯಕ್ತಿಗಳು ತಂತಮ್ಮ ಪ್ರತಿಷ್ಠೆಯನ್ನು ಸ್ಥಾಪಿಸಿಕೊಳ್ಳಲು ಇಂಥ ಪಂದ್ಯಗಳನ್ನಾಡುತ್ತಾರೆ ಎಂಬ ಗುಮಾನಿಯೂ ಇದೆ. ಇನ್ನು ಮುಂಬಯಿಯ ಜನಸಾಮಾನ್ಯರು ಹೇಗೆ ನಿಭಾಯಿಸಿದರು ಎಂದು ಶಹಭಾಶ್‌ಗಿರಿ ನೀಡುವ, ಷೇರು ಮಾರುಕಟ್ಟೆ ಮಣಿಯಲಿಲ್ಲವೆಂದು ಬೆನ್ನು ತಟ್ಟಿಕೊಳ್ಳುವ ಷೇರುಪೇಟೆಯ ಸಟ್ಟಾ ಜೂಜುಕೋರರು ಮುಂತಾದವರು ನಿರಂತರ ಒದರುವುದನ್ನು ಕೇಳಿದರೆ ವಾಕರಿಕೆ ಬರುತ್ತದೆ. ಬೆಳಿಗ್ಗೆ ಕೂಲಿಮಾಡದಿದ್ದರೆ ರಾತ್ರಿ ಊಟವಿಲ್ಲದ ಬಡಪಾಯಿ ಕೂಲಿ ಕಾರ್ಮಿಕರೇ ತುಂಬಿರುವ ಆ ಬಂಡವಾಳಶಾಹಿಯ ಭದ್ರಕೋಟೆಯಲ್ಲಿ ಈ ಪಾಪದವು ಭಯೋತ್ಪಾದಕರ ಆತಂಕವನ್ನೂ ತಳ್ಳಿಹಾಕಿ ಕೆಲಸಕ್ಕೆ ಹಾಜರಾಗದೇ ಬೇರೇನು ಮಾಡಿಯಾರು ? ಹಸಿವು ಮತ್ತು ಭಯೋತ್ಪಾದಕರ ಕೈಲಿ ಸಾವಿನ ನಡುವೆ ಆಯ್ಕೆ ಅಷ್ಟು ಸುಲಭದ್ದೆ ? ಹೌದು, ಮುಂಬಯಿ ನಗರವಾಸಿಗಳು ಇಂತಹ ದುಃಖದ ಸಮಯದಲ್ಲೂ ಅನ್ಯೋನ್ಯತೆಯನ್ನು ಮರೆದು ಜಾತಿ ಮತ ಭೇದವಿಲ್ಲದೇ ಮಾನವೀಯತೆಯನ್ನು ಜಗಮೆಚ್ಚುವಂತೆ ಪ್ರಕಟಿಸಿದ್ದಾರೆ. ಭಯೋತ್ಪಾದಕರು ಕೆಲವರೇ. – ಅವರಿಗೆ ಆಶ್ರಯನೀಡಿ, ತಲೆಮರೆಸಿಕೊಳ್ಳಲು ನೆರವಾಗುವ ಮತ್ತೆ ಕೆಲವರು ಸಂಪನ್ನರು ನಮ್ಮ ಮಧ್ಯೆಯೇ ಇದ್ದಾರೆ. ಈ ಕೆಲವರನ್ನು ಸುತ್ತುವರಿದ ನಾಗರಿಕ ಸಮಾಜ, ಇಂಥ ಬೆಳವಣಿಗೆಗಳನ್ನು ಸೂಕ್ಷ್ಮವಾಗಿ ಗಮನಿಸಲು ಪೊಲೀಸರಿಗಿಂತ ಸಮರ್ಥರು. ಬೇಹುಗಾರಿಕೆಯ ಎಲ್ಲಾ ಜವಾಬ್ದಾರಿಯನ್ನು ಕೆಲವೇ

೮ನೇ ಪುಟಕ್ಕೆ




ಸಂಪುಟ-೮ ಸಂಚಿಕೆ-೧ ಆಗಸ್ಟ್ ೨೦೦೬

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಸ್. ಪಾರ್ಥಸಾರಥಿ
ಟಿ. ಶ್ರೀನಿವಾಸರಾಜು
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು – ೫೬೦ ೦೫೮
ದೂರವಾಣಿ : ೨೮೯೭೪೨೬

**ಹೊಸತು ಕಚೇರಿಯ ವಿಳಾಸ**




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೯೫
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು – ೫೬೦ ೦೦೧
ದೂರವಾಣಿ : ೩೦೫೭೮೦೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
**e-mail : navakarnataka@vsnl.com**
**website : www.navakarnatakabooks.com**


# ಹಳಿ ತಪ್ಪುತ್ತಿರುವ ಯುಪಿಎ ಸರ್ಕಾರ

ಸಂಪಾದಕೀಯ

ಅಧಿಕಾರ ವಹಿಸಿಕೊಂಡ ಕೇವಲ ೨೪ ತಿಂಗಳ ಅವಧಿಯೊಳಗಾಗಿ ಕೇಂದ್ರ ಸರಕಾರ ಅತಂತ್ರ ಪರಿಸ್ಥಿತಿ ತಲುಪುತ್ತಿದೆ. ಕೃಷಿ, ಹಣಕಾಸು, ಶಿಕ್ಷಣ, ಕೈಗಾರಿಕೆ, ವಿದೇಶಾಂಗ ನೀತಿಗಳಂತಹ ಅತಿ ಪ್ರಮುಖ ಕ್ಷೇತ್ರಗಳಲ್ಲಿ ಉಂಟಾಗಿರುವ ಬಿಕ್ಕಟ್ಟಿನಿಂದಾಗಿ ಎಲ್ಲ ಜನವಿಭಾಗಗಳು, ಅದರಲ್ಲೂ ರೈತಾಪಿ ಮತ್ತು ಕೆಳವರ್ಗದ ಜನರು ತತ್ತರಿಸಿಹೋಗಿದ್ದಾರೆ. ಬೆಲೆ ಏರಿಕೆ, ನಿರುದ್ಯೋಗ ಇವೇ ಮೊದಲಾದ ಸಮಸ್ಯೆಗಳು ಮುಗಿಲುಮುಟ್ಟುತ್ತಿವೆ. ಸಮಸ್ಯೆಗಳನ್ನು ಬಗೆಹರಿಸಲಾಗದೆ ಇಡೀ ಆಡಳಿತ ವ್ಯವಸ್ಥೆ ಕಂಗೆಟ್ಟುಕೂತಿದೆ. ಜಾಗತೀಕರಣ, ಉದಾರೀಕರಣ ಮತ್ತು ಖಾಸಗೀಕರಣ ನೀತಿಗಳನ್ನು ಪಟ್ಟುಬಿಡದೆ ಅನುಸರಿಸುತ್ತಿರುವ ಕಾಂಗ್ರೆಸ್ ಪಕ್ಷವು ರಾಷ್ಟ್ರವನ್ನು ಅಧೋಗತಿಯತ್ತ ಕೊಂಡೊಯ್ಯುತ್ತಿದೆ. ಎನ್‌ಡಿಎ ಸರ್ಕಾರದ ''ಭಾರತ ಪ್ರಕಾಶಿಸುತ್ತಿದೆ'' ಘೋಷಣೆಗೆ ಪ್ರತಿಕ್ರಿಯಿಸಿದಂತೆಯೇ ಜನಸಾಮಾನ್ಯರು ಈಗ ಕಾಂಗ್ರೆಸ್ ಪಕ್ಷದ ''ಶ್ರೀಸಾಮಾನ್ಯನಿಗಾಗಿ ಸರ್ಕಾರ'' ಎಂಬ ಘೋಷಣೆಯ ಪೊಳ್ಳುತನವನ್ನು ಮನಗಾಣುತ್ತಿದ್ದಾರೆ. ರಾಷ್ಟ್ರದ ಉಜ್ವಲ ಸಾಮ್ರಾಜ್ಯಶಾಹಿ ವಿರೋಧಿ ಪರಂಪರೆಗೆ ತಿಲಾಂಜಲಿಯಿತ್ತಿರುವ ಕಾಂಗ್ರೆಸ್ ಪಕ್ಷವು ರಾಷ್ಟ್ರದ ಹಿತಾಸಕ್ತಿಗಳನ್ನು ಅಮೆರಿಕಾದ ತೆಕ್ಕೆಗೆ ಒಪ್ಪಿಸುತ್ತಿದೆ. ವಿಶ್ವಬ್ಯಾಂಕ್ ಮತ್ತು ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆಗಳ ಆಣತಿಯಂತೆ ಜಾಗತೀಕರಣ, ಉದಾರೀಕರಣ ಹಾಗೂ ಖಾಸಗೀಕರಣಗಳಂತಹ ಪ್ರತಿಗಾಮಿ ನೀತಿಗಳನ್ನು ಜನತೆಯ ಮೇಲೆ ಹೇರುತ್ತಿರುವ ಯಾವುದೇ ಸರ್ಕಾರದಿಂದ ಇನ್ನಾವ ಬಗೆಯ ವಿದೇಶಾಂಗ ನೀತಿಯನ್ನು ನಿರೀಕ್ಷಿಸಲು ಸಾಧ್ಯ?

ಆಂಧ್ರ ಮತ್ತು ಕರ್ನಾಟಕ ರಾಜ್ಯಗಳ ರೈತರಂತೆ ವಿದರ್ಭದ (ಮಹಾರಾಷ್ಟ್ರ) ಸಾವಿರಾರು ರೈತರು ಸಾಲದ ಹೊರೆ ತಾಳಲಾರದೆ ಆತ್ಮಹತ್ಯೆ ಮಾಡಿಕೊಂಡಿದ್ದಾರೆ. ಅಲ್ಲಿನ ಆತ್ಮಹತ್ಯೆ ಸರಣಿ ಇಂದು ನಿನ್ನೆಯದಲ್ಲ, ಅದು ಕೆಲವು ದಶಕಗಳಿಂದಲೂ ಜರುಗುತ್ತಿದೆ. ಜಾಗತೀಕರಣ ನೀತಿಯ ರೂವಾರಿ ಪ್ರಧಾನಿ ಮನಮೋಹನ್ ಸಿಂಗ್ ಅವರು ಇತ್ತೀಚೆಗೆ ವಿದರ್ಭಕ್ಕೆ ಭೇಟಿ ಇತ್ತದ್ದು ಈ ಹಿನ್ನೆಲೆಯಲ್ಲಿ. ಅಲ್ಲಿನ ರೈತರ ಬವಣೆಯನ್ನು ಕಣ್ಣಾರೆ ವೀಕ್ಷಿಸಿದ ಪ್ರಧಾನಿಯವರು ೩,೭೫೦ ಕೋಟಿ ರೂ.ಗಳ ಪರಿಹಾರ ನಿಧಿ ಘೋಷಿಸಿ ಆ ದುಃಖತಪ್ತ ಜನರಿಗೆ ಸಾಂತ್ವನ ನೀಡುವ ಪ್ರಯತ್ನವನ್ನೇನೋ ಮಾಡಿದ್ದಾರೆ, ನಿಜ. ಸ್ವತಃ ಆರ್ಥಿಕ ತಜ್ಞರೆಂದು ಖ್ಯಾತಿ ಗಳಿಸಿರುವ ಮನಮೋಹನ್ ಸಿಂಗ್ ಅವರು ಆ ಪ್ರದೇಶದಲ್ಲಿನ ಕೃಷಿಕ್ಷೇತ್ರದ ಮೂಲಭೂತ ಸಮಸ್ಯೆಗಳ ಆಳಕ್ಕೆ ಹೋಗದೆ, ತಕ್ಷಣಕ್ಕೆ ರೈತರಿಗೆ ಸ್ವಲ್ಪವೂ ಪ್ರಯೋಜನವಾಗದ ಈ ಅಲ್ಪ ಪರಿಹಾರ ನಿಧಿಯನ್ನು ಘೋಷಿಸಿ ಅಲ್ಲಿನ ಒಟ್ಟಾರೆ ಕೃಷಿ ವ್ಯವಸ್ಥೆಯ ಪುನರ್‌ನಿರ್ಮಾಣದ ಬಗೆಗೆ ಯಾವ ನಿರ್ದಿಷ್ಟ ಸಲಹೆಗಳನ್ನೂ ನೀಡದೆ ಕೇವಲ ಒಂದು ಬಂಡವಾಳಶಾಹಿ ಪಕ್ಷದ ಪ್ರತಿನಿಧಿಯಂತೆ ವರ್ತಿಸಿದ್ದಾರೆ ಇದುವರೆಗಿನ ಸರ್ಕಾರಗಳು ಪಾಲಿಸಿಕೊಂಡುಬಂದಿರುವ ಕೃಷಿ ನೀತಿಯಿಂದಲೇ ಈ ಎಲ್ಲ ದುರಂತಗಳೂ ಸಂಭವಿಸಿವೆ ಎಂಬುದು ಈ ಮಹನೀಯರಿಗೆ ತಿಳಿಯದ ವಿಷಯವೇನಲ್ಲ. ಕಾರ್ಲ್ ಮಾರ್ಕ್ಸ್ ಮತ್ತು ಎಂಗಲ್ಸ್ ತಮ್ಮ 'ಕಮ್ಯುನಿಸ್ಟ್ ಪ್ರಣಾಳಿಕೆ' ಎಂಬ ಕೃತಿಯಲ್ಲಿ 'ಪ್ರತಿಗಾಮಿ ಸಮಾಜವಾದ'ದ ಬಗೆಗೆ ಪ್ರಸ್ತಾಪಿಸುತ್ತ, ''ಬಂಡವಾಳಶಾಹಿಯ ಭಾಗವಾಗಿರುವ ಕೆಲವರು ಹಾಲಿ ಅಸ್ತಿತ್ವದಲ್ಲಿರುವ ಬಂಡವಾಳಶಾಹಿ ಸಮಾಜವನ್ನು ಮುಂದುವರೆಸಿಕೊಂಡೇ ಹೋಗುವ ನಿಟ್ಟಿನಲ್ಲಿ ಸಮಾಜದಲ್ಲಿನ ಕುಂದುಕೊರತೆಗಳನ್ನು ನಿವಾರಿಸಲು ಆಸಕ್ತರಾಗಿರುತ್ತಾರೆ. ಇಂಥವರಲ್ಲಿ ಆರ್ಥಿಕ ತಜ್ಞರು, ದಾನಶೀಲರು, ಮಾನವೀಯ ಅನುಕಂಪವುಳ್ಳವರು, ಧರ್ಮಸಂಸ್ಥೆಗಳನ್ನು ನಡೆಸುವವರು ಮೊದಲಾದ ಸುಧಾರಣಾವಾದಿಗಳು ಪರಿಷ್ಕರಣವಾದಿಗಳು ಇರುತ್ತಾರೆ. ಇವರಾರೂ ಸಮಸ್ಯೆಗಳ ಬೇರುಗಳನ್ನು ಅರಸಿಹೋಗುವುದಿಲ್ಲ. ಮೂಲಭೂತ ಬದಲಾವಣೆ ಬಯಸದ ಇವರೆಲ್ಲರೂ ವಾಸ್ತವದಲ್ಲಿ ಕ್ರಾಂತಿಯ ವಿರೋಧಿಗಳು'' ಎಂಬುದಾಗಿ ವ್ಯಾಖ್ಯಾನಿಸುತ್ತಾರೆ. ನಮ್ಮ ಪ್ರಧಾನಿಯವರು ಈ 'ಗಣ್ಯ'ರ ಗುಂಪಿಗೆ ಸೇರಲು ಎಲ್ಲ ಅರ್ಹತೆಗಳನ್ನು ಹೊಂದಿರುವ ವ್ಯಕ್ತಿ ಎಂಬುದಾಗಿ ಮತ್ತೊಮ್ಮೆ ಸ್ಪಷ್ಟವಾಗಿದೆ.

ಹೆಚ್ಚು ಸಾಲ ನೀಡುವುದರಿಂದಾಗಲೀ, ಬಡ್ಡಿದರ ಕಡಿಮೆ ಮಾಡುವುದರಿಂದಾಗಲೀ ರೈತರ ಸಂಕಷ್ಟಗಳು ನಿವಾರಣೆ ಯಾಗುವುದಿಲ್ಲ. ಬದಲು, ರೈತರ ಸಾಲದ ಹೊರೆ ಇನ್ನಷ್ಟು ಹೆಚ್ಚಾಗುತ್ತದೆ. ಪರಿಣಾಮ ಇನ್ನೂ ಹೆಚ್ಚಿನ ಸಂಖ್ಯೆಯಲ್ಲಿ ಅವರು ಆತ್ಮಹತ್ಯೆಗೆ ಮೊರೆಹೋಗುವುದನ್ನು ತಪ್ಪಿಸಲಾಗದು. ಬಡರೈತರ ಬವಣೆಗಳು ನಿವಾರಣೆಯಾಗಬೇಕೆಂದಾದರೆ ಅವರು ಬೆಳೆದ ದವಸಧಾನ್ಯಗಳಿಗೆ ಸೂಕ್ತ ಬೆಲೆ ದೊರಕುವಂತಾಗಬೇಕು. ಉತ್ತಮ ಬೀಜ, ಗೊಬ್ಬರ, ಕ್ರಿಮಿನಾಶಕಗಳು ಸುಲಭ ದರದಲ್ಲಿ ದೊರೆಯುವ ನಿಟ್ಟಿನಲ್ಲಿ ಹೊಸ ಕೃಷಿನೀತಿಯನ್ನು ಜಾರಿಗೆ ತರಬೇಕು. ಮಧ್ಯವರ್ತಿಗಳ ಹಾವಳಿ, ಬೃಹತ್ ಕಂಪನಿಗಳ ದಾಂಧಲೆಗಳಿಂದ ಅವರು ಮುಕ್ತರಾಗಲು ಸರ್ಕಾರ ನೆರವಾಗಬೇಕು. ವಿದರ್ಭ, ಕರ್ನಾಟಕ ಮತ್ತು ಆಂಧ್ರಪ್ರದೇಶ ರಾಜ್ಯಗಳ ರೈತರ ಸಮಸ್ಯೆಗಳ ಒಳಹೊಕ್ಕು ನೋಡಿದರೆ ಹಸಿರುಕ್ರಾಂತಿಯ ಪೊಳ್ಳುತನ ಅರ್ಥವಾದೀತು. ಇಂದು ಕೃಷಿಕ್ಷೇತ್ರವು ಹೆಚ್ಚು ವಿಳಂಬವಿಲ್ಲದೆ ಸ್ವಾವಲಂಬನೆ ಸಾಧಿಸುವ ಅಗತ್ಯವಿದೆ. ರೈತರಿಗೆ ನಿಗದಿತ ವರಮಾನ ದೊರಕುವಂತಾಗಬೇಕಿದೆ. ಆದರೆ, ಇದಕ್ಕೆ ತದ್ವಿರುದ್ಧವಾಗಿ ಸರ್ಕಾರವು ಗುತ್ತಿಗೆ ಬೇಸಾಯ, ಅಗ್ಗದ ಬೆಲೆಯ ಕೃಷಿ ಸರಕುಗಳ ಆಮದು ನೀತಿ, ಬಹುರಾಷ್ಟ್ರೀಯ ಬೀಜದ ಕಂಪನಿಗಳಿಗೆ ಪ್ರೋತ್ಸಾಹ ಇವೇ ಮೊದಲಾದ ರೈತವಿರೋಧಿ ಕ್ರಮಗಳಿಗೆ ಒತ್ತು ನೀಡುತ್ತಿದೆ. ಮೇಲಾಗಿ, ಬೃಹತ್ ಕಂಪನಿಗಳು ಕೃಷಿಕ್ಷೇತ್ರಕ್ಕೂ ಕಾಲಿಟ್ಟಿವೆ. ಬಡರೈತರಿಗೆ ಈ ಪೈಪೋಟಿಯಲ್ಲಿ ಭಾಗವಹಿಸಲು ಹೇಗೆ ತಾನೆ ಸಾಧ್ಯ ?

ಕೈಗಾರಿಕೆ, ಬ್ಯಾಂಕಿಂಗ್ ಮತ್ತು ವಿಮೆ ಕ್ಷೇತ್ರಗಳೂ ಹತ್ತಿ ಉರಿಯುತ್ತಿವೆ. ಅಲ್ಲಿನ ಕಾರ್ಮಿಕ ಸಂಘಗಳು ಉಗ್ರ ಹೋರಾಟಗಳನ್ನು ಹಮ್ಮಿಕೊಂಡು ಉದಾರೀಕರಣ, ಖಾಸಗೀಕರಣ ನೀತಿಯನ್ನು ವಿರೋಧಿಸುತ್ತಿವೆ. ಎಡ ಪಕ್ಷಗಳ ಪ್ರತಿರೋಧ ಮತ್ತು ಅವು ಮುಂದಿಟ್ಟ ಪರ್ಯಾಯ ವಿಧಾನಗಳನ್ನು ಕಡೆಗಣಿಸಿ ಯುಪಿಎ ಸರ್ಕಾರ ಪೆಟ್ರೋಲ್-ಡೀಸೆಲ್ ದರಗಳನ್ನು ಏರಿಸಿದೆ. ಇದರಿಂದಾಗಿ ರಾಷ್ಟ್ರದ ಇಡೀ ಆರ್ಥಿಕತೆ ತಲ್ಲಣಗೊಂಡಿದೆ. ಬೆಲೆಗಳು

ಗಗನಕ್ಕೇರತೊಡಗಿವೆ. ಜನಸಾಮಾನ್ಯರ ಬದುಕು ದುಸ್ತರಗೊಂಡಿದೆ. ಷೇರುಪೇಟೆ ಎಂಬ ಜೂಜುಕಟ್ಟೆಯ ಏರಿಳಿತಗಳಿಗೆ ಕೂಡಲೇ ಸ್ಪಂದಿಸುವ ವಿತ್ತ ಸಚಿವ ಚಿದಂಬರಂ ಜನಸಾಮಾನ್ಯರ ಹಿತಾಸಕ್ತಿಗಳಿಗೆ ಪೂರಕವಾಗಿರುವ ಈ ಬೆಳವಣಿಗೆಗಳ ಬಗ್ಗೆ ದಿವ್ಯ ನಿರ್ಲಕ್ಷ್ಯ ತಳೆದಿದ್ದಾರೆ.

ಕಾಶ್ಮೀರ ಮತ್ತು ಅಸ್ಸಾಂ ರಾಜ್ಯಗಳಲ್ಲಿ ಭಯೋತ್ಪಾದಕರ ಚಟುವಟಿಕೆಗಳು ದಿನೇ ದಿನೇ ಹೆಚ್ಚುತ್ತಿವೆ. ಮುಂಬಯಿ ನಗರವಂತೂ ಭಯೋತ್ಪಾದಕತೆಯ ತವರೂರು ಎಂಬಂತೆ ರೂಪುಗೊಳ್ಳುತ್ತಿದೆ. ಇದೇ ಜುಲೈ ೧೧ರ ಸರಣಿ ಬಾಂಬು ಸ್ಫೋಟಗಳು ಇಡೀ ರಾಷ್ಟ್ರವನ್ನೇ ತಲ್ಲಣಗೊಳಿಸಿದೆ. ಅಲ್ಲಿನ ಜನಜೀವನ ಅಸ್ತವ್ಯಸ್ತಗೊಂಡಿದೆ. ಮಹಾರಾಷ್ಟ್ರ ಸರ್ಕಾರ ಈ ದುರ್ಘಟನೆಯ ಜವಾಬ್ದಾರಿಯನ್ನು ತಾನೇ ಹೊರಬೇಕು. ಸಿಮಿ, ಹಿಸ್ಬುಲ್, ಲಷ್ಕರ್-ಇ-ತಾಯ್ಬಗಳಂತಹ ವಿದೇಶಿ ಮೂಲದ ಮುಸ್ಲಿಂ ಭಯೋತ್ಪಾದಕ ಸಂಘಟನೆಗಳು ಒಂದು ಕಡೆಯಾದರೆ, ಅದರ ತದ್ರೂಪು ಎನಿಸಿರುವ ಶಿವಸೇನೆ, ಭಜರಂಗದಳ, ಶ್ರೀರಾಮಸೇನೆ ಮುಂತಾದ ಹಿಂದೂ ಕೋಮುವಾದಿ ಸಂಘಟನೆಗಳೂ ಆ ಬೃಹತ್ ನಗರದಲ್ಲಿ ಸಕ್ರಿಯವಾಗಿವೆ. ಅವರ ದುಷ್ಕೃತ್ಯಗಳು ಎಷ್ಟೋ ವೇಳೆ ಒಂದಕ್ಕೊಂದು ಪೂರಕವಾಗಿರುತ್ತವೆ. ಜನರ ನಡುವೆ ತಮ್ಮ ಪ್ರಭಾವ ಕುಗ್ಗಿದಾಗ ಶಿವಸೇನೆ ಭಜರಂಗದಳದಂತಹ ಪ್ರತಿಗಾಮಿ ಶಕ್ತಿಗಳು ಕೋಮುಗಲಭೆ ಹುಟ್ಟುಹಾಕಿ ರಾಜಕೀಯ ಲಾಭ ಪಡೆಯಲು ಹವಣಿಸುತ್ತಾರೆ. ಭೂಗತ ದೊರೆಗಳು ಈ ಎಲ್ಲ ಸಮಾಜವಿರೋಧಿ ಕೃತ್ಯಗಳಲ್ಲಿ ಶಾಮೀಲಾಗಿರುತ್ತಾರೆ. ಅವರು ಆಳುವ ವರ್ಗದ ಭಾಗವೂ ಆಗಿರುತ್ತಾರೆ. ಜಾತಿ, ಕೋಮು ಎಲ್ಲವನ್ನೂ ಮೀರಿ ಅನೇಕರು ಭೂಗತ ಚಟುವಟಿಕೆಗಳಲ್ಲಿ ಭಾಗಿಯಾಗಿದ್ದಾರೆ. ರಾಜಕೀಯ ಧುರೀಣರ ಕೃಪೆ ಇಲ್ಲದೆ ಇಂತಹ ಚಟುವಟಿಕೆಗಳು ಜರುಗಲು ಸಾಧ್ಯವಿಲ್ಲ, ಇದೊಂದು ದೊಡ್ಡ ಚಕ್ರವ್ಯೂಹ. ಇಂತಹ ಶಕ್ತಿಗಳನ್ನು ನಿರ್ದಾಕ್ಷಿಣ್ಯವಾಗಿ ಬಗ್ಗುಬಡಿಯಲು ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ವಿಫಲವಾಗಿರುವುದು ಶೋಚನೀಯ.

ಇನ್ನು ರಾಷ್ಟ್ರದ ಎರಡು ಪ್ರಮುಖ ಬಂಡವಾಳಶಾಹಿ ಪಕ್ಷಗಳಾದ ಕಾಂಗ್ರೆಸ್ ಮತ್ತು ಭಾಜಪ ತಮ್ಮದೇ ಆಂತರಿಕ ಕಚ್ಚಾಟಗಳಲ್ಲಿ ಮುಳುಗಿಹೋಗಿವೆ.. ಉತ್ತರಪ್ರದೇಶವು ತನ್ನ ಭದ್ರಕೋಟೆಯೆಂದು ಭಾಜಪ ಕೊಚ್ಚಿಕೊಳ್ಳುವ ಕಾಲವೊಂದಿತ್ತು. ಈಗ ಆ ಪಕ್ಷವು ಅಲ್ಲಿ ಹೇಳಹೆಸರಿಲ್ಲದಂತಾಗಿದೆ. ಒಂದಾದಮೇಲೆ ಒಂದರಂತೆ ಎಲ್ಲ ಬಗೆಯ ಹಗರಣಗಳಲ್ಲಿ ಮುಳುಗಿಹೋಗಿರುವ ಭಾಜಪ ಆರೆಸ್ಸೆಸ್‌ನ ಆಣತಿಯಂತೆ ತನ್ನ ಪೂರ್ವಾಶ್ರಮಕ್ಕೆ ಹಿಂತಿರುಗದೆ ವಿಧಿಯಿಲ್ಲದಂತಾಗಿದೆ. ರಾಹುಲ್ ಮಹಾಜನ್‌ನಂತಹ ಒಬ್ಬ ವ್ಯಕ್ತಿಯನ್ನು ಪಕ್ಷದ ಭವಿಷ್ಯದ ನಾಯಕನನ್ನಾಗಿ ಬಿಂಬಿಸುವ ಮಟ್ಟಕ್ಕೆ ಹೋಗಿರುವ ಭಾಜಪದ ದುರವಸ್ಥೆಯನ್ನು ಊಹಿಸಿಕೊಳ್ಳುವುದು ಕಷ್ಟವೇನಲ್ಲ. ಪ್ರಮೋದ್ ಮಹಾಜನ್ ಅವರ ಕುಟುಂಬದವರ ಮೇಲೆ ಅಪಾರ ವ್ಯಾಮೋಹವಿರುವ, ಯಾವತ್ತಿಗೂ ರಾಮಾಯಣದ ಪಾರಿಭಾಷಿಕ ಶಬ್ದಗಳಲ್ಲಿಯೇ ರಾಜಕೀಯ ಆಗುಹೋಗುಗಳನ್ನು ಅರ್ಥೈಸುವ ಅಪೂರ್ವ ಪ್ರತಿಭೆಯಿರುವ ಅಟಲ್ ಅವರು, ಸದ್ಯದಲ್ಲಿ ರಾಹುಲ್ ಮಹಾಜನ್ ಎಂಬ ಹುಡುಗನಿಗೂ ಲಕ್ಷ್ಮಣನ ಅಥವಾ ಮರಿ ಲಕ್ಷ್ಮಣನ ಪಟ್ಟ ಕಟ್ಟುವುದರಲ್ಲಿ ಸಂಶಯವಿಲ್ಲ.

ಈ ಮಧ್ಯೆ ತೃತೀಯ ರಂಗದ ಮಾತೂ ಕೇಳಿಬರುತ್ತಿದೆ. ಅಂತೂ, ರಾಷ್ಟ್ರದ ರಾಜಕಾರಣದಲ್ಲಿ ಇದೊಂದು ನಿರ್ಣಾಯಕ ಘಟ್ಟ ಎಂದು ಹೇಳಬಹುದಾಗಿದೆ. ಯಾವೊಂದು ಬಂಡವಾಳಶಾಹಿ ಪಕ್ಷವೂ ತನ್ನ ಸ್ವಂತ ಶಕ್ತಿಯ ಆಧಾರದ ಮೇಲೆ ಅಧಿಕಾರಕ್ಕೆ ಬರಲಾಗದಿರುವ, ಇತರೆ ಪ್ರಾದೇಶಿಕ ಮತ್ತು ಜಾತಿ ಆಧಾರಿತ ಪಕ್ಷಗಳನ್ನು ಅವಲಂಬಿಸಬೇಕಾಗಿರುವ ಸನ್ನಿವೇಶ ಉದ್ಭವಿಸಿದೆ. ಜನಪರ ರಾಜಕೀಯದ ಮುನ್ನೋಟವಿಲ್ಲದ ಈ ಪಕ್ಷಗಳು ತಮ್ಮ ಎಂದಿನ ಅವಕಾಶವಾದಿತನವನ್ನು ಮೆರೆಯಲಿವೆ. ರಾಷ್ಟ್ರದ ಆಗುಹೋಗುಗಳಲ್ಲಿ ಮಹತ್ತರ ಪಾತ್ರ ವಹಿಸುತ್ತಿರುವ ಎಡ ಪಕ್ಷಗಳಿಗೂ ರಾಜಕೀಯವಾಗಿ ಇದೊಂದು ಸೂಕ್ಷ್ಮ ಸಂದರ್ಭವಾಗಿದ್ದು, ತಾವು ಅನುಸರಿಸಬೇಕಾದ ತಂತ್ರದ ಬಗ್ಗೆ ಎಚ್ಚರ ವಹಿಸಬೇಕಾಗಿದೆ. ಸೈದ್ಧಾಂತಿಕ ಗಟ್ಟಿತನವಿರುವ ಎಡ ಪಕ್ಷಗಳು ಕಳೆದ ಚುನಾವಣೆಯಲ್ಲಿ ಸಾಕಷ್ಟು ಸಂಸದೀಯ ಸ್ಥಾನಗಳನ್ನು ಪಡೆದಿದ್ದು, ಭಾಜಪವನ್ನು ದೂರವಿಡಬೇಕೆಂಬ ಉದ್ದೇಶಕ್ಕಿಂತ ಹೆಚ್ಚಾಗಿ, ಬೇರಾವ ಪರ್ಯಾಯವೂ ಇಲ್ಲದಿದ್ದ ಸಂದರ್ಭದಲ್ಲಿ ತಮ್ಮ ಪ್ರಜಾಪ್ರಭುತ್ವಾತ್ಮಕ ಜವಾಬ್ದಾರಿಯನ್ನು ನಿರ್ವಹಿಸುವ ಸಲುವಾಗಿ ಸರ್ಕಾರವನ್ನು ರಚಿಸಲು ಸಮರ್ಥವಿದ್ದ ಕಾಂಗ್ರೆಸ್ ಪಕ್ಷಕ್ಕೆ ಬೆಂಬಲ ನೀಡಬೇಕಾಗಿ ಬಂದದ್ದು ಎಲ್ಲರಿಗೂ ತಿಳಿದಿರುವ ವಿಷಯವೇ. ತನ್ನದೇ ಸರ್ಕಾರ ರಚಿಸುವಷ್ಟು ಸಂಖ್ಯೆಯಲ್ಲಿ ಲೋಕಸಭೆ ಸ್ಥಾನಗಳನ್ನು ಗಳಿಸಲಾಗದ ಕಾರಣ ಕಾಂಗ್ರೆಸ್ ಎಡಪಕ್ಷಗಳ ಬೆಂಬಲ ಕೋರಿದ್ದನ್ನು ಯಾರೂ ಮರೆಯಲಾಗದು. ಆನಂತರ ರಾಷ್ಟ್ರೀಯ ಕನಿಷ್ಠ ಕಾರ್ಯಕ್ರಮವನ್ನು ರೂಪಿಸುವುದೇ ಮೊದಲಾದ ಕೆಲವು ಷರತ್ತುಗಳ ಆಧಾರದ ಮೇಲೆ ಎಡ ಪಕ್ಷಗಳು ಸಹಕಾರ ನೀಡಲು ಒಪ್ಪಿಕೊಂಡ ಪರಿಣಾಮವಾಗಿ ಸರ್ಕಾರ ರಚನೆಯಾಯಿತು. ಬಂಡವಾಳಶಾಹಿ ಆರ್ಥಿಕ ನೀತಿಗಳ ಚೌಕಟ್ಟಿನಿಂದ ಹೊರಬರಲಾಗದ ಕಾಂಗ್ರೆಸ್ ಪಕ್ಷಕ್ಕೆ ತಾನೇ ಒಪ್ಪಿಕೊಂಡ ಸಾಮಾನ್ಯ ಕನಿಷ್ಠ ಕಾರ್ಯಕ್ರಮದ ಜನಪರ ಅಂಶಗಳನ್ನು ಕಾರ್ಯರೂಪಕ್ಕೆ ತರಲು ಸಾಧ್ಯವಾಗುತ್ತಿಲ್ಲ. ಅದು ತನ್ನ ವರ್ಗಗುಣದ ಮಿತಿಯನ್ನು ಮೀರಲಾಗದೆ ಹಪಹಪಿಸುತ್ತಿದೆ.

ಈ ಹಿನ್ನೆಲೆಯಲ್ಲಿ ರಾಷ್ಟ್ರದ ರಾಜಕಾರಣ ಮತ್ತೊಮ್ಮೆ ಹೊಸ ತಿರುವು ಪಡೆಯುವ ಸಾಧ್ಯತೆಗಳು ಹೆಚ್ಚುತ್ತಿವೆ. ಲಂಗುಲಂಗಾಮಿಲ್ಲದ ಜಾಗತೀಕರಣ, ಉದಾರೀಕರಣ ಮತ್ತು ಖಾಸಗೀಕರಣದಂತಹ ನೀತಿಗಳ ಫಲವಾಗಿಯೇ ಈ ಬಗೆಯ ಅನಿಷ್ಟಗಳೂ ಸಂಭವಿಸುತ್ತಿವೆ ಎಂಬ ಕನಿಷ್ಠ ಸೈದ್ಧಾಂತಿಕ ತಿಳಿವಳಿಕೆಯುಳ್ಳ ಎಲ್ಲ ಸಾಮ್ರಾಜ್ಯಶಾಹಿ ವಿರೋಧಿ ಮತ್ತು ಪ್ರಗತಿಪರ ಶಕ್ತಿಗಳೂ ಒಗ್ಗೂಡಿ ಹೋರಾಟಕ್ಕೆ ಇಳಿದರೆ ಮಾತ್ರ ಈ ನೆಲದಲ್ಲಿ ಬಂಡವಾಳಶಾಹಿ ಮಾರ್ಗವನ್ನು ವಿರೋಧಿಸುವ ಪ್ರಗತಿಪರ ಪರ್ಯಾಯವೊಂದು ಹುಟ್ಟಿಕೊಳ್ಳಲು ಸಾಧ್ಯವಿದೆ. ಇದನ್ನು ಆಗುಮಾಡುವ ಜವಾಬ್ದಾರಿ ಎಡ ಪಕ್ಷಗಳ ಮೇಲಿದೆ.


ತಿಂಗಳ ಪತ್ರಿಕೆ

ಹೊಸತು

ನೆನ್ನೆಯಿಂದ ನಾಳೆಗೆ ನಮ್ಮದು

ನವಕರ್ನಾಟಕ ಪ್ರಕಾಶನ





**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೨೫/- |
| ಮೂರು ವರ್ಷಕ್ಕೆ | ರೂ. ೩೦೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೮೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨




## ಮೀಸಲಾತಿ

**ಹಿಂ**ದುಳಿದ ವರ್ಗಗಳಿಗೆ ನೀಡಲಾಗಿದ್ದ ಮೀಸಲಾತಿಯನ್ನು ರದ್ದುಗೊಳಿಸಬೇಕೆಂಬುದರ ಪರವಾಗಿ ಈಗ ನಡೆಯುತ್ತಿರುವ ವಿದ್ಯಾರ್ಥಿಗಳ ಪ್ರತಿಭಟನೆಯ ಸಂದರ್ಭದಲ್ಲಿ ಮೀಸಲಾತಿಯ ಬಗ್ಗೆ ಖ್ಯಾತ ಚಿಂತಕ ಡಾ॥ ಸೀ. ಹೊಸಬೆಟ್ಟು ಇವರ ವಿಚಾರ ಏನು ಎಂಬುದು ಪ್ರಸ್ತುತವೆನಿಸುತ್ತದೆ.

ತಮ್ಮ ಸಮಾಜದ ಪ್ರತಿಭಾವಂತ ವ್ಯಕ್ತಿಗಳನ್ನು ಸನ್ಮಾನಿಸುವ ಸಲುವಾಗಿ ಏರ್ಪಡಿಸಿದ್ದ ಬ್ರಾಹ್ಮಣರ ಒಂದು ಕೂಟದಲ್ಲಿ, ಸನ್ಮಾನವನ್ನು ಸ್ವೀಕರಿಸುತ್ತ ಡಾ॥ ಸೀ. ಹೊಸಬೆಟ್ಟು ಇವರು ನೆರೆದಿದ್ದ ಸ್ವಜಾತಿ ಬಾಂಧವರಿಗೆ ಇತ್ತ ಕಿವಿಮಾತು ಹೀಗಿತ್ತು :

"ಸರಕಾರದ ಆರಕ್ಷಣೆಯ ನೀತಿಯಿಂದಾಗಿ ನಮ್ಮ ಮಕ್ಕಳಿಗೆ ಕಾಲೇಜು ಶಿಕ್ಷಣದಲ್ಲಿ, ಮುಂದಿಗೆ ಸರಕಾರಿ ನೌಕರಿಯಲ್ಲಿ ಅನ್ಯಾಯವಾಗುತ್ತಿದೆ. ಈ ಆಪಾದನೆ ಮೇಲ್ನೋಟಕ್ಕೆ ಸತ್ಯ ಎಂದೆನಿಸುತ್ತದೆ. ಯಾರ ತಪ್ಪಿಗೆ, ಯಾವ ತಪ್ಪಿಗೆ ಎಂತಹ ಶಿಕ್ಷೆ? ತಪ್ಪು ನಮ್ಮದೇ – ನಮ್ಮ ಪೂರ್ವಜರದ್ದು! ಸಹಸ್ರಾರು ವರ್ಷಗಳ ಕಾಲದಿಂದ ನಾವು ಹಿಂದುಳಿದ ವರ್ಗಗಳಿಗೆ ನೀಡುತ್ತಿದ್ದ ಆ ಶೋಷಣೆಯೇ ಆ ತಪ್ಪು. ಇದನ್ನು ಒಪ್ಪಿಕೊಳ್ಳುವ ಪ್ರಾಮಾಣಿಕತೆ ನಮ್ಮಲ್ಲಿರಬೇಕು. ಆರಕ್ಷಣೆಯ ರೂಪದಲ್ಲಿ ನಾವು ಆ ತಪ್ಪಿಗಾಗಿ ಮಾಡುತ್ತಿರುವ ಕಿಂಚಿತ್ ಪ್ರಾಯಶ್ಚಿತ್ತವೇ ಆ ಶಿಕ್ಷೆ. ಆದರೆ ಶಿಕ್ಷೆಯ ಅನುಭೋಗ ಎಷ್ಟು ಸಮಯದವರೆಗೆ ? ಎಂಬ ಪ್ರಶ್ನೆ ನಮ್ಮ ಮುಂದಿದೆ. ಮೀಸಲಾತಿಯ ನೀತಿಯು ಪ್ರಾಮಾಣಿಕವಾಗಿ ಕಾರ್ಯಗತಗೊಳ್ಳುವಂತೆ ನಾವು ಸಹಕರಿಸಿದರೆ, ಈ ತಾರತಮ್ಯ ಕೆಲವೇ ತಲೆಮಾರುಗಳಲ್ಲಿ ಅಂತ್ಯಗೊಳ್ಳುವ ಸಾಧ್ಯತೆ ಇದೆ. ಅವರೆಗೆ ನಾವು ತಾಳ್ಮೆವಹಿಸಬೇಕು. ನಮ್ಮಲ್ಲಿ ಆ ಉದಾರತೆ ಇರಬೇಕು. ಈ ಉದಾರತೆ ತೋರಿಸುವ ಸ್ಥಿತಿಯಲ್ಲಿ ನಾವು ಇದ್ದೇವೆ. ನಾವು ಸೃಷ್ಟಿಸಿಕೊಂಡಿದ್ದ ಅನುಕೂಲಕರ ವಾತಾವರಣದಿಂದಾಗಿ ನಮ್ಮವರು ಪ್ರತಿಭಾವಂತರಾಗಿದ್ದಾರೆ. ಪ್ರತಿಭೆಯನ್ನು ಯಾರಿಂದಲೂ ಹತ್ತಿಕ್ಕಲು ಸಾಧ್ಯವಿಲ್ಲ. ಇಂತಹ ಅನುಕೂಲಕರ ವಾತಾವರಣದ ಅವಕಾಶ ಹಿಂದುಳಿದವರಿಗೂ ಒದಗಿಸಿಕೊಡಬೇಕು. ಇದು ಮೀಸಲಾತಿಯಿಂದ ಮಾತ್ರ ಸಾಧ್ಯ. ಬಹುಸಂಖ್ಯಾತರಾದ ಹಿಂದುಳಿದ ವರ್ಗದಲ್ಲಿರುವ ಪ್ರತಿಭಾವಂತರ ಪ್ರತಿಭೆಯು ಅನಾವರಣಗೊಂಡು, ಎಲ್ಲರೂ ಕೈಜೋಡಿಸಿದಾಗ ಮಾತ್ರ ದೇಶವು ಬಲಿಷ್ಠವಾಗಲು ಸಾಧ್ಯ. ಆಗ ತಾನೇ ನಾವು ವಿಶ್ವದ ಇತರ ಸಮಾಜಗಳ ಮಧ್ಯೆ ತಲೆ ಎತ್ತಿ ನಡೆಯಲು ಸಾಧ್ಯ.

ಸಹಸ್ರಾರು ವರ್ಷಗಳಿಂದ ನಿರಂತರವಾಗಿ ನಡೆದು ಬಂದಿರುವ ಈ ಶೋಷಣೆಗೆ ಪ್ರಾಯಶ್ಚಿತ್ತದ ರೂಪದಲ್ಲಿ ನಾವು ಒಪ್ಪಿಕೊಳ್ಳುವ, ಕೇವಲ ಕೆಲವು ತಲೆಮಾರುಗಳ ತನಕ ನಡೆಯಬೇಕಾದ ಮೀಸಲಾತಿಯ ನೀತಿಯ ಗಡುವು ಅದೇನು ದೊಡ್ಡದು ? ತೋರಿಕೆಯಲ್ಲಿ ಕ್ಷಣಿಕ ಮಾತ್ರ"

ಮೀಸಲಾತಿಯ ನಿವಾರಣೆಗೆ ಮೀಸಲಾತಿಯೇ ಮದ್ದು – ಹೋಮಿಯೋಪಥಿ ಚಿಕಿತ್ಸೆಯ ತತ್ವದಂತೆ ಎಂಬ ಅರ್ಥ ಡಾ॥ ಸೀ. ಹೊಸಬೆಟ್ಟು ಇವರ ಮಾತಿನಲ್ಲಿ ಮೂಡಿ ಬರುತ್ತದೆ. ಮತ್ತು ಇದೇ ಶಾಂತಿಯುತ ದಾರಿ. ಅನ್ಯದಾರಿ ಹಿಂಸೆಗೆ ಮೂಲವಾದೀತು. ಮೀಸಲಾತಿಯು ದೇಶದ ಪ್ರಗತಿಗೆ ಮಾರಕವಲ್ಲ; ಅದು ಪೂರಕ. ಬಹುಸಂಖ್ಯಾಕರಾದ ಹಿಂದುಳಿದ ವರ್ಗದ ಜನರ ಪ್ರತಿಭೆಯನ್ನು ಈ ತನಕ ಹತ್ತಿಕ್ಕಿದ್ದ ಕಾರಣದಿಂದ ದೇಶವು ದುರ್ಬಲಗೊಂಡು ಪರಕೀಯರ ಆಕ್ರಮಣಕ್ಕೆ ಮತ್ತು ದಾಸ್ಯಕ್ಕೆ ತುತ್ತಾಗಿತ್ತು ಎಂಬುದು ಸತ್ಯವಿದಿತ.

*ಸುರತ್ಕಲ್* — *ಟಿ. ಸಿ. ಶ್ರೀಯಾಸ್*




ಜುಲೈ ೨೦೦೬ರ 'ಹೊಸತು' ಸಂಚಿಕೆಯಲ್ಲಿ ಪ್ರಕಟವಾದ ಡಾ॥ ರಹಮತ್ ತರೀಕೆರೆಯವರ 'ಈ ಸಾವುಗಳು ನ್ಯಾಯವೇ ?' ಎಂಬ ಲೇಖನ ನಮ್ಮನ್ನು ಚಿಂತನೆಗೆ ಹಚ್ಚುವ ಒಂದು ಉತ್ತಮ ಲೇಖನ. ಡಾ॥ ರಾಜಕುಮಾರ್ ನಿಧನಾನಂತರದ ಸನ್ನಿವೇಶಗಳನ್ನು ತುಂಬಾ ಸಮತೋಲನದ ದೃಷ್ಟಿಕೋನದಿಂದ ಲೇಖನವು ವಿಶ್ಲೇಷಿಸುತ್ತದೆ. 'ಸಮೂಹ'ದ ಮನಃಸ್ಥಿತಿಯನ್ನು ಮತ್ತು ಅಂತಹ ಮನಃಸ್ಥಿತಿಗಳು ರೂಪುಗೊಳ್ಳುವುದಕ್ಕೆ ಕಾರಣವಾಗುವ ಅಂಶಗಳನ್ನು ಲೇಖನ ಸರಿಯಾಗಿಯೇ ಗುರುತಿಸಿದೆ. ಹಾಗೆಯೇ, ನಾಯಕಾರಾಧನೆಯ ಸಂಸ್ಕೃತಿಯನ್ನು ಇನ್ನಷ್ಟು ಪ್ರಚುರಪಡಿಸಲಿಕ್ಕಾಗಿಯೇ ರಾಜ್‌ರ ನಿಧನದಂತಹ ಸನ್ನಿವೇಶಗಳನ್ನು ಬಳಸಿಕೊಳ್ಳುವ ಮರಿನಾಯಕರಿರುವುದನ್ನೂ ಗಮನಿಸಬೇಕು.

ತರೀಕೆರೆಯವರ ಭಾಷೆಯ ಬಗ್ಗೆ ಪ್ರತ್ಯೇಕವಾಗಿ ಉಲ್ಲೇಖಿಸಬೇಕೆನಿಸುತ್ತದೆ. ಇಂದು ತಾತ್ವಿಕ ಚರ್ಚೆಗಳಲ್ಲಿ ಕಂಡುಬರುವ ಭಾಷೆಯ ಜಿಗುಟುತನವಾಗಲೀ ಅನವಶ್ಯ ಸಂಕೀರ್ಣತೆಯಾಗಲೀ ಅವರಲ್ಲಿಲ್ಲ. ಮಾದರಿ ಭಾಷೆ ಅವರದು. ಅವರಿಗೆ ಅಭಿನಂದನೆಗಳು.

*ವಿಟ್ಲ* — *ಅಜಕ್ಕಳ ಗಿರೀಶ ಭಟ್*

ಈ ತಿಂಗಳ ಸಂಪಾದಕೀಯ ಮತ್ತು ಡಾ॥ ತರೀಕೆರೆಯವರ 'ಈ ಸಾವುಗಳು ನ್ಯಾಯವೇ ?' ಲೇಖನಗಳಿಂದ ನಾನು ತುಂಬಾ ಪ್ರಭಾವಿತನಾದೆ. ನಮ್ಮ ಸಮಾಜ ಮತ್ತು ಸರ್ಕಾರ, ಇವುಗಳಲ್ಲಿ ನಡೆಯುತ್ತಿರುವ ಘಟನೆಗಳು – ಅದರಿಂದ ಮುಗ್ಧ ಜನತೆಯ ಮೇಲೆ ಆಗುತ್ತಿರುವ ಹಿಂಸೆ – ಇವುಗಳನ್ನು ಪ್ರತಿದಿನವೂ ಅನುಭವಿಸುತ್ತಿರುವ ಜನರು ನಿಸ್ಸಹಾಯಕರಾಗಿರುವುದು ಯಾರಿಂದಲೂ ಬಿಡಿಸಲಾರದ ಸಮಸ್ಯೆ. ಅಭಿಮಾನಿಗಳ ಹೆಸರಿನಲ್ಲಿ ನಡೆಯುತ್ತಿರುವ ಅನಾಹುತಗಳನ್ನು ಡಾ॥ ರಹಮತ್ ಅವರು ಬಹು ಜಾಣ್ಮೆಯ ಪದಗಳನ್ನು ಉಪಯೋಗಿಸಿ – ಹೃದಯಕ್ಕೆ ಚುಚ್ಚುವಂತೆ ಮಾಡಿದ್ದಾರೆ. ಒಬ್ಬ ಕಲಾವಿದ – ಕೋಟ್ಯಧಿಪತಿಯಾಗಿ, ಆದಾಯತೆರಿಗೆ (ಕೋಟಿ ಹಣ) ಕೊಡದೆ ತಪ್ಪಿಸಿಕೊಂಡಾಗ, ಇಲಾಖೆಯವರು ಅವರ ಮೇಲೆ ಕೇಸುಹಾಕಿದಾಗ, ಅವರ ಅಭಿಮಾನಿಗಳು, ಬಹಿರಂಗ ಹೋರಾಟಕ್ಕಿಳಿಯುವುದು – ನಮ್ಮ ದೇಶದಲ್ಲಿ ಕಾಣುತ್ತದೆ. ಶ್ರೇಷ್ಠ ಕಲಾವಿದರನ್ನು ಅಭಿಮಾನದಿಂದ ಕಾಣುವುದು ಒಳ್ಳೆಯ ಸಂಸ್ಕೃತಿ. ಆದರೆ ಈ ಅಭಿಮಾನವನ್ನೇ, ದೇಶದ ಆಸ್ತಿಗಳನ್ನು ಸುಡುವುದು – ಇನ್ನು ಇತರೆ ರೀತಿಯಲ್ಲಿ ತಮ್ಮ ಅಭಿಮಾನವನ್ನು ವ್ಯಕ್ತಪಡಿಸುವುದು – ಸರಿಯೇ ? ಡಾ॥ ರಹಮತ್ ಅವರ ಲೇಖನ ಅಭಿಮಾನಿಗಳ ಕಣ್ಣು ತೆರೆಸಬಹುದೇ ? ಎಷ್ಟು ಜನರಲ್ಲಿ ಈ ಲೇಖನ ಪರಿಣಾಮ ಉಂಟು ಮಾಡಬಹುದು ?

*ತೀರ್ಥಹಳ್ಳಿ* — *ಎನ್. ಕೆಟ್ಟಪ್ಪಗೌಡ*

ಎಚ್. ಎಸ್. ದೊರೆಸ್ವಾಮಿಯವರ ಮುಖಪುಟ ಹೊತ್ತ ಜುಲೈ ತಿಂಗಳ 'ಹೊಸತು' ಬಹಳ ಆಕರ್ಷಕವಾಗಿತ್ತು. ಒಳಪುಟದ ಕೆ. ಎಸ್. ಸರೋದೆಯವರ ಚಿತ್ರ ಮನತಣಿಸಿದವು. ಈ ತಿಂಗಳು ಮತ್ತು ಸಂಪಾದಕೀಯಗಳು ಉಕ್ಕಿನ ಕಡ್ಲೆ ಇದ್ದಂತೆ ಮತ್ತೆ ಮತ್ತೆ ಓದಿ ಮೆಲುಕುಹಾಕುವಂತೆ ಇರುತ್ತವೆ. ಡಾ॥ ರಹಮತ್ ತರೀಕೆರೆಯವರ 'ಈ ಸಾವುಗಳು ನ್ಯಾಯವೇ ?' ಓದುತ್ತಾ ಓದುತ್ತಾ ತುಂಬಾ ದುಃಖವಾಯಿತು. ಅಣ್ಣಾವ್ರು ದೇಹದಿಂದ ತುಂಬಾ ದೂರವಾಗಿದ್ದರೂ ಸಹ ಅವರು ಎಲ್ಲರ ಹೃದಯದಲ್ಲಿದ್ದಾರೆ. 'ನಾವೆಷ್ಟು ಪೌರಪ್ರಜ್ಞರು ?' ನಿಜವಾಗಿಯೂ ಸಹ ಓದಿ ತಿಳಿಯಬೇಕಾದ ವಿಚಾರ. ನಮ್ಮ ನಿಮ್ಮ ನಡುವೆಯೇ ಇಂತಹ ಹಲವಾರು ಸನ್ನಿವೇಶಗಳನ್ನು ನೋಡುತ್ತಿರುತ್ತೇವೆ, ಅನುಭವಿಸುತ್ತಿದ್ದೇವೆ. 'ಹೆಣಕ್ಕೆ ಕೊಟ್ಟ ಹಣ' ಅರ್ಥಗರ್ಭಿತ. 'ಮರ ಅಮರ' ಎಂಬುದನ್ನು ಹಲವಾರು ಉದಾಹರಣೆ ಮೂಲಕ ತಿಳಿಸಿದ ವಿಜಯಾ ಶ್ರೀಧರರವರಿಗೆ ಧನ್ಯವಾದಗಳು. ತಿಳಿವು 'ಗವಾಕ್ಷ'ದ ವಿಚಾರ ಮಂಕುತಿಮ್ಮನ ಕಗ್ಗದ ಎರಡು ಕಗ್ಗಗಳಿಂದ ತಿಳಿದಂತೆ ಆಗಿದೆ. ಒಟ್ಟಿನಲ್ಲಿ ನನ್ನ ನೆಚ್ಚಿನ 'ಹೊಸತು' ಮುದ್ದಾಗಿ ಮನಮೋಹಕವಾಗಿ ಬರುತ್ತಿರುವುದು ಸಂತಸದ ವಿಚಾರ.

*ವಿಠಲಾಪುರ* — *ಪಾಂಡವಪುರ ಮೃತ್ಯುಂಜಯ*

'ಹೊಸತು'ವಿನ ಜುಲೈ ಸಂಚಿಕೆ ವೈವಿಧ್ಯಮಯ ವಿಷಯಗಳನ್ನು ತುಂಬಿಕೊಂಡು 'ಸರ್ವಗುಣ ಸಂಪನ್ನವಾಗಿದೆ. ಡಾ॥ ರಹಮತ್ ತರೀಕೆರೆ ಲೇಖನ ಮಾನವೀಯ ನೆಲೆಗಟ್ಟಿನ ವೈಚಾರಿಕ ಮತ್ತು ತಾರ್ಕಿಕ ವಿಶ್ಲೇಷಣೆಗಳನ್ನು ಒಳಗೊಂಡಿದೆ.

'ಬೊಜ್ಜು ನಿವಾರಣಾ ಉಪಾಖ್ಯಾನ' ಲೇಖನ ಓದಿ ನಕ್ಕಿದ್ದೇ ನಕ್ಕಿದ್ದು. ಶೈಲಿ ತುಂಬಾ ಲವಲವಿಕೆಯಿಂದ ಕೂಡಿತ್ತು. 'ನಾವೆಷ್ಟು ಪೌರಪ್ರಜ್ಞರು ?' ಲೇಖನ ಇಂದಿನ ಸಮಾಜದ ಸ್ಥಿತಿಗೆ ಹಿಡಿದ ಕನ್ನಡಿ. ಈ ಲೇಖನ ಓದಿ ಕೆಲವರ ಮನಃಪರಿವರ್ತನೆಯಾದರೆ ಸಾಕು. ಉಳಿದಂತೆ 'ಕಾವ್ಯಧಾರೆ'ಯಲ್ಲಿ ಹೊಸ ಹೊಸ ಶೈಲಿ, ವಿಷಯದ ಕವನಗಳು ಗಮನ ಸೆಳೆದವು.

ಹಾಂ ! ಒಂದುಮಾತು. ಮುಂದಿನ ಸಂಚಿಕೆಗಳಲ್ಲಿ ಓದುಗರಿಗೂ ಬರೆಯುವಂತೆ ಅವಕಾಶ ಕೊಡಿ.

*ಕಿತ್ತೂರು* *ಖುರ್ಷದ್ ಆಲಂ ಮೋಮಿನ*

ಡಾ॥ ಬಿ. ಎಮ್. ಪುಟ್ಟಯ್ಯನವರು ತಮ್ಮ ಪ್ರಬಂಧದಲ್ಲಿ 'ದಲಿತರಿಗೆ ನಿಜಶತ್ರು ಯಾರು, ಹುಸಿ ಶತ್ರು ಯಾರು ?' ಎಂಬುದನ್ನು ಚರ್ಚಿಸಿದ್ದಾರೆ. ಹಾಗೆಯೇ ಡಿಎಸ್‌ಎಸ್‌ನ ಕಾರ್ಯವನ್ನು ಶ್ಲಾಘಿಸಿದ್ದಾರೆ.

ಅವರ ಚಿಂತನೆ ಬಹಳ ಚೆನ್ನಾಗಿದೆ. ನಾವು ಹೋರಾಡುತ್ತಿರುವುದು ಮುಖ್ಯವಾಗಿ ಸರ್ಕಾರಿ ಸೌಲಭ್ಯಗಳನ್ನು ಬಳಸಿಕೊಂಡು ಮೇಲೆ ಬಂದ ದಲಿತರ ಪರವಾಗಿಯೇ ಹೊರತು ದಿನದ ಊಟಕ್ಕೂ ಗತಿಯಿಲ್ಲದ, ಜೀತದಾಳುಗಳಾಗಿರುವ, ಸರ್ಕಾರಿ ಸೌಲಭ್ಯಗಳನ್ನು ಕನಸಿನಲ್ಲೂ ಕಾಣದಿರುವ, ಶಿಕ್ಷಣದಿಂದ ವಂಚಿತರಾಗುತ್ತಿರುವ ದಲಿತರ ಬಗ್ಗೆ ಅಲ್ಲ ಎನ್ನುವುದು ಅವರ ಚಿಂತನೆ. ಇದು ಸರಿ. ಆದರೆ ನನ್ನ ಪ್ರಶ್ನೆ ಏನೆಂದರೆ, ನಿಜಶತ್ರು ಯಾರೆಂಬುದು ? ಮನುಷ್ಯನಲ್ಲಿ ತಿಳುವಳಿಕೆ/ಅರಿವು ಮೂಡಬೇಕಾಗಿದ್ದರೆ ಅದಕ್ಕೆ ಮೂಲಭೂತ ಶಿಕ್ಷಣ ಅಗತ್ಯ. ಅಂತಹ ಶಿಕ್ಷಣವನ್ನು ದಲಿತರಿಗೆ ವಂಚಿಸಿದವರು ಯಾರು ? ಅವರು ಅಸ್ಪೃಶ್ಯರು ಎಂದು ಊರಿಂದ ಹೊರಗಿಟ್ಟವರು ಯಾರು ? ಕೀಳರಿಮೆ ಬಿತ್ತಿದವರು ಯಾರು ? ಶಿಕ್ಷಣ ಸಮಾನತೆ ದಲಿತರಿಗೆ ನೀಡಿದ್ದರೆ ಅವರು ಊಳಿಗಮಾನ್ಯಶಾಹಿಯ ಹಂಗಿನಲ್ಲಿರಬೇಕಾದ ಪ್ರಮೇಯವೇ ಬರುತ್ತಿರಲಿಲ್ಲ ಅಲ್ಲವೇ ?

*ಬೆಂಗಳೂರು* *ಮಿಡಿಗೇಶಿ ಶಿವರಾಮ*

ಅಪ್ಪಟ ಗಾಂಧೀವಾದಿ. ಎಚ್. ಎಸ್. ದೊರೆಸ್ವಾಮಿಯವರ ಆಕರ್ಷಕ ವರ್ಣಪಾರದರ್ಶಿಕೆ ಜೊತೆಗೆ ಬ. ನ. ಸುಂದರರಾವ್ ಅವರ 'ಪೌರವಾಣಿಯ ಶೌರ್ಯ' ಈ ಬಾರಿಯ 'ಹೊಸತು'ವಿನ ಪ್ರಮುಖ ಆಕರ್ಷಣೆಯಾಗಿದೆ.

ಸ್ವಾತಂತ್ರ್ಯ ಚಳುವಳಿಯ ಕರ್ನಾಟಕದ ಪ್ರಮುಖ ಹೆಸರುಗಳಲ್ಲಿ ಶ್ರೀಯುತ ಎಚ್. ಎಸ್. ದೊರೆಸ್ವಾಮಿ ಅವರದೂ ಒಂದು. ಇವರಿಗೆ ಈ ಸಾಲಿನ ಎಂ. ವೀ. ಸೀತಾರಾಮಯ್ಯ ಪ್ರಶಸ್ತಿ ದೊರಕಿರುವುದು ಕೇವಲ ಇವರಿಗಷ್ಟೇ ಅಲ್ಲ, ನಾಡಿನ ಎಲ್ಲರಿಗೂ ಹೆಮ್ಮೆಯೇ ತರುವ ಸಂಗತಿ.

ಸ್ವಾತಂತ್ರ್ಯಪೂರ್ವದ ದಿನಗಳಲ್ಲಿ ಜನರಲ್ಲಿ ಜಾಗೃತಿಯ ಕಿಡಿಯನ್ನು ಹಚ್ಚುತ್ತಿದ್ದಂತಹ ಅಂದಿನ ಪತ್ರಿಕೆಗಳು ನಡೆದುಬಂದ ದಾರಿಯ ಕಿರುಪರಿಚಯ ಲೇಖನದಲ್ಲಿ ಹೊರಹೊಮ್ಮಿದೆ.

*ಬೆಂಗಳೂರು* *ನೆ. ಲ. ರಾಮಮೂರ್ತಿ*

ಜುಲೈ ತಿಂಗಳ 'ಹೊಸತು'ವಿನಲ್ಲಿ ನನ್ನ ಕೃತಿ 'ವೈದ್ಯಾಧಿಕಾರಿಯ ಬದುಕು-ಬವಣೆ' ಕುರಿತು ಡಾ॥ ಎಚ್. ಎಸ್. ಗೋಪಾಲ ರಾವ್ ಬರೆದ ವಿಮರ್ಶೆಯನ್ನು ಪ್ರಕಟಿಸಿರುವುದಕ್ಕೆ ಆಭಾರಿಯಾಗಿರುವೆ.

ಲೇಖನದಲ್ಲಿ ಒಂದು ತಪ್ಪು ಮಾಹಿತಿ ಇರುವುದನ್ನು ತಮ್ಮ ಗಮನಕ್ಕೆ ತರಲು ಈ ಪತ್ರ. ಪುಟ ೫೧ರ ೧೦-೧೧ ಸಾಲುಗಳಲ್ಲಿ '... ೧೯೪೨ರ ಕ್ವಿಟ್ ಇಂಡಿಯಾ...' ಬದಲು '೧೯೪೭ರ ಮೈಸೂರು ಚಲೋ...' ಎಂದಿರಬೇಕಾಗಿತ್ತು.

*ಕುಪ್ಪಳಿ* *ಡಾ॥ ಎಚ್. ಡಿ. ಚಂದ್ರಪ್ಪಗೌಡ*

'ಹೊಸತು' ಪತ್ರಿಕೆಯಲ್ಲಿ, ಪ್ರತಿತಿಂಗಳು ಆಕರ್ಷಕ ಮುಖಪುಟದೊಂದಿಗೆ ಸಾಹಿತ್ಯಕ, ಸಾಂಸ್ಕೃತಿಕ, ಸಾಮಾಜಿಕ ಹಾಗೂ ಪ್ರಚಲಿತ ವಿಚಾರಗಳನ್ನೊಳಗೊಂಡ ಮಹತ್ವಪೂರ್ಣ ಲೇಖನಗಳು ಪ್ರಕಟವಾಗುತ್ತಿರುವುದು ಸಂತಸ ತಂದಿದೆ. ಜುಲೈ ೨೦೦೬ರ ಸಂಚಿಕೆಯಲ್ಲಿನ ಡಾ॥ ಬಸವರಾಜ ಸಬರದ ಅವರ 'ಸಂಸ್ಕೃತಿ ಮತ್ತು ಚಳುವಳಿ – ಇವತ್ತಿನ ಸವಾಲುಗಳು' ಎಂಬ ಲೇಖನ ಚಿಂತನಾರ್ಹವಾಗಿದೆ. ಪ್ರಸ್ತುತ ವರ್ತಮಾನದ ಸಮಸ್ಯೆಗಳಾಗಿ ಕಾಡುತ್ತಿರುವ ಕೋಮುವಾದ, ಜಾಗತೀಕರಣ, ಖಾಸಗೀಕರಣ, ಉದಾರೀಕರಣಗಳಿಗೆ ಮುಖಾಮುಖಿಯಾಗುವಲ್ಲಿ ಪ್ರಗತಿಪರ ಸಂಘಟನೆಗಳ ಅನಿವಾರ್ಯತೆ ಹಿಂದೆಂದಿಗಿಂತಲೂ ಇಂದು ಹೆಚ್ಚಿಗಿರುವುದನ್ನು ಬಂಡಾಯ ಸಂಘಟನೆಯ ಹಿನ್ನೆಲೆಯಲ್ಲಿ ಎಚ್ಚರಿಸಿರುವುದು ಗಮನಾರ್ಹವಾಗಿದೆ. ಹಾಗೆಯೇ ಸನತ್‌ಕುಮಾರ್ ಬೆಳಗಲಿ ಅವರ 'ಬಂಡಾಯ ಸಾಹಿತ್ಯ ಚಳವಳಿಯ ದಿಕ್ಕುದೆಸೆ' ಮತ್ತು ಡಾ॥ ಬಿ. ಎಂ. ಪುಟ್ಟಯ್ಯ ಅವರ 'ಸಾಹಿತ್ಯ ಮತ್ತು ದಲಿತ ಚಳುವಳಿ' ಈ ಲೇಖನಗಳು ಕೂಡ ಈ ನಿಟ್ಟಿನಲ್ಲಿ ವಿಚಾರಾರ್ಹವಾಗಿವೆ. ಈ ಲೇಖಕರಿಗೆ ಮತ್ತು 'ಹೊಸತು' ಸಂಪಾದಕರಿಗೆ ಅಭಿವಂದನೆಗಳು.

*ಶಂಕರಘಟ್ಟ* *ರವಿನಾಯ್ಕ ಎಂ.*

**ಭಾಷೆ, ಬದುಕು, ಸಾಹಿತ್ಯ**

ಬದುಕು ಮತ್ತು ಜೀವನ ಬೇರೆ ಬೇರೆ ಎಂಬ ವಿಚಾರವನ್ನು ಅತ್ಯಂತ ಆಳವಾಗಿ ಭಾಷೆ ಮತ್ತು ಸಾಹಿತ್ಯದ ದೃಷ್ಟಿಯಲ್ಲಿ ಬರೆಯಲಾಗಿರುವ ಉಪಯುಕ್ತ ಲೇಖನವಿದು. ಜೀವನದ ಸಂಪರ್ಕಮಾಧ್ಯಮವಾದ ಭಾಷೆ ಜೀವಿಗಳ ಬದುಕಿನಲ್ಲಿ ಪ್ರಧಾನ ಸಾಧನವಾಗಿ, ಮಾನವನಿಗೆ ಸಾಹಿತ್ಯವಾಗಿ ಸಂಸ್ಕೃತಿಯ ಬೆಳವಣಿಗೆಯ ಮಾಪನವಾಗಿ, ನಾಗರಿಕತೆಗಳ ಮೌಲ್ಯಗಳಾಗಿ ಬೆಳೆದುನಿಂತಿರುವುದು ಸೃಜನಶೀಲತೆಯ ಉತ್ತುಂಗ ಎಂದೆನಿಸುತ್ತದೆ. ಮಾನವ ತನ್ನ ಪರಿಸರ, ಅನುಕೂಲ ಹಾಗೂ ತನ್ನ ನೆಲೆಯನ್ನು ಗುರುತಿಸಿಕೊಂಡು ಭಾಷೆಯನ್ನು ಅಭಿವೃದ್ಧಿಪಡಿಸಿಕೊಂಡರೂ ಸಹ ಭಾಷೆ ತನ್ನ ಮೌಲ್ಯವನ್ನು ಕಂಡುಕೊಂಡದ್ದು ಸಾಹಿತ್ಯದ ಬೆಳವಣಿಗೆಯಿಂದಾಗಿ. ಇಂದು ಭಾರತದಲ್ಲಿ ಭಾಷೆಗಳು ಶಾಸ್ತ್ರೀಯ ಪಟ್ಟವನ್ನು ಗಳಿಸಲು ಭಾಷೆಯ ಜ್ಞಾನದ ಕೊರತೆಯಿರುವ ರಾಜಕಾರಣಗಳನ್ನು ಓಲೈಸುವಂತಹ ಅತ್ಯಂತ ಹೀನಾಯ ಚಟುವಟಿಕೆಗಳು ನಡೆಸಲು ಕಾರಣವೇ ಬದುಕು ಮತ್ತು ಜೀವನ ಬೇರೆಬೇರೆಯಾಗಿರುವುದು. ಒಂದು ಕಾಲದಲ್ಲಿ ಸಂಸ್ಕೃತ, ಪಾಲಿ, ಅರೇಬಿಕ್, ಲ್ಯಾಟಿನ್, ಗ್ರೀಕ್ ಪ್ರತಿಯೊಂದು ಭಾಷೆಯೂ ನಾಗರಿಕತೆಯ ಭಾಷೆಯಾಗಿತ್ತು. ಅವುಗಳ ಅರಿವಿಲ್ಲದ ಕಾರಣ ಸಾಹಿತ್ಯವನ್ನು ಕಾಲದಿಂದ ಗುರುತಿಸಲಾಗುತ್ತಿರಲಿಲ್ಲ. ಇಂದು ಬರಹಗಾರರು ತಮ್ಮನ್ನು ಗುರುತಿಸಿಕೊಳ್ಳುವುದಕ್ಕಾಗಿ ಕಾಲ ಮತ್ತು ಪ್ರಕಾರದ ವಿಂಗಡಣೆ ಮಾಡುತ್ತಾ ತಮ್ಮನ್ನು ತಾವು ಮರೆಸಿಕೊಳ್ಳುತ್ತಿರುವುದು ಭಾಷೆಯು ಮರೆಯಾಗುತ್ತಿರುವುದಕ್ಕೆ ಕಾರಣವಾಗುತ್ತಿದೆ.

*ಬೆಂಗಳೂರು* *ನರೇಂದ್ರ ಸಿರಕಜೆ*

'ಹೊಸತು' ಜೂನ್ ೦೬ರ ಸಂಚಿಕೆಯು ಕವರ್‌ನಲ್ಲಿ ಬಂದಾಗ ಮುಖಪುಟದಲ್ಲಿ ಯಾರ ಚಿತ್ರ ಬಂದಿರಬಹುದು ಎಂಬ ಕುತೂಹಲದಿಂದ ನೋಡಿದೆ. ಸಂಗೀತದ ಹಿರಿಯಕ್ಕ ಗಂಗೂಬಾಯಿ ಹಾನಗಲ್‌ರವರ ಆಕರ್ಷಕ ನಗುವಿನ ಚಿತ್ರ ನೋಡಿ ತುಂಬಾ ತುಂಬಾ ಹೆಮ್ಮೆಯಾಯ್ತು. ಒಳಗಡೆ ಇವರ ಬಗೆಗಿನ ಲೇಖನದ ಬಗ್ಗೆ ತಡಕಾಡಿದೆ. 'ಸಂಪ್ರದಾಯಬದ್ಧ ಗಾಯನಗಂಗೆ' ಈ ಶೀರ್ಷಿಕೆಯಡಿಯಲ್ಲಿ ಡಾ॥ ನಾಗರಾಜರಾವ್ ಹವಾಲ್ದಾರ್‌ರವರ ಲೇಖನ ಓದಿದೆ. ನಿಜಕ್ಕೂ ಇವರ ಸಂಗೀತಸುಧೆಯನ್ನು ಆಸ್ವಾದಿಸಿದವರಿಗೇ ಗೊತ್ತು. ಗಂಡುಧ್ವನಿ ಸಂಗೀತದೊಂದಿಗೆ ಇವರ ರಾಗ ಸೇರಿದರೆ ಅದನ್ನು ಕೇಳಲು ಎರಡು ಕಿವಿಗಳು ಸಾಲದು. ಇದೇ ಸಂಚಿಕೆಯಲ್ಲಿ ಸಂಗೀತ ಸಾಮ್ರಾಟ್ ನೌಷಾದ್ ಅಲಿಯವರ ಶ್ರದ್ಧಾಂಜಲಿ ಲೇಖನದಲ್ಲಿ ನಾ. ದಿವಾಕರರವರು ಅನೇಕ ಮಾಹಿತಿಗಳನ್ನು ನೀಡಿದ್ದಾರೆ. ಇಂತಹ ಉತ್ತಮೋತ್ತಮ ಅಗ್ರಲೇಖನಗಳನ್ನು ನೀಡುವ ಮೂಲಕ 'ಹೊಸತು' ಹೊಸ ಅಲೆಯನ್ನು ಸೃಷ್ಟಿಸುತ್ತಿದೆ. 'ಹೊಸತು' ಬಳಗದ ಲೇಖಕರಿಗೆ ಸಂಪಾದಕರಿಗೆ ನಮ್ಮ ಅಭಿನಂದನೆಗಳು.

*ಮೈಸೂರು* *ಕಾಳೀಹುಂಡಿ ಕೆ. ವಿ. ಶಿವಕುಮಾರ್*

'ಹೊಸತು' ೭ನೇ ಸಂಪುಟದ ೧೧ನೇ ಸಂಚಿಕೆ (ಜೂನ್ ೨೦೦೬)ಯ ಸಂಪಾದಕೀಯ (ಈ ತಿಂಗಳು ಕಾಲಂ)ದಲ್ಲಿ ಪ್ರಸ್ತಾಪಿಸಲಾಗಿರುವ ಸರ್ವೋಚ್ಚ ನ್ಯಾಯಾಲಯದ ತೀರ್ಪುಗಳ ವಿವರಣಾತ್ಮಕ ಲೇಖನ ಜಿಜ್ಞಾಸೆಪೂರ್ಣವಾಗಿದೆ. ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ರೈತನಿಗೆ ಈ ದೇಶದ ಆರ್ಥಿಕ ತಜ್ಞರು ತೋರಿಸಿದ ಜಾಗ ಅಮಾನವೀಯವಾಗಿದೆ. ಅಂತೆಯೇ ಬವಣೆಗೇಡಾದ ಜನರ ನೋವುಗಳನ್ನೇ ಗಣನೆಗೆ ತೆಗೆದುಕೊಳ್ಳದಂತಿರುವ ನರ್ಮದಾ ಅಣೆಕಟ್ಟೆಗೆ ಸಂಬಂಧಿಸಿದ ತೀರ್ಪು ಕೂಡ ಚಿಂತೆಗೀಡುಮಾಡುವಂತಿದೆ. ವಿಶ್ಲೇಷಣೆಗೆ ಧನ್ಯವಾದಗಳು.

*ಅಫಜಲಪುರ* *ಡಿ. ಎಂ. ನದಾಫ್*

ಜೂನ್ ತಿಂಗಳ 'ಹೊಸತು'ವಿನಲ್ಲಿ ಮನಸ್ಸಿನ ಬಗ್ಗೆ ವಿ. ಚಂದ್ರಶೇಖರ ನಂಗಲಿ ಅವರು ಬರೆದ 'ಹೇಂಗೆ ಮನ ಹಾಂಗೆ ಘನ' ಲೇಖನದಲ್ಲಿ ಬಹಳ ಅರ್ಥಪೂರ್ಣವಾಗಿ

ವಿವರಿಸಿದ್ದಾರೆ. ಶಕ್ತಿಯುತ ಆಯುಧವೆಂದರೆ 'ಮನಸ್ಸು' ಎಂಬ ಮಾತು ನಿಜಕ್ಕೂ ಅರ್ಥಪೂರ್ಣ. ಪ್ರಪಂಚದ ಇತರೆ ದೇಶಗಳಿಗೆ ಹೋಲಿಸಿದರೆ ಭಾರತದ ವಿಶಿಷ್ಟತೆಯೇ ಬೇರೆ. ಅದಕ್ಕೆ ಇಲ್ಲಿನ ವಿಶಿಷ್ಟ ಮನಸ್ಸುಗಳ ಸಮ್ಮಿಲನವೇ ಕಾರಣ.

ಭಾರತವೆಂದರೆ ಕೇವಲ ಒಂದು ಧರ್ಮ, ಒಂದು ಭಾಷೆ ಅಲ್ಲವೆಂಬುದನ್ನು ರೈತನ ಜಮೀನಿನಲ್ಲಿ ಬೆಳೆಯಬಹುದಾದ ವಿವಿಧ ಬೆಳೆಗಳು ಎಂದು ಹೇಳಿ ವಿದೇಶಿ ಬೀಜಗಳು, ಗೊಬ್ಬರಗಳು, ಕ್ರಿಮಿನಾಶಕಗಳನ್ನು ಬಳಸಿ ರೈತ ಮುಂದೇನಾಗುತ್ತಾನೆ ಎಂಬುದನ್ನು ಹೇಳಿದ್ದಾರೆ. ಅಂದರೆ ಏಕತೆಯಿಂದಾಗಬಹುದಾದ ತೊಂದರೆಯನ್ನು ಹೇಳಿದ್ದಾರೆ. ನಮ್ಮ ಸಂವಿಧಾನವು ಸಹ ಅಷ್ಟೆ ವಿಶಿಷ್ಟವಾಗಿರಲು ಕಾರಣ ಹಲವು ದೇಶಗಳ ಸಂವಿಧಾನದಿಂದ ಒಳ್ಳೆಯದನ್ನು ಆಯ್ದು ಕೊಂಡಿದ್ದಕ್ಕಲ್ಲವೇ? ಇದು ಸಹ ಬಹುತ್ವದಿಂದ ಕೂಡಿದೆ ಅಲ್ಲವೇ? ನಿಜವಾಗಿಯೂ ನಾನು ಪದೇ ಪದೇ ಓದಿದ ಲೇಖನವೆಂದರೆ ಈ ತಿಂಗಳಲ್ಲಿ ಇದೇ.

*ಬೆಂಗಳೂರು* **ಮಿಡ್ಗೇಶಿ ಶಿವರಾಮ**

ಜೂನ್ ೨೦೦೬ರ 'ಹೊಸತು' ವಸ್ತುಸ್ಥಿತಿಯ ವಿವಿಧ ಮಜಲುಗಳನ್ನು ವಿಚಾರಮಾಡಲು ಹಚ್ಚುವ ಬರಹಗಳನ್ನು ಹೊತ್ತು ಖುಷಿ ತಂದಿದೆ. 'ಎಜುಸ್ಯಾಟ್' ಕುರಿತ ಸೊಪ್ಪಿಮಠ ಅವರ ಲೇಖನ ಶಿಕ್ಷಣರಂಗದಲ್ಲಿ ಆಗ ಬಹುದಾದ ಕ್ರಾಂತಿಕಾರಿ ಬದಲಾವಣೆಗಳನ್ನು ಬಿಚ್ಚಿಟ್ಟಿದೆ. ಅದನ್ನು ಸಮರ್ಪಕವಾಗಿ ಬಳಸಿಕೊಳ್ಳುವುದಕ್ಕೆ ನಾವು ಸಿದ್ಧರಾಗಬೇಕಿದೆ. ಭಾರತದ ಶಿಕ್ಷಣಕ್ಷೇತ್ರದಲ್ಲಿ ಮಾತ್ರ ವಲ್ಲದೆ ಮಾಹಿತಿ ಸಂಪರ್ಕ ಮತ್ತಿತರ ಕ್ಷೇತ್ರಗಳಲ್ಲೂ ಉಪಗ್ರಹವನ್ನು ಬಳಸಲು ಸಾಧ್ಯವಿದೆ. TRAI ಇದಕ್ಕೆ ಒಪ್ಪುವುದೇ?

ಅದೇ ರೀತಿ ಸಂಚಿಕೆಯಲ್ಲಿನ ಡಿ. ದ್ವಾರಕಾನಾಥ ಅವರ ಬರಹ ಮಾಹಿತಿಪೂರ್ಣವಾಗಿತ್ತು. ('ಮಾನಸಿಕ ಒತ್ತಡವನ್ನು ತಡೆಗಟ್ಟುವುದು ಹೇಗೆ?')

ಒಟ್ಟಾರೆಯಾಗಿ, ಸಂಚಿಕೆಯಲ್ಲಿನ 'ನಿರುದ್ಯೋಗ' ಲೇಖನ ಸಹ ಮಾರ್ಗದರ್ಶಿಯಾಗಿದೆ. ಆದರೆ ನಮ್ಮ ಯೋಜಕರು ಕಿವಿಗೊಡುವರೆ?

*ಸೇಡಂ* **ಬಿ. ಆರ್. ಅಣ್ಣಾಸಾಗರ್**

### ಹನಿಗವನಗಳಿಗೆ ಆಹ್ವಾನ

ನಮ್ಮ ಗುರುರಾಜ ಪ್ರಕಾಶನದಿಂದ ೨೪ನೇ ಪ್ರಕಟಣೆಯಾಗಿ 'ಮಹಿಳೆ' ಎಂಬ ಹನಿಗವನ ಸಂಕಲನವನ್ನು ಸಹಕಾರಿ ತತ್ವದ ಆಧಾರದ ಮೇಲೆ ಹೊರತರಲು ಉದ್ದೇಶಿಸಲಾಗಿದೆ. ಒಬ್ಬರು ಎಷ್ಟು ಬೇಕಾದರೂ ಹನಿಗವನಗಳನ್ನು ಕಳುಹಿಸಬಹುದು. ಆಸಕ್ತಿಯುಳ್ಳವರು ಎಂಟು ಸಾಲಿಗೆ ಮೀರದ 'ಮಹಿಳೆ' ವಿಷಯಕ್ಕೆ ಸಂಬಂಧಪಟ್ಟಂತಹ ಹನಿ ಗವನಗಳನ್ನು ದಿನಾಂಕ ೩೦-೦೯-೨೦೦೬ರೊಳಗೆ ಈ ಕೆಳಕಂಡ ವಿಳಾಸಕ್ಕೆ ಕಳುಹಿಸಲು ಕೋರಲಾಗಿದೆ.

**ಕೋ. ಲ. ರಂಗನಾಥರಾವ್**
**ಗುರುರಾಜ ಪ್ರಕಾಶನ**
'ಹರಿಕೃಪೆ' ನಂ. ೨೩೬
೧೧ನೇ ಮುಖ್ಯರಸ್ತೆ, ಏಜೀಸ್ ಕಾಲೋನಿ
ಅರೇಹಳ್ಳಿ, ಸುಬ್ರಹ್ಮಣ್ಯಪುರ ಅಂಚೆ
ಬೆಂಗಳೂರು - ೫೬೦ ೦೬೧
ದೂರವಾಣಿ : ೨೨೭೯೭೭೫೩
ಮೊಬೈಲ್ : ೯೮೪೫೪೭ ೫೩೦೬೭

ಜೂನ್ ೨೦೦೬ರ 'ಹೊಸತು', ಶ್ರೀಮತಿ ಗಂಗೂಬಾಯಿ ಹಾನಗಲ್ ಅವರ ಮುಖಪುಟದೊಂದಿಗೆ ಸೊಗಸಾಗಿ ಮೂಡಿಬಂದಿದೆ. 'ಹೊಸತು' ಒಂದು ಒಳ್ಳೆಯ ನಿರ್ಣಯವನ್ನೇ ತೆಗೆದುಕೊಂಡಿದೆ. ಹೋದಸಲ 'ಅಣ್ಣಾವ್ರ' ಮುಖಪುಟದಿಂದ ಬಹುತೇಕ ಅವರೆಲ್ಲ ಅಭಿಮಾನಿಗಳು ಅದನ್ನು ಫೋಟೋಹಾಕಿಸಿಕೊಳ್ಳುವಂತೆ ಬಹಳ ಅಂದವಾದ ಮುಖಪುಟ ಮಾಡಿದ್ದಿರಿ. ಈ ಸಲ 'ಸಂಗೀತಪ್ರೇಮಿಗಳೆಲ್ಲ ಒಮ್ಮೆ ಕೈಗೆತ್ತಿಕೊಳ್ಳುವಂತೆ ಖ್ಯಾತ ಹಿಂದೂಸ್ಥಾನಿ ಗಾಯಕಿ 'ಸವಾಯಿ ಗಂಧರ್ವ'ರ ಶಿಷ್ಯೋತ್ತಮಳಾದವರು 'ಸವಾಯಿ ಗಂಧರ್ವಿಣಿ' ಗಂಗಾಬಾಯಿ ಹಾನಗಲ್ ಅವರ ಮುಖಪುಟ ಬಹಳ ಚೆನ್ನಾಗಿತ್ತು. ಡಾ|| ನಾಗರಾಜ ರಾವ್ ಹವಾಲ್ದಾರ್ ಬಹಳ ಮಹತ್ತರವಾದ ವಿಷಯದ ಬಗ್ಗೆ ಲೇಖನ ಬರೆದಿದ್ದಾರೆ. ಏಕೆಂದರೆ, ಸ್ವತಃ ಸಂಗೀತಗಾರರಾದ ಅವರು ಬಹಳ ಹತ್ತಿರದಿಂದ ಕಂಡುಂಡ ಅನುಭವಗಳನ್ನು ಮಹತ್ತರವಾಗಿ ಚಿತ್ರಿಸಿದ್ದಾರೆ. 'ಮಗುವಿನ ಮನಸ್ಸಿರುವವರಿಗೆ ಸಂಗೀತ ಒಲಿಯುವುದು' ಎಂಬ ಮಾತಿದೆ. ಗಂಗೂಬಾಯಿ ಹಾನಗಲ್ ಅವರು 'ನೋಡು, ನನಗೆ ಜ್ವರ ಬಂದಿದೆ' ಎಂದು ಮಗುವಿನಂತೆ 'ಹವಾಲ್ದಾರರ' ಕಡೆ ಕೈ ಚಾಚಿದ್ದು ಕಣ್ಣಿಗೆ ಕಟ್ಟಿದಂತೆನಿಸಿತು.

'ನಿರುದ್ಯೋಗ' ಎಂಬ 'ಅಗಸ್ತ್ಯಭ್ರಾತಾ' ಅವರ ಲೇಖನ, ಸುಕನ್ಯಾ ಕನಾರಳ್ಳಿ ಅವರ 'ನಾವು ಕೊಂದ ಅಪ್ಪ', ಪಾರ್ವತಿ ಜಿ. ಐತಾಳ್ ಅವರ ಕಥೆ 'ಹೃದಯಹೀನರು' ಮುಂತಾದುವು ಓದುಗರ ಗಮನ ಸೆಳೆಯುತ್ತವೆ.

ಒಟ್ಟಾರೆ 'ಹೊಸತು' ಹೊಸ ಹೊಸ ಜ್ಞಾನಶಾಖೆಯಾಗಿ ಈ ತಿಂಗಳು ನಮ್ಮ ಕೈ ಸೇರಿತ್ತು ಎಂದರೆ ಅತಿಶಯವಾಗಲಿಕ್ಕಿಲ್ಲ.

*ಬೆಳಗಾವಿ* **ಸಿ. ಮಂಜುನಾಥ ಕೂಡ್ಲಿಗಿ**

---

*೩ನೇ ಪುಟದಿಂದ (ಈ ತಿಂಗಳು)*

ಪೊಲೀಸರಿಗೆ ಒಪ್ಪಿಸುವ ಬದಲು, ಅದರೊಂದಿಗೆ ಸಮಾಜದ ಎಲ್ಲ ವರ್ಗದವರೂ ಇನ್ನು ಮುಂದೆ ಈ ಕುರಿತು ಹೆಚ್ಚು ನಿಗಾವಹಿಸುವುದು ಅಗತ್ಯವೆನಿಸುತ್ತದೆ. ಮುಂಬಯಿಯಲ್ಲಿ ಭೂಗತ ಪುಂಡುಪೋಕರಿಗಳ ಸಮೂಹಗಳೇ ಇದ್ದು, ಸುಪಾರಿ ಕೊಲೆಗಡುಕರ ವಿವಿಧ ಪಂಗಡಗಳನ್ನು ವಿವಿಧ ಪೊಲೀಸ್ ಅಧಿಕಾರಿಗಳು ಸಾಕಿಕೊಳ್ಳುತ್ತಾರೆ ಎಂಬುದು ಇಂದಿನ ಭಯೋತ್ಪಾದನೆಯ ಪರಿಸ್ಥಿತಿಗೂ ಹಿಂದಿನದು ಮತ್ತು ಅದಕ್ಕೆ ನೇರ ಸಂಬಂಧವುಳ್ಳದ್ದು. ಈ ಬೆಳವಣಿಗೆಯನ್ನೂ, ಇವರ ಹಿಂದಿನ ರಾಜಕೀಯ ಕೈಗಳನ್ನೂ ಗುರುತಿಸಿ ಅವರನ್ನು ಬಗ್ಗುಬಡಿಯುವವರೆಗೆ ಜನಸಾಮಾನ್ಯರಿಗೆ ಆತಂಕ ತಪ್ಪದು. ಭಾರತದ ಇತರ ಮಹಾನಗರಗಳೂ ಇದೇ ಮಾರ್ಗವನ್ನು ಹಿಡಿಯುವ ಕಾಲ ಸನ್ನಿಹಿತವೆಂಬ ಭಯ ಇಂದಿನ ವಾಸ್ತವ. ಹೀಗಿರುವಾಗ ಸದಾ ಎಚ್ಚೆತ್ತ ಜನತೆಯು ಮಾತ್ರ ಈ ಪರಿಸ್ಥಿತಿಯನ್ನು ಸರಿಪಡಿಸ ಬಹುದಾಗಿದೆ. ಹಲವಾರು ದೈನಂದಿನ ಸಮಸ್ಯೆಗಳ ನಡುವೆಯೂ ಈ ಜವಾಬ್ದಾರಿಯ ನಿರ್ವಹಣೆ ಜನಸಾಮಾನ್ಯರಿಗೆ ಸಾಧ್ಯವಾಗಬೇಕು. ಕಾರಣ ಭಯೋತ್ಪಾದಕರ ದಂಧೆಯಿಂದ ಪೆಟ್ಟುಬೀಳುವುದು ಆಳುವವರ್ಗ ಪರಿಗಣಿಸದ ಶೋಷಿತವರ್ಗದವರಿಗೇ. ಜನರೇ ಈ ಮಾರ್ಗ ಅನುಸರಿಸಲು ಯಾವ ವಿಶೇಷ ಕಾನೂನೂ ಬೇಕಾಗಿಲ್ಲ. ಸಂತ್ರಸ್ತರಿಗೆ ಪರಿಹಾರ ನೀಡಲು ಹಣದ ಕೊರತೆ ಇದೆಯಾದರೂ, ಈಗ ಅದೇ ಸಂದರ್ಭವನ್ನು ಬಳಸಿಕೊಂಡು, ಹೆಚ್ಚು ಹೆಚ್ಚು ಹಣ ಬೇಡಿ, ಪೊಲೀಸ್ ಹಾಗೂ ಮಿಲಿಟರಿ ಶಕ್ತಿಗಳನ್ನು ವಿಸ್ತರಿಸುತ್ತಾ ಹೋಗುತ್ತಿದ್ದು ಅವು ಮುಂದೆ ಪ್ರಜಾವಿರೋಧಿ ಫ್ಯಾಸಿಸ್ಟ್ ಶಕ್ತಿಗಳಾಗುವಷ್ಟು ಬೃಹತ್ತಾಗಿ ಬೆಳೆದುಬಿಡುವ ಸಾಧ್ಯತೆಯಿದೆ. ಇಂತಹ ಬೆಳವಣಿಗೆ ಪ್ರಜಾಪ್ರಭುತ್ವಕ್ಕೆ ಆರೋಗ್ಯಕರ ವಾದುದಲ್ಲ. ಮುಂಬಯಿ ಬಾಂಬ್ ದಾಳಿಯ ಮುನ್ನಾದಿನಗಳಲ್ಲಿ ಶಿವಸೈನಿಕರು ನಡೆಸಿದ ದಾಂಧಲೆಯ ಹಿನ್ನೆಲೆಯಲ್ಲಿ ಮತ್ತೊಂದು ಕೋಮುವಾದಿ ಶಕ್ತಿ ಪ್ರತಿಕ್ರಿಯಿಸಿರ ಬಾರದೇಕೇ? ರಾಜಕಾರಣಿಗಳ ಕೈವಾಡವಿರಬಹುದು ಎಂದು ಪೊಲೀಸ್ ಅಧಿಕಾರಿ ಸಂದೇಹಿಸಿದರೆ ಭಾಜಪ ಏಕೆ ಅವರ ವಿರುದ್ಧ ಹಕ್ಕುಚ್ಯುತಿ ನಿರ್ಣಯ ಮಂಡಿಸಬೇಕು?

* * *

ದೇವಸ್ಥಾನಗಳಲ್ಲಿ ವರ್ಷಕ್ಕೊಮ್ಮೆ ಪವಿತ್ರೋತ್ಸವವೆಂಬ ಶುದ್ಧೀಕರಣದ ಉತ್ಸವ ನಡೆಸುವುದು ವಾಡಿಕೆ. ಯಾವುದೇ ಕಟ್ಟಡಗಳನ್ನು ವರ್ಷಕ್ಕೊಮ್ಮೆಯಾದರೂ ಸ್ವಚ್ಛಪಡಿಸಬೇಕು. ಪಾಶ್ಚಿಮಾತ್ಯರಲ್ಲಿ ಸ್ಪ್ರಿಂಗ್ ಕ್ಲೀನಿಂಗ್ ಎಂಬ ಪದ್ಧತಿ ಇದೆ. ಪುನರ್‌ನಿರ್ಮಾಣವೋ, ಹೊಸ ಗೋಪುರವೋ ಆದಾಗ ಜರುಗುವ ಅಭಿಷೇಕ, ಸಂಪ್ರೋಕ್ಷಣೆ ಮುಂತಾದವುಗಳೆಲ್ಲಾ ಈ ಉದ್ದೇಶದವೇ. ಆದರೆ ಬರಬರುತ್ತಾ ಇವುಗಳ ಸದುದ್ದೇಶಗಳನ್ನು ಪುರೋಹಿತಶಾಹಿ ಮರೆಮಾಚಿ, ದೇವಸ್ಥಾನಕ್ಕೆ ಶೂದ್ರಾದಿಗಳು, ಸತ್ತ-ಹುಟ್ಟಿನ ಸೂತಕ ಕಳೆಯದವರು, ಹರಿಜನರು, ರಜಸ್ವಲೆಯರೂ, ಇಂಥವರೆಲ್ಲಾ ಪ್ರವೇಶಿಸಿ ಮೈಲಿಗೆಯಾಗಿದ್ದು, ಅವುಗಳನ್ನು ನಿವಾರಿಸಲೋಸುಗ ಈ ಕಾರ್ಯವಿಧಿಗಳನ್ನು ಆಚರಿಸಬೇಕೆಂದು ಹೇಳಲಾರಂಭಿಸಿದರು. ಭಕ್ತರ ಪ್ರವೇಶವನ್ನು ಅಷ್ಟು ತುಚ್ಛವಾಗಿ ಕಾಣುವ ಈ ಪದ್ಧತಿ ಯಾವ ಮೈಲಿಗೆಯೂ ತಟ್ಟದ, ಸರ್ವತ್ರ ಸಾರ್ವಜನಿಕ ಶುದ್ಧಸ್ವರೂಪನೆಂಬ ದೈವತ್ವದ ಕಲ್ಪನೆಗೇ ಪೆಟ್ಟು ಎಂಬುದನ್ನೂ ಗಮನಿಸದ ಈ ಶುದ್ಧೀಕರಣದ ಡಾಂಭಿಕತೆ ಲಿಂಗ-ವರ್ಣಭೇದವನ್ನು ಸ್ಥಾಯಿಯಾಗಿಸುವ ವ್ಯವಸ್ಥೆಯಷ್ಟೇ. ಅಂಥ ಸಂದರ್ಭಗಳಲ್ಲಿ ಅಪಾರವಾದ ಸಂಪತ್ತು ವ್ಯಯವಾಗಿ ಅದರ ಪ್ರಥಮ ಫಲಾನುಭವಿಗಳು ಅರ್ಚಕ ಪುರೋಹಿತಶಾಹಿ ಎಂಬುದನ್ನು ಗಮನಿಸಿದರೆ ಶಬರಿಮಲೆಯ ದೈವಕ್ಕೆ, ತಿರುವಾಂಕೂರಿನ ಮತ್ತೊಂದು ದೈವಕ್ಕೆ ಹೆಣ್ಣುಮಗಳ

ಪ್ರವೇಶದಿಂದ ಅಪವಿತ್ರತೆಯನ್ನು ನೀಗಿಸಲು ಹೊರಟಿರುವ ಶುದ್ಧೀಕರಣವೆಂಬ ವ್ಯಾಪಾರದ ಹುನ್ನಾರ ಅರ್ಥವಾದೀತು: ದೇವಸ್ಥಾನದ ವಿಷಯದಲ್ಲಿ ದಲಿತರನ್ನೂ ಮಹಿಳೆಯರನ್ನೂ ಪಶುಗಳಂತೆ ನಡೆಸಿಕೊಳ್ಳುವ ಈ ವ್ಯವಸ್ಥೆಯ ವಿರುದ್ಧ, ಪ್ರಜಾಪ್ರಭುತ್ವವೆಂದೆನಿಸಿಕೊಳ್ಳುವ ವ್ಯವಸ್ಥೆಯ ಮೂಲಕ ಆರಿಸಿಬಂದ ಕೇರಳದ ಎಡಪಕ್ಷದ ಸರ್ಕಾರವೂ ದನಿಯೆತ್ತುತ್ತಿಲ್ಲ ಹಾಗೂ ನಾವು ಈ ಹೀನ ಜಾತಿಪದ್ಧತಿಯ ವಿರುದ್ಧದ ಹೋರಾಟದಲ್ಲಿ ಎಷ್ಟು ಹಿಂದಿದ್ದೇವೆ, ಅದೆಷ್ಟು ಕಷ್ಟ ಎಂಬುದನ್ನು ಪ್ರಕಟಪಡಿಸುತ್ತಿದೆ. ರಜಸ್ವಲೆಯಾದ ಹೆಣ್ಣು ಬಹಿಷ್ಠೆ, ಮೈಲಿಗೆ, ಅಪವಿತ್ರ ಎನ್ನುವ ಈ ಕುತ್ಸಿತ ಪರಂಪರೆಗೆ ಧಿಕ್ಕಾರ ಹೇಳುವ ಹೋರಾಟವನ್ನೂ ಪುರುಷರೇ ಸಂಘಟಿಸುವುದು ಅಗತ್ಯ. ಕರ್ನಾಟಕದಲ್ಲೂ ಇಂಥ ಅಧರ್ಮಸ್ಥಳಗಳು ಹಲವಾರು ಇವೆ. ತನ್ನಿಂದ ಅಪಚಾರವಾಯಿತೆಂಬ ಅಪರಾಧಿಪ್ರಜ್ಞೆಯಿಂದ ಜಯಮಾಲಾ ನಡೆಯುವುದಾದರೆ ಆಕೆಯೇನೂ ದಿಟ್ಟೆ ಎಂದೆನಿಸಿಕೊಂಡಂತಾಗುವುದಿಲ್ಲ.

* * *

ತಿಂಗಳೆಲ್ಲ ಜಾಗತಿಕ ಮಟ್ಟದ ಕ್ರೀಡಾಸ್ಪರ್ಧೆಗಳ ರಸದೌತಣ, ವಿಶ್ವಕಪ್ ಫುಟ್‌ಬಾಲ್, ವಿಂಬಲ್ಡನ್ ಟೆನ್ನಿಸ್, ಪ್ಯಾರಿಸ್ಸಿನ ಗೋಲ್ಡನ್ ಲೀಗ್ ಅಥ್ಲೆಟಿಕ್ಸ್, ಮಹಿಳಾ ಹಾಕಿ, ನಿರಂತರ ನಡೆಯುತ್ತಲೇ ಇರುವ ಕ್ರಿಕೆಟ್, ಅವೆಲ್ಲಕ್ಕಿಂತಲೂ ಆಕರ್ಷಕವೂ ಸಾಹಸಮಯವೂ ಆದ ಟೂರ್ ಡಿ ಫ್ರಾನ್ಸ್ ಎಂಬ ಸೈಕಲ್ ಸವಾರಿ ಪಂದ್ಯ, ಹೀಗೆ. ಇವೆಲ್ಲವನ್ನೂ ದೂರದರ್ಶನದ ಮೂಲಕ ನೋಡುತ್ತಲೇ ಒಂದು ವಿಷಣ್ಣತೆಯೂ ಆವರಿಸುತ್ತದೆ. ಈ ಯಾವ ಪಂದ್ಯಗಳಲ್ಲೂ ಹೆಸರಿಸುವ ಮಟ್ಟದಲ್ಲಿ ಭಾರತದ ಕ್ರೀಡಾಪಟುಗಳು, ತಂಡಗಳು ಇಲ್ಲದಿರುವುದನ್ನು ನೋಡಿದಾಗ ಮನಸ್ಸು ಬಾಡುತ್ತದೆ. ಜಾಗತಿಕಮಟ್ಟದಲ್ಲಿ ಈ ಪಂದ್ಯಗಳಲ್ಲಿ ಭಾಗವಹಿಸುವವರು ಬಹುತೇಕವಾಗಿ ಬಲಿಷ್ಠ ರಾಷ್ಟ್ರಗಳೇ. ಅವರ ಮಕ್ಕಳು ಆಟವಾಡುತ್ತಿದ್ದರೆ, ಇಸ್ರೇಲ್‌ನಲ್ಲೋ, ಪ್ಯಾಲಸ್ಟೈನಿನಲ್ಲೋ, ಇರಾಕಿನಲ್ಲೋ, ಇರಾನಿನಲ್ಲೋ, ಅಫಘಾನಿಸ್ತಾನದಲ್ಲೋ, ಕೊನೆಗೆ ಮುಂಬಯಿಯಲ್ಲೋ ಕಿತಾಪತಿ ಹಚ್ಚಿ ಕದನಕ್ಕೆ ಹಚ್ಚಿಸಿ ತಮ್ಮದೇ ಕೊಲೆಗಡುಕ ಆಟವಾಡುತ್ತಿರುತ್ತವೆ ಈ ರಾಷ್ಟ್ರಗಳು. ಜಾಗತಿಕಮಟ್ಟದ ಆಟಗಾರರು ದೊರೆಯಬೇಕಾದರೆ ಎಲ್ಲ ಅನುಕೂಲವು ಇರುವ ಶ್ರೀಮಂತನ ಮಗನನ್ನು ತರಬೇತಿಗಾಗಿ ಅಮೆರಿಕಾಗೆ ಕಳುಹಿಸುವುದರಿಂದ ಆಗದು. ಕ್ರೀಡೆಯಲ್ಲಿ ಗ್ರಾಮದಿಂದ ಹಿಡಿದು ಪಟ್ಟಣದವರೆಗೆ ಎಲ್ಲ ವರ್ಗದ ಜನಸಾಮಾನ್ಯರು ಸಹಸ್ರ ಸಂಖ್ಯೆಯಲ್ಲಿ ಎಲ್ಲಾ ಮಟ್ಟದಲ್ಲೂ ಸತತವಾಗಿ ಆಡುತ್ತಿದ್ದರೆ ಮಾತ್ರ ಅವರ ನಡುವಿನಿಂದ ಜಾಗತಿಕ ಮಟ್ಟದ ಪ್ರತಿಭೆ ಉದ್ಭವವಾಗಬಹುದು. ಕ್ರೀಡೆ ಶಿಕ್ಷಣದ, ವ್ಯಕ್ತಿತ್ವ ವಿಕಸನಕ್ರಮದ ಒಂದು ಅಂಗವಾಗಬೇಕು. ಶಾಲಾ ಪ್ರವೇಶಕ್ಕೇ ನ್ಯಾಯಯುತ ವ್ಯವಸ್ಥೆಯಿಲ್ಲದ ವಾಣಿಜ್ಯೀಕೃತ ಶಿಕ್ಷಣ ವ್ಯವಸ್ಥೆಯಲ್ಲಿ ಶಿಕ್ಷಣ ಪಡೆಯುವಾಗಲೇ ಕ್ರೀಡಾರಂಗದ ಬೆಳವಣಿಗೆಯನ್ನು ನಿರೀಕ್ಷಿಸುವುದಾದರೂ ಹೇಗೆ? ವರ್ಲ್ಡ್ ಕಪ್‌ಗೋ, ಒಲಿಂಪಿಕ್ಸ್‌ಗೋ ವೇದಿಕೆ ನಿರ್ಮಿಸಿಕೊಟ್ಟು ನಾವೂ ಅದರಲ್ಲಿದ್ದೇವೆ ಎಂದು ಭಾವಿಸುವುದು ಎಲ್ಲದಕ್ಕಿಂತ ಸುಲಭದ ಕೆಲಸ. ಏಷ್ಯಾದ ಫುಟ್‌ಬಾಲ್‌ನಲ್ಲೇ ಹೆಸರಿಲ್ಲದ, ಭಾರತದ ಫುಟ್‌ಬಾಲ್ ಸಂಸ್ಥೆಯ ಅಧ್ಯಕ್ಷ ಮಂತ್ರಿವರ್ಯ ದಾಸ್ ಮುನ್ಷಿ ಭಾರತಕ್ಕೆ ವರ್ಲ್ಡ್ ಕಪ್ ಫುಟ್‌ಬಾಲ್‌ಪಂದ್ಯ ತರುವ ಪ್ರಯತ್ನ ಮಾಡುತ್ತಿರುವುದು ಪ್ರಹಸನೀಯ. ಅದರಿಂದ ವ್ಯಾಪಾರಿಗಳಿಗೆ ಒಂದಿಷ್ಟು ಪ್ರಯೋಜನವಾಗಬಹುದಷ್ಟೆ. ಅದಕ್ಕೆ ಮೊದಲು ದೇಶದಾದ್ಯಂತ ಮಕ್ಕಳು ತಮಗಿಷ್ಟ ಬಂದ ಆಟವಾಡಲು ಅನುಕೂಲ ಕಲ್ಪಿಸುವುದು ಮುಖ್ಯ.

* * *

ಪೆಟ್ರೋಲ್ ಮೇಲೆ ತೆರಿಗೆ ಹಾಕಿ ಸರ್ಕಾರ ಅಪಾರ ರಾಜಸ್ವ ಗಳಿಸುತ್ತಿದೆ. ಪೆಟ್ರೋಲ್ ದರ ಸಾಕಷ್ಟು ಇಳಿಯದೆ ಜನರನ್ನು ಕಾಡುತ್ತಿರುವ ಬೆಲೆ ಏರಿಕೆಯನ್ನು ತಡೆಗಟ್ಟಲಾಗದು. ರಾಜಸ್ವ ಗಳಿಸಲು ಆರ್ಥಿಕವಾಗಿ ಸಮರ್ಥನೀಯವಾದ ಹಲವು ಹತ್ತು ಪರ್ಯಾಯ ಮಾರ್ಗಗಳಿವೆ. ಅವನ್ನು ಅನುಸರಿಸದೆ ಉತ್ತಮ ಮಟ್ಟದಲ್ಲಿ ನಡೆಯುತ್ತಿರುವ ಸಾರ್ವಜನಿಕ ಉದ್ದಿಮೆಗಳನ್ನು ಮಾರುವುದಿಲ್ಲ ಎಂದು ಸಾಮಾನ್ಯ ಕನಿಷ್ಠ ಕಾರ್ಯಕ್ರಮದಲ್ಲಿ ಒಪ್ಪಿಕೊಂಡಿದ್ದರೂ, ಒಡನಾಡಿ ಪಕ್ಷಗಳಿಗೆ ತಿಳಿಸದೆಯೇ ಅವನ್ನು ಮಾರಲು ಮುಂದಾಗುತ್ತಾರೆ. ಪ್ರಗತಿಪರ, ಸಂಯುಕ್ತ ಎಂಬ ಎರಡೂ ಪದಗಳನ್ನೂ ಕಳೆದುಕೊಳ್ಳಲು ಮುಂದಾಗಿರುವ ಈ ಸರ್ಕಾರ ವಿಶ್ವಬ್ಯಾಂಕ್ ಮತ್ತು ವಿಶ್ವ ಹಣಕಾಸು ಸಂಸ್ಥೆಯ ನೀತಿನಿಪುಣರೂ ಮಾನ್ಯಮಾಡುವ ಬೆಲೆ ಏರಿಕೆಯ ಮೇಲೆ ಪರಿಣಾಮ ಬೀರದ ರಾಜಸ್ವ ಹೆಚ್ಚಿಸುವ ಕ್ರಮಕ್ಕೆ ಏಕೆ ಹಿಂಜರಿಯುತ್ತಾರೆ?

* * *

ಇನ್‌ಫೋಸಿಸ್ ನಾಯಕ ಮತ್ತೊಮ್ಮೆ ತಮ್ಮ ಚಿಂತನೆಯನ್ನು ಹಂಚಿಕೊಂಡಿದ್ದಾರೆ; ಬೆಂಗಳೂರು ಸುತ್ತ ಭೂಮಿಯ ಬೆಲೆ ಹೆಚ್ಚಿದೆ. ಆದ್ದರಿಂದ ತಾವು ಬೇರೆ ರಾಜ್ಯಗಳಿಗೆ ವಲಸೆ ಹೋಗಬೇಕಾಗುತ್ತದೆ. ಈಗಷ್ಟೇ ಅವರಿಗೆ ರಾಜ್ಯ ಸರ್ಕಾರ ಸಾಕಷ್ಟು ಭೂಮಿ ನೀಡಿದ್ದನ್ನು ಸ್ಮರಿಸಬಹುದು. ವಾಸ್ತವವೆಂದರೆ ಈ ಪರಿಸ್ಥಿತಿಗೆ ಬೆಂಗಳೂರಿನ ಸುತ್ತಮುತ್ತಲೇ ಝಂಡಿಹೊಡೆದುಕೊಂಡು ಕೂರಬೇಕೆಂಬ ಉದ್ಯಮಿಗಳೇ ಕಾರಣ. ೬ ಲೇನಿನ ರಸ್ತೆ ಮಾಡಿ ಎಂದು ಮೂರ್ತಿಯವರು ಅಪ್ಪಣೆಕೊಡಿಸಿದರೂ ೪ ಲೇನಿನ ರಸ್ತೆ ಮಾಡಿದರೆಂದು ಆಪಾದಿಸುವ ಈ ಉದ್ಯಮಪತಿಗಳು ಅದರ ನೇರ ಲಾಭ ಪಡೆಯುವವರಾಗಿದ್ದು ತಾವೇ ಏಕೆ ಹಣ ಒದಗಿಸುವುದಿಲ್ಲ? ಅಪಾರ ನಗದು ಶೇಖರಿಸಿ ತೆಪ್ಪಗೆ ಕುಳಿತಿರುವ ಉದ್ಯಮಿಗಳು ಏಕೆ ೮-೧೦ ತಾಂತ್ರಿಕ ಕಾಲೇಜುಗಳನ್ನು ತೆರೆಯಲು ಮುಂದಾಗುವುದಿಲ್ಲ? ಸರ್ಕಾರ ಖಾಸಗಿ ಕಾಲೇಜುಗಳಿಗೆ ಶಿಕ್ಷಣ ಶುಲ್ಕಕ್ಕೆ ಸಬ್ಸಿಡಿ ನೀಡುವುದು ಎಷ್ಟು ಸರಿ? ರೈತರ ಸಬ್ಸಿಡಿ ಕಾರ್ಮಿಕರ ಭವಿಷ್ಯನಿಧಿಗೆ ಒಂದಿಷ್ಟು ಬಡ್ಡಿ ನೀಡುವುದನ್ನು ವಿರೋಧಿಸುವ ಉದ್ಯಮಿಗಳಿಗೆ ಈ ಪರಿಸ್ಥಿತಿಯಿಂದ ನಾಚಿಕೆಯಾಗುವುದಿಲ್ಲವೇ? ಸಾಮಾಜಿಕ ಹೊಣೆ ಹೊರುವುದೆಂದರೆ ಬಾಬಾಗಳ ಕಾಲು ಹಿಡಿಯುವುದು, ಅನ್ನಸಂತರ್ಪಣೆ ಮಾಡುವುದು, ರಸ್ತೆ ಮಧ್ಯದ ಒಂದು ವೃತ್ತದಲ್ಲಿ ಹುಲ್ಲು ಬೆಳೆಸಿ ದೊಡ್ಡದಾಗಿ ತಮ್ಮ ಕಂಪನಿಯ ಹೆಸರನ್ನು ಬರೆಸಿಕೊಳ್ಳುವುದು ಇಷ್ಟು ಮಾತ್ರವೇ? ಪದೇ ಪದೇ ಇಂತಹ ಚುಚ್ಚು ಮಾತನಾಡಿ ಇವರು ಬಡಜನರ, ಅವಕಾಶವಂಚಿತರ ಸಹನೆಯನ್ನು ಪರೀಕ್ಷಿಸುತ್ತಿದ್ದಾರೆ ಎಂದು ಹೇಳದೆ ವಿಧಿಯಿಲ್ಲ.

* * *

ಸುಮಾರು ಎರಡು ದಶಕಗಳಿಗೂ ಹಿಂದಿನ ಮಾತು. ಟೆಲಿಫೋನ್ ಇಲಾಖೆ ನಗರದ ಖಾಸಗಿ ನಿವೇಶನವೊಂದನ್ನು ಕಾನೂನಿನನ್ವಯ ಸಾರ್ವಜನಿಕ ಸೇವೆಗೆಂದು ವಶಪಡಿಸಿಕೊಂಡಿತು. ಭೂಸ್ವಾಧೀನಾಧಿಕಾರಿ ಅದಕ್ಕೆ ಪರಿಹಾರಧನ ೫೦ ಕೋಟಿ ರೂ. ನಿಗದಿಪಡಿಸಿ, ಆ ಹಣವನ್ನೂ ಸಂದಾಯಮಾಡಲಾಗಿತ್ತು. ಅದೇ ವೇಳೆಗೆ ಸರ್ಕಾರ ಬದಲಾಯಿಸಿ, ರಾಮಕೃಷ್ಣ ಹೆಗಡೆಯವರ ಸರ್ಕಾರ ಅಧಿಕಾರಕ್ಕೆ ಬಂತು. ಭೂಸ್ವಾಧೀನಾಧಿಕಾರಿಗೆ ಎತ್ತಂಗಡಿಯಾಯ್ತು. ಹೊಸ ಅಧಿಕಾರಿಯ ಮುಂದೆ ಭೂಮಿಯ ಮಾಲೀಕ ಪರಿಹಾರಧನ ಸಾಲದೆಂದು ಮೊರೆ ಇಟ್ಟ. ಹೊಸ ಅಧಿಕಾರಿ ಹಳೆಯ ಅವಾರ್ಡನ್ನು ರದ್ದುಗೊಳಿಸಿ, ಹೊಸ ಆದೇಶ ಹೊರಡಿಸಿ, ೧೫೦ ಕೋಟಿ ರೂ.ಗಳ ಪರಿಹಾರಧನ ನೀಡಿದರು. ಎಲ್ಲವೂ ಕಾನೂನಿನನ್ವಯವೇ. ಆದರೆ ಈ ಪ್ರಕ್ರಿಯೆಗಳ ಹಿಂದಿನ ರಾಜಕೀಯ ಕೈವಾಡ ರಹಸ್ಯವಾಗೇನೂ ಉಳಿಯುವುದಿಲ್ಲ. ಬಳ್ಳಾರಿಯ ಗಣಿಗಾರಿಕೆಯೆಂಬ ದರೋಡೆಯ ಕುರಿತು ವಾಗ್ವಿವಾದಗಳ ಸಂದರ್ಭದಲ್ಲಿ ಈ ಸಂಗತಿ ನೆನಪಿಗೆ ಬಂದು ಇಷ್ಟೊಂದು ಕೋಟಿ ಹಣ ಲಂಚ ತೆಗೆದುಕೊಂಡರು ಎಂದು ಆಪಾದಿಸಿದರೆ, ಆ ಆಪಾದನೆಯನ್ನೂ ಹಿಂತೆಗೆದು ಕೊಳ್ಳಲು ಯಾವ ಚಾಣಾಕ್ಷ ಮಾರ್ಗ ಅನುಸರಿಸಬೇಕು ಎಂಬುದು ಬಹಳ ಗಹನವಾದ ವಿಷಯ. ಅದೇನು ಹಣದ ರೂಪದಲ್ಲೇ ಇರಬೇಕೆಂದಿಲ್ಲ. ಕೆಲವೇ ದಿವಸಗಳಲ್ಲಿ ಸಂಯುಕ್ತ ಸರ್ಕಾರದ ಮತ್ತೊಂದು ಪಕ್ಷದ ಮರಿಲೀಡರು ಇಂದು ಆಪಾದನೆ ಮಾಡಿದವರ ನಾಯಕರ ವಿರುದ್ಧ ಅಂಥದೇ ಆಪಾದನೆ ಮಾಡುವುದಿಲ್ಲ ಎಂದೇನೂ ಖಾತರಿಯಿಲ್ಲ. ಈ ನಾಡಿನಲ್ಲಿ ಗಣಿಗಾರಿಕೆಯನ್ನೇ ನಿಲ್ಲಿಸುತ್ತೇನೆ ಎಂದು ಇಂದು ಹೇಳಿ ತದನಂತರ ಆ ಮಾತಿನ ಪರಿಣಾಮವನ್ನು ಆಸ್ವಾದಿಸುತ್ತಾ ಕುಳಿತರೆ ಸಾಕು. ರಾಜಕೀಯದಲ್ಲಿ, ಬಳ್ಳಾರಿಯ ಗಣಿಗಾರಿಕೆಯ ದರೋಡೆಯಲ್ಲಿ ಅಲ್ಲಿಯ ಎಲ್ಲ ಮುಖ್ಯ ರಾಜಕೀಯ ಧುರೀಣರೂ ಪಾಲುದಾರರಾಗಿದ್ದು, ಏನಿದ್ದರೂ ಈಗ ನಡೆದದ್ದು ಕೇವಲ ಹಂಚಿಕೆಯ ಜಗಳ ಎಂದು ಈಗಂತೂ ಸ್ಪಷ್ಟವಾಗಿದೆ. ಹಾಗೆಯೇ ಹತ್ತು ರೂಪಾಯಿ ಎಕರೆಗೆ ಸರ್ಕಾರದ ಭೂಮಿ ಪಡೆದು, ಅದರ ಆಧಾರದ ಮೇಲೆ ಕೋಟ್ಯಂತರ ರೂಪಾಯಿ ಸಾಲವನ್ನು ಬ್ಯಾಂಕು ನೀಡುವುದಾದರೆ ಸರ್ಕಾರವೇ ಖರೀದಿಸಿ ಕೆಲಸವನ್ನು ನಿರ್ವಹಿಸಬಹುದಿತ್ತಲ್ಲ? ಆ ಆಸ್ತಿಯ ಬೆಲೆ ಸಾರ್ವಜನಿಕ ಮಾಲಿಕತ್ವದ್ದಾದರೆ ಚಿಕ್ಕಾಸು, ಖಾಸಗಿಯಾದೊಡನೆಯೇ ಮಹತ್ತರವಾಗುವ ಈ ಚಮತ್ಕಾರಕ್ಕೆ 'ನಗೆಯು ಬರುತಿದೆ'. ಹೆಚ್ಚುವರಿ ಭೂಮಿಯನ್ನು ವಾಪಸ್‌ಪಡೆದಮೇಲೆ ಅದನ್ನು ಮೂಲ ಮಾಲೀಕರಿಗೆ ಹಿಂದಿರುಗಿಸುವುದು ಕಾನೂನಿನಲ್ಲಿ ಸಲ್ಲ ಎನ್ನುವವರು, ಈ ಭೂಮಿಯ ಮಾಲೀಕರ ಹೆಸರುಗಳನ್ನೂ ಪ್ರಕಟಿಸಬೇಕಾಗಿತ್ತು. ಗೌಡರು ಮಾತ್ರ ನೈಸ್ ಕಂಪನಿಯನ್ನು ಕುಕ್ಕುತ್ತಲೇ ಈ ಬಗ್ಗೆ ಸರ್ಕಾರಕ್ಕೆ ಯಾವುದೇ ಎಚ್ಚರಿಕೆ ನೀಡದಿರುವ ದ್ವಂದ್ವವನ್ನು ಮುಂದುವರಿಸುತ್ತಾ, ರಾಜಕೀಯದ ಈ ಇಬ್ಬಂದಿತನವನ್ನು ಆಸ್ವಾದಿಸುವವರಿಗೆ ಮನರಂಜನೆಯನ್ನೂ ನೀಡುತ್ತಲೇಇದ್ದಾರೆ.

# ಬದುಕಿನ ಭಾಷೆಯಾಗಿ ಕನ್ನಡ

ಡಾ|| ಮಹಾಬಲೇಶ್ವರ ರಾವ್

ಯಾವುದೇ ಭಾಷೆ ಇರುವುದು ಬದುಕಿಗಾಗಿ. ಪ್ರತಿಯೊಂದು ಭಾಷೆಯೂ ಬದುಕಿನ ಭಾಷೆಯೇ. ಭಾಷೆ ಮಾನವನ ಪಾಲಿಗೆ ವರವೂ ಹೌದು; ಶಾಪವೂ ಹೌದು. ಭಾಷೆ ಮಾನವನ ಪಾಲಿಗೆ ಜನ್ಮತಃ ಆರ್ಜಿಸುವ ಸಂಪತ್ತು.

ಭಾಷೆಯಿಲ್ಲದೆ ಬದುಕಿಲ್ಲ, ಬದುಕೇ ಭಾಷೆ. ಭಾಷೆಗೂ ಬದುಕಿಗೂ ಅವಿನಾದ್ವೈತ ಸಂಬಂಧವಿದೆ. ಮನುಕುಲದ ಬದುಕು ಭಾಷೆಯ ರೂಪದಲ್ಲಿ ಮಡುಗಟ್ಟಿದೆ. ಸಂಸ್ಕೃತಿ, ಪರಂಪರೆ, ಸಂಪ್ರದಾಯ, ಕಟ್ಟುಕಟ್ಟಳೆಗಳು, ರೂಢಿಗಳು, ವಿಧಿನಿಷೇಧಗಳು, ಧರ್ಮಾಚರಣೆಗಳು ಭಾಷೆಯಲ್ಲಿ ಹುದುಗಿವೆ. ಶಬ್ದವೊಂದು ಶಬ್ದಕೋಶದಲ್ಲಿ ಕಂಡುಬರುವ ಸಂಗತಿಯಲ್ಲ; ಅದು ಸಾಂಸ್ಕೃತಿಕ ರೂಪಕ; ಬದುಕಿನ ಅನುಭವಗಳ ಪ್ರತಿನಿಧೀಕರಣ.

ಭಾಷೆ ನಮ್ಮ ಬದುಕಿನ ಜೊತೆ ಹೇಗೆ ಬೆಸೆದುಕೊಂಡಿದೆ ಮತ್ತು ಅದು ಮಾಡುವ ಕೆಲಸಗಳೇನು ? ಎಂಬುದನ್ನು ಹ್ಯಾಲಿಡೇ ಮತ್ತು ಸುಸಾನ್ ಲ್ಯಾಂಗರ್ ಎಂಬ ತಜ್ಞರು ಬಣ್ಣಿಸಿದ್ದಾರೆ. ನಾವು ಭಾಷೆಯನ್ನು ದೈನಂದಿನ ಕಾಷ್ಠವ್ಯಸನಗಳ ಅಭಿವ್ಯಕ್ತಿಗೆ ಬಳಸುತ್ತೇವೆ; ಸೃಜನಶೀಲ ಅಭಿವ್ಯಕ್ತಿಗಾಗಿ ಉಪಯೋಗಿಸಿಕೊಳ್ಳುತ್ತೇವೆ. ನಾನಾಬಗೆಯ ಶಾಸ್ತ್ರ ವಿಚಾರಗಳನ್ನು ನಿರೂಪಿಸಲು ಬಳಸುತ್ತೇವೆ. ಭಾಷೆಯ ಈ ಮೂರು ಆಯಾಮಗಳನ್ನು ಬೇರೆ ಬೇರೆಯವರು ಬೇರೆ ಬೇರೆ ರೀತಿಯಲ್ಲಿ ದುಡಿಸಿಕೊಳ್ಳುತ್ತಾರೆ. ಭಾಷೆಯ ಬಳಕೆ ಸಂದರ್ಭಪ್ರೇರಿತವಾದುದರಿಂದ ಒಬ್ಬನೇ ವ್ಯಕ್ತಿ ಒಂದು ಭಾಷೆಯನ್ನು ಬೇರೆ ಬೇರೆ ಸಂದರ್ಭಗಳಲ್ಲಿ ಬೇರೆ ಬೇರೆ ಬಗೆಯಲ್ಲಿ ಬಳಸುತ್ತಾನೆ. ಇದು ಭಾಷೆಯ ಸೃಷ್ಟಿಶೀಲ ಆಯಾಮ. ಮನುಷ್ಯನ ಬದುಕಿನಿಂದ ಭಾಷೆಯನ್ನು ಹೊರತೆಗೆದರೆ ಆಗ ನುಡಿಯಿಲ್ಲದ ಜಂತುವಾಗುತ್ತಾನೆ ಮಾನವ.

"ನಮ್ಮ ತೋಟದಿನಿಯ ಹಣ್ಣು" ಕನ್ನಡನುಡಿಗೆ ಎರಡು ಸಾವಿರ ವರ್ಷಗಳ ಲಿಖಿತ ಪರಂಪರೆಯಿದೆ. ಇದಕ್ಕಿಂತಲೂ ಹಿರಿದಾದ ಅಲಿಖಿತ ಪರಂಪರೆಯಿದೆ; ಸಮೃದ್ಧ ವಾಙ್ಮಯವಿದೆ. ಹೀಗಿದ್ದರೂ ಬದುಕಿನ ಭಾಷೆಯಾಗಿ ಕನ್ನಡ ಎಂದರೇನು ? ಅದು ಎಂದಾದರೂ ಬದುಕಿನ ಭಾಷೆ ಆಗಿತ್ತೇ ? ಈಗ ಆಗಿದೆಯೇ ? ಕನ್ನಡ ಭಾಷೆ ಬದುಕಿನಿಂದ ದೂರ ಸರಿದಿದೆಯೇ ? ಬದುಕಿನ ಭಾಷೆಯಾಗಿ ಕನ್ನಡ ಎನ್ನುವಾಗ ಆತಂಕದ ದನಿ ಇದೆಯೇ ? ಹೆಮ್ಮೆ ಸಂಭ್ರಮ ಇದೆಯೇ ? ಎಂಬಿತ್ಯಾದಿ ಪ್ರಶ್ನೆಗಳು ಕಾಡುತ್ತವೆ.

ಕನ್ನಡ ಕರ್ನಾಟಕದುದ್ದಕ್ಕೂ ಜನಜೀವನದ ಭಾಷೆಯಾಗಿತ್ತು ; ಬದುಕಿನ ಭಾಷೆಯಾಗಿತ್ತು ಎಂಬುದಕ್ಕೆ ಶಾಸನಗಳು, ಕೃಷಿ ವಸ್ತುಗಳು, ಗಾದೆಗಳು, ನಾಣ್ಣುಡಿಗಳು ಮತ್ತು ಇತರ ಉಲ್ಲೇಖಗಳು ಸಾಕ್ಷಿ ನುಡಿಯುತ್ತವೆ. ಸಂಸ್ಕೃತದ ಸ್ಥಿತಿ ಕನ್ನಡಕ್ಕೆ ಎಂದೂ ಬಂದಿರಲಿಲ್ಲ. ಸಂಸ್ಕೃತ ಅರಮನೆ, ಗುರುಮನೆಗಳ ಭಾಷೆಯಾಗಿತ್ತು. ಕನ್ನಡವು ಅರಮನೆ, ಗುರುಮನೆ ಮಾತ್ರವಲ್ಲದೆ, ಬೀದಿ, ಹಿತ್ತಿಲು, ಸಂತೆಮಾಳ, ಗೋಮಾಳ – ಹೀಗೆ ಕನ್ನಡನಾಡಿನ ಎಲ್ಲೆಡೆ ಸರ್ವಜನ ವ್ಯವಹಾರ್ಯವಾಗಿತ್ತು. ಸಾಹಿತ್ಯ ಕ್ಷೇತ್ರದಲ್ಲಂತೂ ಕನ್ನಡದ ಲೇಖಕರು ಉದ್ದಕ್ಕೂ ಜೀವನಪರವಾಗುವ, ಜನಪರವಾಗುವ ಗಂಭೀರ ಪ್ರಯತ್ನಗಳನ್ನು ಮಾಡುತ್ತಲೇ ಬಂದಿದ್ದಾರೆ. ಪಂಪ, ರನ್ನರ ಭಾಷೆ ಸಂಸ್ಕೃತಭೂಯಿಷ್ಠ ಎಂಬ ಟೀಕೆಯಿದ್ದರೂ 'ತಿರುಳ್ಗನ್ನಡ'ವನ್ನು ಅವರು ತಮ್ಮ ಕಾವ್ಯಗಳಲ್ಲಿ ಬಳಸಿದ್ದಾರೆ. ಜನರು ಆಡುವ ನುಡಿಗಟ್ಟುಗಳನ್ನು, ನಾಣ್ಣುಡಿಗಳನ್ನು ಧಾರಾಳವಾಗಿ ಉಪಯೋಗಿಸಿಕೊಂಡಿದ್ದಾರೆ. ಕನ್ನಡವನ್ನು ಸಂಸ್ಕೃತದ ಸೆರೆಯಿಂದ ಬಿಡಿಸುವ ಪ್ರಯತ್ನಗಳನ್ನೂ ಮಾಡಿದ್ದಾರೆ. ಕನ್ನಡ ಮತ್ತು ಸಂಸ್ಕೃತ ಎರಡನ್ನೂ ಎರಕಹೊಯ್ಯುವ ಪ್ರಯತ್ನಗಳನ್ನು ಕೈಗೊಂಡಿದ್ದಾರೆ.

ಕನ್ನಡಕ್ಕೆ ಅನುಭಾವಿಕತೆಯ, ಅಂತರ್ಮುಖತೆಯ, ಆಧುನಿಕತೆಯ ಸ್ಪರ್ಶವನ್ನು ನೀಡಿದವರು ವಚನಕಾರರು. ಆಡುನುಡಿಯ ಲಯವನ್ನು ಧಾರಾಳವಾಗಿ ಬಳಸಿದ ವಿವಿಧ ಕಾಯಕಗಳ ವಚನಕಾರರು ತಂತಮ್ಮ ಕಾಯಕಗಳ ಅನುಭವವನ್ನು ಭಾಷೆಗೆ ಧಾರೆ ಎರೆದಿದ್ದಾರೆ; ಕನ್ನಡವನ್ನು ಪ್ರಜಾಪ್ರಭುತ್ವೀಕರಿಸುವಲ್ಲಿ ಯಶಸ್ವಿಯಾಗಿದ್ದಾರೆ. ವಚನಕಾರರ ದೆಸೆಯಿಂದಾಗಿ ಕನ್ನಡಕ್ಕೆ ಹೊಸ ಹೊನಗು, ಹೊಸ ಕಾಂತಿ ಪ್ರಾಪ್ತವಾಯಿತು. ಕನ್ನಡ ಯಾವುದೋ ಒಂದು ಜನವರ್ಗದ, ಜಾತಿಯ ಗುತ್ತಿಗೆಯಾಗಿ ಉಳಿಯದೆ ಸಮಾಜದ ಎಲ್ಲ ಸ್ತರಗಳ ವೈವಿಧ್ಯಮಯ ಅನುಭವಗಳನ್ನು ದಾಖಲಿಸುವ ಪ್ರಬಲ ಸಾಧನವಾಯಿತು. ಸಮಾಜದ ಅಂಚಿನಲ್ಲಿದ್ದ ನಾನಾಜಾತಿಗಳ ಅನುಭವ ದ್ರವ್ಯದ ಹಂಚಿಕೊಳ್ಳುವಿಕೆಯ ಮೂಲಕ ಕನ್ನಡ ಬದುಕಿನ ಭಾಷೆಯಾಗಿ 'ಜನಗಳು ತಿನ್ನುವ ಅನ್ನದ ಅಗುಳಾಗಿ' ಮಾರ್ಪಟ್ಟಿತು.

ಶರಣರ ಹಾದಿಯನ್ನೇ ದಾಸರು ತುಳಿದರು. ಸರ್ವಜ್ಞ ಆಧ್ಯಾತ್ಮಿಕತೆಯ ಆಳವನ್ನು ಅತ್ಯಂತ ಸರಳ ನುಡಿಗಟ್ಟುಗಳಲ್ಲಿ ಪಡಿಮೂಡಿಸಿದ. ಕುಮಾರವ್ಯಾಸ, ಲಕ್ಷ್ಮೀಶರು ಕನ್ನಡದ ಜನಮನ ಸೂರೆಗೊಂಡರು. ಕೆಂಪುನಾರಾಯಣ, ಮುದ್ದಣ ಭಾಷೆಯನ್ನು ಇನ್ನಷ್ಟು ತಿಳಿಗೊಳಿಸುವ ಪ್ರಯತ್ನಮಾಡಿದರು.

ಆಧುನಿಕ ಕಾಲವಂತೂ ಜನಭಾಷೆಯ 'ಗತಿಬಿಂಬ'ವೇ ಆಗಿದೆ. ನವೋದಯ, ಪ್ರಗತಿಶೀಲ, ದಲಿತ-ಬಂಡಾಯದ ಲೇಖಕರು ಜನಜೀವನವನ್ನು ಕುರಿತಾಗಿ ಬರೆದರು. ತಮ್ಮ ಬರವಣಿಗೆ ಜನರ ಎದೆಯ ಕದಗಳನ್ನು ತಟ್ಟಬೇಕೆಂದು ಹಂಬಲಿಸಿದರು. ಸಾಹಿತ್ಯಸೃಷ್ಟಿಯ ಮೂಲಕ ಜನಸಂಪರ್ಕ ರೂಢಿಸಿಕೊಂಡದ್ದು ಮಾತ್ರವಲ್ಲದೆ ಜನಪರ ಚಳವಳಿಗಳನ್ನು ಹಮ್ಮಿಕೊಂಡರು. ಜನಾಂದೋಲನಗಳನ್ನು ಬೆಂಬಲಿಸಿದರು. ಉಗ್ರನವ್ಯರು ಮಾತ್ರ ತಮ್ಮ ವ್ಯಕ್ತಿವಾದಿ ಸಿದ್ಧಾಂತದ ಚಿಪ್ಪಿನಲ್ಲೇ ಹುದುಗಿಕೊಂಡರು.

ಕಳೆದ ನೂರು ವರ್ಷಗಳಲ್ಲಿ 'ಶುದ್ಧ ಸಾಹಿತ್ಯ'ಕ್ಕೆ ಸರಿಮಿಗಿಲೆಂಬಂತೆ ಶಾಸ್ತ್ರಸಾಹಿತ್ಯ ಅಥವಾ 'ಸೃಜನೇತರ' ಸಾಹಿತ್ಯ (?) ಬೆಳೆದಿದೆ. ಈ ರಂಬೆಯನ್ನೇರಿ ಕುಳಿತ ಬಹುಮಂದಿ ಲೇಖಕರು ವಿದ್ಯಾವಂತರಿಗೆ ತಮ್ಮ ಬರವಣಿಗೆ ಮುಟ್ಟಬೇಕೆಂಬ ಕಳಕಳಿಯಿಂದ ಬರೆದರು. ತಮ್ಮ ಸಾಹಿತ್ಯಕೃಷಿ ಅರ್ಥ ಪೂರ್ಣವಾಗುವುದು ಜನ ಓದಿತಿಳಿದು ಬೆಳೆದಾಗ ಎಂಬ ಸ್ಪಷ್ಟ ಅರಿವಿನಿಂದಲೇ ಬರೆದರು. ಹೀಗೆ ಬರೆಯುವ ಸಂದರ್ಭದಲ್ಲಿ ಶಾಸ್ತ್ರ ವಿಚಾರಗಳನ್ನು ಸಾಮಾನ್ಯರಿಗೆ ಮನವರಿಕೆ ಮಾಡಿಕೊಡಬೇಕೆಂಬ ಅತ್ಯುತ್ಸಾಹದಲ್ಲಿ ಸರಳೀಕರಿಸಿ 'ಜನಪ್ರಿಯ'ಗೊಳಿಸಿ ಹೇಳುವ ಪ್ರಯತ್ನಮಾಡಿ ನಿಖರತೆಗೆ ಅವರು ಕೊಂಚ ಕುತ್ತು ತಂದಿರಬಹುದು. ಆದರೆ ಕೃತಿರಚನೆಯ ಮೂಲಕ ಕನ್ನಡದಲ್ಲಿ ಓದುಗ ವರ್ಗವೊಂದನ್ನು ರೂಪಿಸಿ ಬೆಳೆಸಿದ ಕೀರ್ತಿ ಇವರಿಗೆ ಸಲ್ಲಬೇಕು.

ಬದುಕಿನ ಭಾಷೆಯಾಗಿ ರೂಪುಗೊಂಡ ಕನ್ನಡ ಈಗ ಸಾರ್ವಜನಿಕ ಕ್ಷೇತ್ರದಿಂದ ಕಣ್ಮರೆಯಾಗುತ್ತಿದೆಯೋ ಏನೋ ಎಂಬ ಆತಂಕ ಅಲ್ಲಲ್ಲಿ ವ್ಯಕ್ತವಾಗುತ್ತಿದೆ. ಕನ್ನಡ ಭಾಷಾ ಪ್ರಪಂಚ ಪರಭಾಷೆಗಳಿಂದ ಬೇಕುಬೇಕಾದುದನ್ನು ಸ್ವೀಕರಿಸಿ 'ಜೀರ್ಣಾಗ್ನಿ' ರೂಪದಲ್ಲಿ ಬೆಳೆದಿದೆ. ಆದರೂ ಇಂಗ್ಲಿಷ್ ಹಾಗೂ ಕನ್ನಡವನ್ನು ಎದುರುಬದುರಾಗಿಟ್ಟು ನೋಡುವ ಪ್ರಯತ್ನ ಸದ್ಯ ನಡೆದಿದೆ. ಈ ಹೋಲಿಕೆಯ ಪ್ರಯತ್ನ ಅಪ್ರಸ್ತುತವಲ್ಲವಾದರೂ ತುಲನಾತ್ಮಕ ನಿರ್ಣಯಗಳನ್ನು ರೂಪಿಸಿ, ತೀರ್ಪು ಕೊಡುವಾಗ ಅಪಾಯಗಳು ಕಂಡುಬರುತ್ತವೆ.

**ತೀರ್ಪುಗಳು ಹೀಗಿವೆ :**

✳ ಇಂಗ್ಲಿಷ್ ವಿಶ್ವಭಾಷೆ ವಿಜ್ಞಾನ ತಂತ್ರಜ್ಞಾನದ ಭಾಷೆ ಜಾಗತೀಕರಣದ ಭಾಷೆ ಆಧುನಿಕತೆಯ ಭಾಷೆ ಅಧಿಕಾರ ಹಾಗೂ ಅಂತಸ್ತನ್ನು ಕರುಣಿಸುವ ಭಾಷೆ ಸಾಧ್ಯತೆ ಮತ್ತು ಅವಕಾಶಗಳ ಭಾಷೆ ಐಟಿ-ಬಿಟಿಗಳ ಭಾಷೆ ಬೌದ್ಧಿಕತೆ ಮತ್ತು

"ನಮ್ಮ ತೋಟದಿನಿಯ ಹಣ್ಣು" ಕನ್ನಡನುಡಿಗೆ ಎರಡು ಸಾವಿರ ವರ್ಷಗಳ ಲಿಖಿತ ಪರಂಪರೆಯಿದೆ. ಇದಕ್ಕಿಂತಲೂ ಹಿರಿದಾದ ಅಲಿಖಿತ ಪರಂಪರೆಯಿದೆ; ಸಮೃದ್ಧ ವಾಙ್ಮಯವಿದೆ. ಹೀಗಿದ್ದರೂ ಬದುಕಿನ ಭಾಷೆಯಾಗಿ ಕನ್ನಡ ಎಂದರೇನು ? ಅದು ಎಂದಾದರೂ ಬದುಕಿನ ಭಾಷೆ ಆಗಿತ್ತೇ ? ಈಗ ಆಗಿದೆಯೇ ? ಕನ್ನಡ ಭಾಷೆ ಬದುಕಿನಿಂದ ದೂರ ಸರಿದಿದೆಯೇ ? ಬದುಕಿನ ಭಾಷೆಯಾಗಿ ಕನ್ನಡ ಎನ್ನುವಾಗ ಆತಂಕದ ದನಿ ಇದೆಯೇ ? ಹೆಮ್ಮೆ ಸಂಭ್ರಮ ಇದೆಯೇ ? ಎಂಬಿತ್ಯಾದಿ ಪ್ರಶ್ನೆಗಳು ಕಾಡುತ್ತವೆ.

ಜಾಗತಿಕಸಂವಹನದ ಭಾಷೆ

* ಕನ್ನಡ ಜಾಗತೀಕರಣದ ಭಾಷೆಯಲ್ಲ; ಆಧುನಿಕತೆಯ ಭಾಷೆಯಲ್ಲ. ಅದು ದರಿದ್ರಭಾಷೆ – ಇನ್ನೂ ಆಡುನುಡಿಯಾಗಿಯೇ ಉಳಿದಿದೆ. ಅದು 'ಸಾಂಸ್ಕೃತಿಕ ಭಾಷೆ', 'ಪ್ರಾದೇಶಿಕ ಭಾಷೆ', 'ಸಂವೇದನೆಯ ಭಾಷೆ'

ಎರಡು ಸಾವಿರ ವರ್ಷಗಳ ಸಮೃದ್ಧ ವಾಙ್ಮಯ ಸಂಪತ್ತು ಮತ್ತು ಜೀವನ ಇತಿಹಾಸ ಇರುವ ಭಾಷೆಗೆ ಆಧುನಿಕ ಸವಾಲುಗಳನ್ನು ಎದುರಿಸುವ ತಾಕತ್ತಿಲ್ಲ ಮತ್ತು ಜಾಗತೀಕರಣದ ಪ್ರಕ್ರಿಯೆಯಲ್ಲಿ ಅದು ಕೊನೆ ಉಸಿರೆಳೆಯುವುದು ಖಚಿತ ಎಂಬಂತೆ ಮಾತನಾಡುವುದು ಆ ಭಾಷೆಗೆ ಮಾಡುವ ಅಪಚಾರವೇ ಸರಿ.

ಈ ಹೊತ್ತು ಆಡಳಿತದ ಬಹುಭಾಗ ಕನ್ನಡದಲ್ಲಿ ನಡೆದಿದೆ; ಆರೆಕೊರೆಗಳಿಲ್ಲವೆಂದಲ್ಲ. ಬಹಳಷ್ಟು ವಿದ್ಯಾರ್ಥಿಗಳು ಕಾಲೇಜುಗಳಲ್ಲಿ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡುತ್ತಿದ್ದಾರೆ. ಕನ್ನಡದಲ್ಲಿ ಹೇಳಿ ಎಂದು ಒತ್ತಾಯಿಸುತ್ತಿದ್ದಾರೆ. ಕನ್ನಡದಲ್ಲಿ ವಿವಿಧ ಬಗೆಯ ಪರೀಕ್ಷೆಗಳನ್ನು ಬರೆಯುತ್ತಿದ್ದಾರೆ. ಕನ್ನಡದಲ್ಲಿ ಸದ್ಯ ಇರುವ ವಿದ್ಯುನ್ಮಾನ ಮಾಧ್ಯಮಗಳು, ಪತ್ರಿಕೆಗಳು, ಅವುಗಳ ಪ್ರಸಾರ ಸಂಖ್ಯೆ, ಕನ್ನಡದಲ್ಲಿ ಪ್ರಕಟವಾಗುತ್ತಿರುವ ವೈವಿಧ್ಯಮಯ ಗ್ರಂಥಗಳು ಕನ್ನಡ ಬದುಕಿನ ಭಾಷೆಯಾಗಿ ಮುಂದುವರಿಯುತ್ತಿದೆ ಎಂಬುದನ್ನು ಸೂಚಿಸುತ್ತವೆ. ಹೆಚ್ಚುತ್ತಿರುವ ಆಂಗ್ಲ ಮಾಧ್ಯಮಶಾಲೆಗಳು, ಜಾಗತೀಕರಣದ ಧಾವಂತ, ಮಾಹಿತಿ ತಂತ್ರಜ್ಞಾನದ ಬಗೆಗಿನ ಒಲವು ನಮ್ಮಲ್ಲಿ ಅಭದ್ರತೆಯ ಭಾವನೆಗಳಿಗೆ ಕಾರಣವಾಗಿವೆ. ತಪ್ಪು ಜಾಗತೀಕರಣದ್ದಲ್ಲ. ನಮ್ಮ ನೀತಿನಿರೂಪಕರು, ಆಡಳಿತಗಾರರು ಮತ್ತು ಸಾರ್ವಜನಿಕರು ಸದ್ಯದ ಆತಂಕದ ಸ್ಥಿತಿಗೆ ಕಾರಣಕರ್ತರು.

ಈ ನಾಡಿನಲ್ಲಿ ಕನ್ನಡ ಬದುಕಿನ ಭಾಷೆಯಾಗಿ ಉಳಿಯುವುದು ಬೆಳೆಯುವುದು ಶಿಕ್ಷಣದ ಎಲ್ಲ ಹಂತಗಳಲ್ಲಿ ಕನ್ನಡ ಮಾಧ್ಯಮವನ್ನು ಅಳವಡಿಸುವ ಮೂಲಕ. ಕುವೆಂಪು ಅವರು ಮಾನಸಗಂಗೋತ್ರಿ ರೂಪಿಸಿದಾಗ ಕನ್ನಡ ಮಾಧ್ಯಮದಲ್ಲಿ ಉನ್ನತ ಶಿಕ್ಷಣ ಒದಗಿಸುವ ನಿಟ್ಟಿನಲ್ಲಿ ಯೋಚಿಸಿ ಮಾಡಿದ ಪ್ರಯತ್ನಗಳನ್ನು ನಾವು ಮುಂದುವರಿಸಿಕೊಂಡುಬಂದಿಲ್ಲ. ನಮ್ಮನ್ನು ಆಳಿದ ರಾಜಕೀಯ ಪಕ್ಷಗಳು ಮತ್ತು ಸರಕಾರಗಳು ಆಂಗ್ಲ ಮಾಧ್ಯಮ ಶಾಲೆಗಳ ಸ್ಥಾಪನೆಯ ವಿಷಯದಲ್ಲಿ ತೋರಿದ ಔದಾರ್ಯವನ್ನು ಕನ್ನಡ ಮಾಧ್ಯಮದ ಪ್ರತಿಷ್ಠಾಪನೆಯ ವಿಷಯದಲ್ಲಿ ತೋರಲಿಲ್ಲ. ಸಂಕಲ್ಪಬಲರಹಿತರಾದ ನಾವು ಕನ್ನಡ ಮಾಧ್ಯಮ ಅಳವಡಿಸಿ ಎಂದು ಪ್ರಬಲ ಹೋರಾಟ ಹೂಡಲಿಲ್ಲ. ಹಾಗೆ ಮಾಡಿ ಯಶಸ್ವಿಯಾಗಿದ್ದಪಕ್ಷದಲ್ಲಿ ಸದ್ಯದ ಜಾಗತೀಕರಣದ ಭೂತಕ್ಕೆ ಬೆಚ್ಚಿ ಬೆದರಬೇಕಾಗಿರಲಿಲ್ಲ.

**ಇನ್ನಾದರೂ ನಾವು ಮಾಡಬೇಕಾದದ್ದು –**

* ಒಂದನೆಯ ತರಗತಿಯಿಂದ ಕನಿಷ್ಠ ಹತ್ತನೆಯ ತರಗತಿತನಕ ಕನ್ನಡ ಮಾಧ್ಯಮದಲ್ಲೇ ಬೋಧನೆ-ಕಲಿಕೆ
* ಪ್ರೌಢಶಾಲಾ ಹಂತದ ತನಕ ಕನ್ನಡ ಮಾಧ್ಯಮದಲ್ಲಿ ಕಲಿತವರಿಗೆ ವೃತ್ತಿಪರ ಶಿಕ್ಷಣ ಹಾಗೂ ಉದ್ಯೋಗರಂಗದಲ್ಲಿ ಕನಿಷ್ಠ ಶೇಕಡಾ ೫೦ರಷ್ಟು ಮೀಸಲಾತಿ
* ಖಾಸಗಿ ರಂಗದಲ್ಲಿ, ಉದ್ದಿಮೆಗಳಲ್ಲಿ ಕಡ್ಡಾಯವಾಗಿ ಈ ಮೀಸಲಾತಿ ಜಾರಿಗೆ ಬರಬೇಕು
* ಕನ್ನಡ ಮಾಧ್ಯಮದ ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಉನ್ನತ ಶಿಕ್ಷಣ ಹಾಗೂ ವೃತ್ತಿಶಿಕ್ಷಣದಲ್ಲಿ ಶುಲ್ಕ ವಿನಾಯಿತಿ.

'ಕನ್ನಡ ಬದುಕಿ ಉಳಿದಿರುವುದು ಲೇಖಕರಿಂದ' ಎಂಬ ಅರ್ಥಬರುವ ಮಾತನ್ನು ಕೆಲ ಸಮಯದ ಹಿಂದೆ ಅನಂತಮೂರ್ತಿಯವರು ಹೇಳಿದರೆಂದು ವರದಿಯಾಗಿದೆ. ಈ ಮಾತನ್ನು ಒಪ್ಪುವುದು ಕಷ್ಟ. ಕನ್ನಡ ಭಾಷೆಗೆ ಮೊನಚು ನೀಡಿದವರು, ಸಂವೇದನೆಗಳ ಸೂಕ್ಷ್ಮತೆ ಹೆಚ್ಚಿಸಿದವರು ಸಾಹಿತ್ಯಕ್ಷೇತ್ರದಲ್ಲಿ ಅನುಭವಶ್ರೀಮಂತಿಕೆ ತುಂಬಿದವರು ಕನ್ನಡದ ಲೇಖಕರು ಎಂಬುದು ನಿರ್ವಿವಾದದ ಸಂಗತಿ. ಆದರೆ ಸಾಹಿತ್ಯೇಕ ದೃಷ್ಟಿಯೊಂದೇ ಸಾಲದು. ಈ ನಾಡಿನಲ್ಲಿ ಕನ್ನಡ ಉಳಿದಿರುವುದು ಬೆಳೆದಿರುವುದು ಕನ್ನಡ ಮಾತನಾಡುವ ಕೂಲಿಕಾರ್ಮಿಕರು, ರೈತಾಪಿ ವರ್ಗದವರು, ಶ್ರಮಿಕರು, ಕೆಳಮಧ್ಯಮ ವರ್ಗದವರು, ಚಿಂದಿ ಆಯುವವರು, ಪತ್ರಿಕೆ ಮಾರುವ ಹುಡುಗರು ಮುಂತಾದ ಶ್ರೀಸಾಮಾನ್ಯರಿಂದ. ಮಾಧ್ಯಮ ಹಾಗೂ ಮೇಲು ಮಧ್ಯಮ ವರ್ಗದ ಜನ ಸಾಮಾಜಿಕ ಶ್ರೇಣೀಕರಣದಲ್ಲಿ ತ್ವರಿತವಾಗಿ ಮೇಲೇರಲು ಆಂಗ್ಲ ಮಾಧ್ಯಮವನ್ನು ಆಶ್ರಯಿಸಿ ವೃತ್ತಿ ಹಾಗೂ ಸಾರ್ವಜನಿಕ ರಂಗದಲ್ಲಿ ಕನ್ನಡದ ಬಳಕೆಯನ್ನು ಮಿತಗೊಳಿಸುತ್ತಾರೆ. ಶ್ರೀಸಾಮಾನ್ಯರಿಗೆ ತಮ್ಮೊಡನೆ ಬಂದ ಭಾಷೆಯ ಬಗ್ಗೆ ಅಭಿಮಾನ ಆದರ ಇದ್ದೇ ಇದೆ. ಹೀಗಾಗಿ ಅವರೆಂದೂ ಕನ್ನಡವನ್ನು ಕೈಬಿಡರು. ಬಡತನ ನಿವಾರಣಾ ಕಾರ್ಯಕ್ರಮಗಳಿಂದ ಬಡವರು ಹಾಗೂ ಸಾಮಾನ್ಯರ ಸಂಖ್ಯೆ ಕ್ಷೀಣಿಸುತ್ತದೆ ಎನ್ನಬಹುದು. ಆದರೆ ಎಲ್ಲ ಕಾಲಗಳಲ್ಲೂ ಶ್ರೀಸಾಮಾನ್ಯರು ಗಣನೀಯ ಸಂಖ್ಯೆಯಲ್ಲಿ ಇದ್ದೇ ಇರುತ್ತಾರೆ. ಇವರು ಮಿನುಗುತಾರೆಗಳಲ್ಲ, ದೀಪಸ್ತಂಭಗಳಲ್ಲ. ಆದರೆ ಇವರೇ ನಾಗರಿಕತೆ, ಸಂಸ್ಕೃತಿ ಹಾಗೂ ಸಾರ್ವಜನಿಕ ಜೀವನದ ಆಧಾರಸ್ತಂಭ. ಇವರಿಂದ ಖಂಡಿತಕ್ಕೂ ಕನ್ನಡ ವ್ಯವಹಾರರಂಗದಲ್ಲಿ ಬದುಕಿನ ಭಾಷೆಯಾಗಿ ಉಳಿಯುತ್ತದೆ. ಭಾವ ಪೋಷಣೆಯ ಭಾಷೆಯಾಗಿ ಹೊಸರೂಪ ತಳೆಯುತ್ತದೆ. ಮುಂದಿನ ದಿನಗಳಲ್ಲಿ ಕನ್ನಡದಲ್ಲಿ ಬೌದ್ಧಿಕತೆಯನ್ನು ಬೆಳೆಸುವ ನಿಟ್ಟಿನಲ್ಲಿ ತಂತ್ರಜ್ಞಾನದ ಪಾಲು ಏನು ಎಂಬುದನ್ನು ನಾವು ವಿವೇಚಿಸಬೇಕಷ್ಟೆ.

ಜಾಗತೀಕರಣವನ್ನು ಎದುರಿಸುವುದು ಹೇಗೆ ಎಂಬುದಕ್ಕಿಂತ ನಮ್ಮ ನಮ್ಮ ಪುಟ್ಟ ವಿಶ್ವಗಳಲ್ಲಿ ಕನ್ನಡದ ಬೇರು ಆಳವಾಗಿ ಇಳಿಯುವುದು ಹೇಗೆ ಎಂದು ಚಿಂತನ ನಡೆಸುವುದು ಮುಖ್ಯ. ಆದುದರಿಂದ ನಮ್ಮ ಅಭಿವೃದ್ಧಿಯ ಬಗೆಗಿನ ಚಿಂತನಗಳಲ್ಲಿ ಶ್ರೀಸಾಮಾನ್ಯನಿಗೆ ಅಗ್ರಪೂಜೆ ಸಲ್ಲಬೇಕು. "ಶ್ರೀಸಾಮಾನ್ಯನೆ ಭಗವನ್ಮಾನ್ಯಂ" ಎಂಬ ಕುವೆಂಪುವಾಣಿ ಕನ್ನಡದ ಅಭಿವೃದ್ಧಿಯಲ್ಲಿ ತಾರಕ ಮಂತ್ರವಾಗಬೇಕು. ಕನ್ನಡ ಸಾಹಿತ್ಯ ಸಮ್ಮೇಳನಗಳು, ಚಿಂತನ ಮಂಥನಗಳು ಸಾಮಾನ್ಯರನ್ನು ಒಳಗೊಳ್ಳುವ ಕಾರ್ಯಕ್ರಮಗಳಾಗಬೇಕು. ಶ್ರೀಸಾಮಾನ್ಯರನ್ನು ಹೊರಗಿಟ್ಟು ನಾವು ನಡೆಸುವ 'ಸಾಹಿತ್ಯ ಸಮಾರಾಧನ' ಕಾರ್ಯಕ್ರಮಗಳು ಅರ್ಥಹೀನವಾಗುತ್ತವೆ. ಎಂಥ ಸವಾಲುಗಳು ಎದುರಾದರೂ ಶ್ರೀಸಾಮಾನ್ಯರಿರುವ ತನಕ ಅವರಿಂದ ಬೆಂಬಲ ಸಿಗುವ ತನಕ ಕನ್ನಡ ಬದುಕಿನ ಭಾಷೆಯಾಗಿ ಮುಂದುವರಿಯುತ್ತದೆ. ಕೆಲವರಿಗೆ ಇದು ಭೋಳೆತನವಾಗಿ ಕಾಣಬಹುದು. ದಟ್ಟ ನೈರಾಶ್ಯ ಹಾಗೂ ಭಯಂಕರ ಸವಾಲುಗಳ ಅರಿವಿದ್ದೂ ನಾಡುನುಡಿಯ ಅಂತಃಶಕ್ತಿಯನ್ನು ದೃಷ್ಟಿಯಲ್ಲಿಟ್ಟುಕೊಂಡು ತಳೆದ ದೃಢವಿಶ್ವಾಸ ಇದು.

**ಡಾ|| ಮಹಾಬಲೇಶ್ವರ ರಾವ್**
ಪ್ರಿನ್ಸಿಪಾಲ್, ಡಾ|| ಟಿ.ಎಮ್.ಎ. ಪೈ ಕಾಲೇಜ್ ಆಫ್ ಎಜುಕೇಷನ್
ಕುಂಜಿಬೆಟ್ಟು, ಉಡುಪಿ - ೫೭೬ ೧೦೨, ಉಡುಪಿ ಜಿಲ್ಲೆ

# ಯುದ್ಧಭಯದ ನೆರಳಲ್ಲಿ

# ಇರಾನ್



ಇರಾನ್‌ನಲ್ಲಿ ಅಮೆರಿಕಾ-ಯೂರೋಪ್‌ಗಳ ಅತಿದುಷ್ಟ ಪಗಡೆಯಾಟದಿಂದಾಗಿ ಹೊಸ ದುರ್ಘಟನೆಯೊಂದು ಪ್ರಪಂಚಕ್ಕೆ ಅಪ್ಪಳಿಸುತ್ತಿದ್ದು ಮತ್ತೊಂದು ಯುಗೋಸ್ಲಾವಿಯಾ ಅಥವಾ ಇರಾಕ್‌ನಂತಹ ವಿನಾಶ ಸಂಭವಿಸುವುದು ಸ್ಪಷ್ಟವಾಗುತ್ತಿದೆ. ಕಳೆದ ಮಾರ್ಚ್‌ನಲ್ಲಷ್ಟೆ, ಅಂತರರಾಷ್ಟ್ರೀಯ ಅಣುಶಕ್ತಿ ಸಂಸ್ಥೆ (ಐಎಇಎ)ಯು ಇರಾನ್ ವಿಷಯವನ್ನು ವಿಶ್ವಸಂಸ್ಥೆಯ ಭದ್ರತಾ ಸಮಿತಿಯಲ್ಲಿ ಮಂಡಿಸಲು ನಿರ್ಣಯಿಸಿರುವುದು, ಇರಾನ್‌ನೊಂದಿಗೆ ತನ್ನ ರಾಜಕೀಯ ಸಂಬಂಧವನ್ನು ಸಂಪೂರ್ಣವಾಗಿ ಪುನರ್‌ರೂಪಿಸುತ್ತೇನೆಂದು ಇಸ್ರೇಲ್ ಭಯ ಮೂಡಿಸಿರುವುದು ಮತ್ತು ಎಲ್ಲಕ್ಕಿಂತ ಮುಖ್ಯವಾಗಿ ತನ್ನ ತೈಲ ಮಾರುಕಟ್ಟೆಯನ್ನು ಮುಕ್ತವಾಗಿರಿಸಲು ಇರಾನ್ ನಿರ್ಧರಿಸುವ ಅಂಶಗಳು ಮುಂದೆ ಜರುಗಬಹುದಾದ ಘಟನೆಗಳತ್ತ ಬೆರಳು ತೋರುತ್ತಿವೆ.

ಇಂದಿಗೆ ನೂರೈದು ವರ್ಷಗಳ ಹಿಂದೆ, ೧೯೦೧ರಲ್ಲಿ, ವಿಲಿಯಮ್ ನಾಕ್ಸ್ ಡಿ ಆರ್ಸಿ ಎಂಬ ಆಸ್ಟ್ರೇಲಿಯಾದ ತೈಲ ಅನ್ವೇಷಕನಿಗೆ ಅರವತ್ತು ವರ್ಷಗಳ ದೀರ್ಘಾವಧಿಗೆ ಖನಿಜದ ಹಕ್ಕುಗಳನ್ನು ಇರಾನ್ ನೀಡಿತು. ೧೯೦೮ರಲ್ಲಿ ಪರ್ಷಿಯಾದ ಮಣ್ಣಿನಲ್ಲಿ ಡಿ ಆರ್ಸಿಯ ತೈಲ ಅನ್ವೇಷಣೆಯೊಂದಿಗೆ ಈ ಭೂಮಿಯ ಇತಿಹಾಸವು ಎಂದೆಂದಿಗೂ ಬದಲಾಗಿ ಹೋಯಿತು. ಈತ ಅನ್ವೇಷಿಸಿದ ದ್ರವ 'ಚಿನ್ನ'ದ ವ್ಯೂಹಾತ್ಮಕ ಪ್ರಾಮುಖ್ಯತೆಯನ್ನು ಮನಗಂಡ ಇಂಗ್ಲೆಂಡ್ ಕಲ್ಲಿದ್ದಲು-ಆಧಾರಿತ ಯಂತ್ರಗಳೆಲ್ಲವನ್ನೂ ತೈಲ-ಚಾಲಿತಗಳನ್ನಾಗಿ ಪರಿವರ್ತಿಸತೊಡಗಿತು. ಬ್ರಿಟಿಷ್ ಪ್ರತಿಗಾಮಿಗಳ ಸೇವೆಗೈಯ್ಯುತ್ತಿದ್ದ ಕುಖ್ಯಾತ ಪತ್ತೇದಾರ ಸಿಡ್ನಿ ರೈಲಿಯು, ನಂತರ ಬ್ರಿಟಿಷ್ ಪೆಟ್ರೋಲಿಯಂ (ಬಿಪಿ) ಎಂಬ ಬ್ರಿಟಿಷ್ ನಿಯಂತ್ರಿತ ಆಂಗ್ಲೋ-ಪರ್ಷಿಯಾ ತೈಲ ಕಂಪನಿಗೆ ತನ್ನ ಗುತ್ತಿಗೆಯನ್ನು ಮಾರುವಂತೆ ಡಿ ಆರ್ಸಿಗೆ ಲಂಚ ನೀಡಿದ (ಪಶ್ಚಿಮದಲ್ಲಿ ಅಗೋಚರವಾಗಿಯೇ ಇದ್ದನೆನ್ನಲಾಗುವ ಈ ಕುಖ್ಯಾತ ಪತ್ತೇದಾರನನ್ನು ಅಕ್ಟೋಬರ್ ಕ್ರಾಂತಿಯ ದಿನಗಳಲ್ಲಿ ಕ್ರಾಂತಿಕಾರಿ ರಷ್ಯಾದ ರೈತರು ಮತ್ತು ಕಾರ್ಮಿಕರು ಗುಂಡಿಟ್ಟು ಕೊಂದರು). ಪ್ರಥಮ ಮಹಾಯುದ್ಧದ ನಂತರ ೧೯೨೧ರಲ್ಲಿ ರೇಜ಼ಾಖಾನ್ ಎಂಬ ಪರ್ಷಿಯಾದ ಸೇನಾಧಿಕಾರಿಯು ಕ್ಷಿಪ್ರಕ್ರಾಂತಿಯ ಮುಖಾಂತರ ಪಹಲ್ವಿ ಅರಸೊತ್ತಿಗೆಯನ್ನು ಸ್ಥಾಪಿಸಿದನು. ದಶಕದ ನಂತರ ರೇಜ಼ಾಖಾನ್ ತನ್ನ ರಾಷ್ಟ್ರದಲ್ಲಿ ನಾಜ಼ಿ ಜರ್ಮನಿಯ ವ್ಯಾಪಾರ ಹಿತಾಸಕ್ತಿಗಳನ್ನು ಪ್ರೋತ್ಸಾಹಿಸಿದ ಮೇಲೆ ೧೯೩೫ರಲ್ಲಿ ಪರ್ಷಿಯಾದ ಪೌರಾಣಿಕ ಭೂಖಂಡವು ಇರಾನ್ ಎಂದು ಬದಲಾಯಿತು ('ಆರ್ಯ' ಪದಕ್ಕೆ ಪಾರ್ಸಿ). ೧೯೪೧ರಲ್ಲಿ ಇರಾನಿನ ಪ್ರತಿರೋಧವನ್ನು ಯುಎಸ್‌ಎಸ್‌ಆರ್ ಪುಡಿಗಟ್ಟಿದ ನಂತರ 'ಶಾಹ'ನು ಅಮೆರಿಕಾದ ಇರಾನಿ ಗುಲಾಮನಾಗಿ ಕಾಲು ಶತಮಾನಕ್ಕೂ ಹೆಚ್ಚು ಸೇವೆ ಸಲ್ಲಿಸಿರುವ ಕುಖ್ಯಾತಿ ಹೊಂದಿದ ತನ್ನ ಮಗ ಮೊಹಮ್ಮದ್ ರೇಜ಼ಾ ಶಾಹ ಪಹಲ್ವಿಗೋಸ್ಕರ ಅಧಿಕಾರ ತ್ಯಜಿಸಿದನು.

ದ್ವಿತೀಯ ಮಹಾಯುದ್ಧಾನಂತರ, ಭೂ-ಒಡೆಯನಾಗಿದ್ದ ಗಣ್ಯ ಮೊಹಮ್ಮದ್ ಮೊಸಾದೆಕ್‌ನು ಇರಾನ್ ದೇಶದ ಚುನಾಯಿತ ನಾಯಕನಾಗಿ ಇರಾನ್‌ಅನ್ನು ಆಧುನಿಕಗೊಳಿಸುವ ಗುರಿಯೊಂದಿಗೆ ಬ್ರಿಟಿಷ್ ಪೆಟ್ರೋಲಿಯಂನ ವಿಶೇಷ ವಿನಾಯಿತಿಗಳೆಲ್ಲವನ್ನು ರಾಷ್ಟ್ರೀಕರಣಗೊಳಿಸಿದನು. ಟೈಮ್ಸ್ ಪತ್ರಿಕೆಯ ವರ್ಷದ ವ್ಯಕ್ತಿಯೂ (೧೯೫೧) ಸಹ ಆದ ಮೊಸಾದೆಕ್ ವಿಶ್ವಸಂಸ್ಥೆಯಲ್ಲಿ ಮಾಡಿದ ಉಗ್ರ ಭಾಷಣಗಳು ತೃತೀಯ ವಿಶ್ವದ ಶ್ರೀಮಂತ ರಾಷ್ಟ್ರಗಳಿಗೆ ನಿಸ್ಸಂಶಯವಾಗಿ ಸ್ವಾಗತ ನೀಡುತ್ತಿದ್ದವು. ಆಶ್ಚರ್ಯವೇನೂ ಇಲ್ಲವೆಂಬಂತೆ ೧೯೫೩ರಲ್ಲಿ ಸಿಐಎ ಕೈವಾಡದಿಂದ ಮೊಸಾದೆಕ್‌ಅನ್ನು ಪದಚ್ಯುತಗೊಳಿಸಲಾಯಿತು. ಈ ದುಷ್ಕೃತ್ಯದಲ್ಲಿ ತೊಡಗಿಕೊಂಡಿದ್ದವನು ೧೯೯೦ರ ಗಲ್ಫ್ ಯುದ್ಧದಲ್ಲಿ ಆಪರೇಷನ್ ಡೆಸರ್ಟ್ ಸ್ಟಾರ್ಮ್‌ನಲ್ಲಿ ಇರಾಕಿ ಪುರುಷರು ಮತ್ತು ಮಹಿಳೆಯರ ಮಾರಣಹೋಮದ ಉಸ್ತುವಾರಿ ವಹಿಸಿದ್ದ ಅಮೆರಿಕಾದ ಜನರಲ್ ನಾರ್ಮನ್ ಸ್ವಾರ್ಟ್ಜ್‌ಕಾಫ್ (ಅಧ್ಯಕ್ಷ ರೂಸ್‌ವೆಲ್ಟ್‌ರ ಸ್ವಂತ ಮಗ ಕೂಡ). ಈ 'ಪರಾಕ್ರಮ'ಕ್ಕಾಗಿ ಇರಾಕ್‌ನ ವೀರೋಚಿತ ವಿಮೋಚನೆಯ ಹೆಸರಿನಲ್ಲಿ ಅವನಿಗೆ ಇಂಗ್ಲಿಷ್ ರಾಣಿಯು ನೈಟ್ ಪ್ರಶಸ್ತಿ ನೀಡಿದ್ದು, ಈಗ ಇವನು ಕ್ಯಾನ್ಸರ್ ರೋಗದಿಂದ ಬಳಲುತ್ತಿದ್ದು ಇನ್ನೇನು ಸರಕಕ್ಕೆ ಹಾರಲು ಸಿದ್ಧನಾಗಿದ್ದಾನೆ! ಕಳೆದ ಶತಮಾನದಲ್ಲೇ ಇರಾನಿ ಜನತೆಯ ಬಹು ಜನಪ್ರಿಯ ನಾಯಕರಾದ ಮೊಸಾದೆಕ್ ೧೯೬೭ರಲ್ಲಿ ಗೃಹಬಂಧನದಲ್ಲಿದ್ದಾಗಲೇ ಕಣ್ಮುಚ್ಚಿದನು. ಮೊಸಾದೆಕ್ ನಂತರ ಅಮೆರಿಕಾದ ನಿರ್ದೇಶನದ ಮೇರೆಗೆ 'ಶಾಹ'ನು ಸರ್ವಾಧಿಕಾರಿ ಅಧಿಕಾರವನ್ನು ಬದಲಾಯಿಸಿದ. ತನ್ನ ೨೫ ವರ್ಷಗಳ ದೀರ್ಘಾವಧಿ ದುರಾಡಳಿತದಲ್ಲಿ ಯಾವುದೇ ಅಡೆತಡೆಯಿಲ್ಲದೆ ಅಮೆರಿಕಾದ ಕಂಪನಿಗಳು ರಾಷ್ಟ್ರವನ್ನು ಲೂಟಿ ಮಾಡಿದರೆ, ಸಾವಿರಾರು ಇರಾನಿ ನಾಗರಿಕರು ದೌರ್ಜನ್ಯಕ್ಕೆ ಬಲಿಯಾದರು. (ಮೈಕೆಲ್ ಸೇಯರ್ಸ್ ಮತ್ತು ಆಲ್ಬರ್ಟ್ ಖಾನ್‌ರವರ '*ದಿ ಗ್ರೇಟ್ ಕಾನ್‌ಸ್ಪಿರೆಸಿ: ದಿ ಸೀಕ್ರೆಟ್ ವಾರ್ ಎಗೆನೆಸ್ಟ್ ಸೋವಿಯತ್ ರಷ್ಯಾ*').

೧೯೭೯ರ ಇಸ್ಲಾಂ ಕ್ರಾಂತಿಯೊಂದಿಗೆ ಇವೆಲ್ಲದಕ್ಕೂ ತೆರೆಬಿದ್ದಿತು. "ಅರಸೊತ್ತಿಗೆಯನ್ನು ವಿರೋಧಿಸಲು ಬದುಕುಳಿಯಲು ಸಾಧ್ಯವಿರುವ ಏಕೈಕ ಶಕ್ತಿಯಾಗಿ ಇಸ್ಲಾಂ ಧಾರ್ಮಿಕ ಸಂಸ್ಥೆಯು ಮೂಡಿಬರಲು ಕಮ್ಯುನಿಸ್ಟರು ಮತ್ತು ಧರ್ಮನಿರಪೇಕ್ಷಿತ ರಾಷ್ಟ್ರೀಯವಾದಿಗಳ ವಿರುದ್ಧ ಹರಿಯಬಿಟ್ಟ ಭಯೋತ್ಪಾದನೆ ಕಾರಣವಾಗಿತ್ತು." (ಐಜಾಜ್ ಅಹ್ಮದ್, ಫ್ರಂಟ್‌ಲೈನ್, ಅಕ್ಟೋಬರ್, ೨೦೦೫). ಖೊಮಿನಿಯು ಅಧಿಕಾರ ಗ್ರಹಣ ಮಾಡುವಲ್ಲಿ ಬ್ರಿಟಿಷ್ ಗೂಢಚರ್ಯೆ ಮತ್ತು ಸಿಐಎ ಎರಡೂ ಪಾತ್ರ ವಹಿಸಿದ್ದವೆಂದು ಕೆಲವು ವಿಶ್ಲೇಷಕರು ಅಭಿಪ್ರಾಯ ಪಡುತ್ತಾರೆ. ಅರಬ್ ರಾಷ್ಟ್ರೀಯ ವಾದವನ್ನು ಭಗ್ನಗೊಳಿಸಲು ಮಧ್ಯಪ್ರಾಚ್ಯದಾದ್ಯಂತ ಇಸ್ಲಾಂ ವಿಚಾರಧಾರೆಗೆ ವಾಷಿಂಗ್ಟನ್ ಒಂದೆಡೆ ಕಿಡಿ ಹೊತ್ತಿಸಿದರೆ, ಮತ್ತೊಂದೆಡೆ ಆಫ್ಘಾನಿಸ್ತಾನ ಮತ್ತು ಬಾಲ್ಕನ್‌ನಲ್ಲಿ ರಷ್ಯಾದ ಮುನ್ನಡೆಗೆ ತೊಡರುಗಾಲು ಹಾಕುತ್ತಿತ್ತು. ೧೯೮೯ರಲ್ಲಿ ಖೊಮಿನಿ ಮರಣಾನಂತರ ಅಧಿಕಾರಕ್ಕೆ ಬಂದ ಉದಾರವಾದಿ ರಫ್ಸಂಜಾನಿಯು ಅಮೆರಿಕಾದೊಂದಿಗೆ ಬಾಂಧವ್ಯ ಉತ್ತಮಪಡಿಸಿಕೊಳ್ಳಲು ಮತ್ತು ಇರಾನ್‌ಗೆ ವಿದೇಶಿ ಬಂಡವಾಳವನ್ನು ತರಬಯಸಿದ್ದನು. ರಫ್ಸಂಜಾನಿಯ ತರುವಾಯ ೧೯೯೭ರ ಚುನಾವಣೆಯಲ್ಲಿ ಅಧಿಕಾರಕ್ಕೆ ಬಂದ ಖತಾಮಿ ಮತ್ತೊಬ್ಬ ಉದಾರವಾದಿಯಾಗಿದ್ದು ಅಮೆರಿಕಾ ಮತ್ತು ಸೌದಿ ಅರೇಬಿಯಾ ಗಳೊಡನೆ ಬಾಂಧವ್ಯ ವೃದ್ಧಿಪಡಿಸಲು ಯತ್ನಿಸಿದರು. ಆದಾಗ್ಯೂ, ಇರಾನ್. ಚೀನಾ ಮತ್ತು ರಷ್ಯಾಗಳೊಡನೆ ಮತ್ತು ತೀರಾ ಇತ್ತೀಚೆಗೆ ಕ್ಯೂಬಾ ಮತ್ತು ವೆನಿಜುವೆಲಾಗಳೊಡನೆ ತನ್ನ ಆರ್ಥಿಕ ಮತ್ತು ಭದ್ರತಾ ಸಂಬಂಧಗಳನ್ನು ಅಭಿವೃದ್ಧಿಪಡಿಸಿಕೊಳ್ಳುತ್ತಲಿದೆ. ೨೦೦೫ರಲ್ಲಿ ಇತ್ತೀಚೆಗೆ ನಡೆದ ಚುನಾವಣೆಯಲ್ಲಿ ಮೂಲಭೂತವಾದಿಯಾಗಿರುವ ಪ್ರಸಕ್ತ ಅಧ್ಯಕ್ಷ ಮೊಹಮ್ಮದ್ ಅಹ್ಮದಿನೆಜಾದ್ ಖತಾಮಿಯನ್ನು ಸೋಲಿಸಿದ. ಇಸ್ರೇಲ್‌ನ್ನು ನಾಶಪಡಿಸುತ್ತೇನೆಂಬ ಅವರ ಹೇಳಿಕೆಯು ಅತಿ ಹೆಚ್ಚು ಪ್ರತಿಕ್ರಿಯೆಗೊಳಗಾಯಿತು.

**ಡಿ. ರಾಯ್ ಮತ್ತು ಜೈಕುಮಾರ್**

### ಇರಾನ್‌ನ ಶಕ್ತಿ ಸಂಪನ್ಮೂಲಗಳು

ಜಾಗತಿಕ ಇಂಧನ ಮಾರುಕಟ್ಟೆಯಲ್ಲಿ ಇರಾನ್‌ನ ಒಂದು ಬಹುಮುಖ್ಯ ಪಾತ್ರವಿದೆ. ಸೌದಿ ಅರೇಬಿಯಾವನ್ನು ಹೊರತುಪಡಿಸಿದರೆ, ಅತಿ ಹೆಚ್ಚು ತೈಲ ಸಂಪನ್ಮೂಲವನ್ನು ಇರಾನ್ ಹೊಂದಿದೆಯೆಂದು ಅಂದಾಜಿಸಲಾಗಿದೆ. ಇರಾನ್‌ನ ತೈಲ ಸಂಗ್ರಹವು ಅಂದಾಜು ೧೨೬ ಬಿಲಿಯನ್ ಬ್ಯಾರೆಲ್‌ಗಳಷ್ಟಿದ್ದು ಇದು ಜಾಗತಿಕ ತೈಲ ಸಂಗ್ರಹದ ಒಟ್ಟು ಪಾಲಿನಲ್ಲಿ ಶೇಕಡಾ ೧೦-೧೧ರಷ್ಟಿದೆ. ಆದರೆ ಇರಾನಿನ ವಾಸ್ತವ ತೈಲ ಸಂಗ್ರಹವು ಸರಿಸುಮಾರು ವಿಶ್ವದ ಒಟ್ಟಾರೆ ತೈಲ ಸಂಗ್ರಹದಲ್ಲಿ ಶೇಕಡಾ ೨೦ರವರೆಗೂ ಇದೆಯೆಂದು ಅಂದಾಜು ಮಾಡಲಾಗಿದೆ. ಇರಾನ್‌ನ ಬಹುತೇಕ ತೈಲಬಾವಿಗಳು ಇರಾಕ್ ಮತ್ತು ಗಲ್ಫ್‌ಅನ್ನು ವಿಭಜಿಸುವ ಖುಜೆಸ್ತಾನ್ ಎಂಬ ಗಡಿರೇಖೆಯ ಬಳಿಯಿವೆ. ಅಜ್ಹದೇಗಾನ್ ಮತ್ತು ಯಾದವರನ್ ಎಂಬ ಇರಾನ್‌ನ ಪ್ರಖ್ಯಾತ ತೈಲಬಾವಿಗಳಿರುವುದು ಕೂಡ ಖುಜೆಸ್ತಾನ್‌ದಲ್ಲಿಯೇ. ಚೀನಾ ಸರ್ಕಾರದ ಮಾಲೀಕತ್ವ ಹೊಂದಿರುವ 'ಚೀನಾ ಪೆಟ್ರೋಲಿಯಂ ಮತ್ತು ಕೆಮಿಕಲ್ ಕಾರ್ಪೊರೇಷನ್' ಎಂಬ ತೈಲ ಕಂಪನಿಯು ಯಾದವರನ್ ಪ್ರದೇಶದಲ್ಲಿದ್ದು ಶೇಕಡಾ ೫೦ರಷ್ಟು ಪಾಲನ್ನು ಚೀನಾ ಹೊಂದಿದೆ. ಖುಜೆಸ್ತಾನ್‌ನಲ್ಲಿ ಅಮೆರಿಕಾ-ಬ್ರಿಟನ್ ಮಿಲಿಟರಿಯು ನಿರಂತರವಾಗಿ ಕವಾಯಿತು ನಡೆಸುತ್ತಿರುವುದಕ್ಕೆ ಕಾರಣವು ಸ್ಪಷ್ಟವಾಗಿ ಇಲ್ಲಿದೆ.

### ಇರಾನ್‌ನೊಂದಿಗಿನ ಸಂಘರ್ಷವನ್ನು ಉದ್ದೇಶಪೂರ್ವಕವಾಗಿ ಯೋಜಿಸಲಾಗಿದೆಯೇ ?

ಕಳೆದ ದಶಕಗಳ ಐತಿಹಾಸಿಕ ಘಟನಾವಳಿಗಳನ್ನು ಅನುಸರಿಸುತ್ತಿರುವವರಿಗೆ ಉತ್ತರ ಈಗಾಗಲೇ ಮನವರಿಕೆಯಾಗಿರುತ್ತದೆ. ತೆಹರಾನ್‌ನಲ್ಲಿ "ಆಳ್ವಿಕೆ ಬದಲಾವಣೆ"ಗೊಳಿಸಲು ದೀರ್ಘಕಾಲದಿಂದಲೂ ಯೋಜನೆಗಳನ್ನು ರೂಪಿಸುತ್ತಾ ಬರಲಾಗಿತ್ತು ಮತ್ತು ಮುಂಬರುವ ಇರಾನ್‌ನ ಚಿತ್ರಣವೇನೆಂದು ಇರಾಕ್ ಮತ್ತು ಯುಗೋಸ್ಲೋವಿಯಾಗಳತ್ತ ದೃಷ್ಟಿಹಾಯಿಸಿ ಕಲ್ಪಿಸಿಕೊಳ್ಳಬಹುದಾಗಿದೆ. ಇರಾನ್ ವಿರುದ್ಧ ಅಮೆರಿಕಾ ಸಿದ್ಧಪಡಿಸಿರುವ ಯುದ್ಧ ಯೋಜನೆಗಳನ್ನು ಬೆಂಜಮಿನ್ ನೇತಾನ್ಯಹು (*ದಿ ಜೆರುಸಲೆಂ ಪೋಸ್ಟ್*, ೦೧-೦೨-೨೦೦೨) ಮತ್ತು ಡಿಕ್ ಚೆನಿ (*ದಿ ನ್ಯೂಯಾರ್ಕ್ ಟೈಮ್ಸ್*, ೦೨-೧೬-೨೦೦೨) ಅವರ ಹೇಳಿಕೆಗಳು ಬಹಿರಂಗಗೊಳಿಸುತ್ತವೆ. ೨೦೦೫ರ ಫೆಬ್ರುವರಿಯಲ್ಲಿ ಪೆನ್ಸಿಲ್ವೇನಿಯಾದ ರಿಪಬ್ಲಿಕನ್ ಸೆನೆಟರ್ ರಿಕ್ ಸ್ಯಾಂಟೋರಮ್ 'ಇರಾನಿ ಸರ್ಕಾರದೊಂದಿಗೆ ಕೆಲಸ ಮಾಡುವ ನಿಷ್ಪ್ರಯೋಜಕತೆಯ ಬಗ್ಗೆ ಹಾಗೂ ಇರಾನ್‌ನಲ್ಲಿ ಪ್ರಜಾಪ್ರಭುತ್ವದ ಗಿಡ ನೆಡುವ ಕುರಿತು' ಫಾಕ್ಸ್ ಸುದ್ದಿ ಚಾನೆಲ್‌ಗೆ ಉಗ್ರವಾಗಿ ತಿಳಿಸಿದ್ದನು. "ಇರಾನ್ ಮತ್ತು ಅಂತರರಾಷ್ಟ್ರೀಯ ಸಮುದಾಯಗಳ ನಡುವಿನ ಮಾತುಕತೆಯು ಮುಗಿದ ಅಧ್ಯಾಯವಾಗಿರುವುದರಿಂದ ಯಾವುದೇ ರೀತಿಯ ಮಾತುಕತೆಗೆ ಅವಕಾಶವೇ ಇಲ್ಲ"ವೆಂದು ಅಮೆರಿಕಾದ ಕಾರ್ಯದರ್ಶಿ ಕಾಂಡೋಲೀಜ಼ಾ ರೈಸ್ ಹೇಳಿದ್ದಳು (೦೧-೨೩-೨೦೦೬). ಇರಾಕ್‌ನಲ್ಲಿ ಯುದ್ಧಪಡೆಗಳ ಇನ್ಸ್‌ಪೆಕ್ಟರ್ ಆಗಿದ್ದ ಅಮೆರಿಕಾದ ಸ್ಕಾಟ್ ರಿಟ್ ಹಿಂದಿನಿಂದಲೂ ಅಮೆರಿಕಾದ ಯುದ್ಧ ವಿರೋಧಿ ಚಳುವಳಿಗಳ ಕಾರ್ಯಕರ್ತನಾಗಿದ್ದು ಅಮೆರಿಕಾದ ಇರಾನ್-ವಿರೋಧಿ ಯುದ್ಧ ಯೋಜನೆಗಳ ಕುರಿತು ವಿಶ್ವವನ್ನು ಮತ್ತೆ ಮತ್ತೆ ಎಚ್ಚರಿಸುತ್ತಲೇ ಇದ್ದಾರೆ. ಆದರೆ ೨೦೦೮ರ ಅಧ್ಯಕ್ಷೀಯ ಚುನಾವಣೆಯನ್ನು ಗುರಿಯಾಗಿಸಿಕೊಂಡಿರುವ ಹಿಲರಿ ಕ್ಲಿಂಟನ್ ಮಾತ್ರ ಬುಷ್‌ಗೆ ತಾನೇನೂ ಕಡಿಮೆಯಿಲ್ಲವೆಂದು ಇರಾನ್ ವಿರುದ್ಧ ಎಲ್ಲ ವೇದಿಕೆಗಳಲ್ಲೂ ಮುಷ್ಟಿ ಕಾಳಗ ನಡೆಸುತ್ತಿದ್ದಾಳೆ. ಇರಾನ್ ಬಿಕ್ಕಟ್ಟಿನ ವಿಷಯದಲ್ಲಿ ಅಮೆರಿಕಾದ ಪರವಾಗಿ ಭಾರತ ಎದ್ದುನಿಲ್ಲಬೇಕೆಂದು ಉದಾರವಾದಿ ಡೆಮೊಕ್ರಾಟ್ ಸೆನೆಟರ್ ಜಾನ್ ಕೆರ್ರಿ ಹೇಳುತ್ತಿದ್ದಾನೆ.

### ಇರಾನ್ ಮೇಲೆ ಯುದ್ಧವೇಕೆ ?

ಇರಾಕ್ ವಿಷಯದಲ್ಲಿ, ಅದು ಹೊಂದಿದೆಯನ್ನಲಾದ ಸಮೂಹನಾಶ ಶಸ್ತ್ರಾಸ್ತ್ರಗಳ ಕುರಿತಂತೆ ಹಿಮಾಲಯದೆತ್ತರದಷ್ಟು ಹಸಿಸುಳ್ಳುಗಳನ್ನು ಅಮೆರಿಕಾದ ಬಲಾಢ್ಯ ಮಾಧ್ಯಮಗಳಲ್ಲಿ ಬಿತ್ತರಿಸಲಾಗುತ್ತಿದೆ. ಇರಾನ್ ಅಣ್ವಸ್ತ್ರಗಳನ್ನು ಹೊಂದಿದೆಯೆಂಬ ಸುದ್ದಿಯಲ್ಲಿ ಏನೇನೂ ಹುರುಳಿಲ್ಲ, ಏಕೆಂದರೆ, ಇರಾನ್ ಬಾಂಬ್ ತಯಾರಿಸಲು ಇನ್ನೂ ಹತ್ತು ವರ್ಷಗಳಷ್ಟು ದೂರವಿದೆಯೆಂದು ಅಮೆರಿಕಾದ್ದೇ ರಾಷ್ಟ್ರೀಯ ಗೂಢಚರ್ಯೆ ಅಂದಾಜು ಮಾಡಿತ್ತು (*ದಿ ವಾಷಿಂಗ್ಟನ್ ಪೋಸ್ಟ್*, ೦೮-೦೨-೦೫). ರಷ್ಯಾ ಮತ್ತು ವೆನಿಜುವೆಲಾಗಳನ್ನು ಹೊರತುಪಡಿಸಿದರೆ, ಅಮೆರಿಕಾ ಸೇನೆಯ ನೇರ ಹಾಜರಾತಿಯಿಲ್ಲದೆ ತೈಲ ಉತ್ಪಾದನೆಯಲ್ಲಿ ತೊಡಗಿರುವ ಪ್ರಧಾನ ರಾಷ್ಟ್ರವೆಂಬ ಹೆಗ್ಗಳಿಕೆ ಇರಾನ್‌ದಾಗಿದೆ.

ಭಾರತ, ಪಾಕಿಸ್ತಾನ, ಈಜಿಪ್ಟ್ ದೇಶಗಳಂತಲ್ಲದೆ, ರಷ್ಯಾ, ಚೀನಾಗಳೊಂದಿಗೆ, ಅದರಲ್ಲೂ ವಿಶೇಷವಾಗಿ ಅಮೆರಿಕಾದೊಡನೆ ತೊಡೆತಟ್ಟಿ ನಿಂತಿರುವ ವೆನಿಜುವೆಲಾ ಮತ್ತು ಕ್ಯೂಬಾಗಳೊಡನೆ, ಇರಾನ್ ತನ್ನ ಆರ್ಥಿಕ ಮತ್ತು ಭದ್ರತಾ ಸಂಬಂಧಗಳನ್ನು ಗಟ್ಟಿಗೊಳಿಸುತ್ತಿದೆ. ಇರಾನ್ ತನ್ನ ತೈಲದಲ್ಲಿ ಶೇಕಡಾ ೧೩ರಷ್ಟನ್ನು ಚೀನಾಗೆ ಮಾರಿದರೆ, ಶೇಕಡಾ ೧೪ ಜಪಾನ್ ಮತ್ತು ಅಂದಾಜು ಶೇಕಡಾ ೪೫ರಷ್ಟನ್ನು ಯೂರೋಪ್ ಮತ್ತು ಶೇಕಡಾ ೫ಕ್ಕಿಂತ ಕಡಿಮೆಯಷ್ಟನ್ನು ಅಮೆರಿಕಾಗೆ ಮಾರುತ್ತಿದೆ. ಆದರೆ ಅಮೆರಿಕಾ ಶೇಕಡಾ ೬೦ರಷ್ಟು ತೈಲವನ್ನು ವೆನಿಜುವೆಲಾ, ಕೆನಡಾ ಮತ್ತು ನೈಜೀರಿಯಾಗಳಿಂದ ಆಮದು ಮಾಡಿಕೊಳ್ಳುತ್ತದೆ.

ಇರಾಕಿನ ಮೇಲೆ ಆಕ್ರಮಣವಾದ ನಂತರ, ಪ್ರಾದೇಶಿಕವಾಗಿ ಬಹು ಪ್ರಧಾನ ಆರ್ಥಿಕ ಮತ್ತು ಮಿಲಿಟರಿ ಶಕ್ತಿಯಾಗಿ ಇರಾನ್ ಮೂಡಿಬಂದಿದೆ. ಅದು ಅಬು ಮ್ಯುಸಾ ದ್ವೀಪದಲ್ಲಿ ದೂರಗಾಮಿ ನೌಕಾ-ವಿರೋಧಿ ಕ್ಷಿಪಣಿಗಳ ರಾಶಿಯನ್ನು ಹೊಂದಿದ್ದು, ಅಮೆರಿಕಾದ ಏಜಿಸ್ ರೇಡಾರ್ ರಕ್ಷಣಾ ವ್ಯವಸ್ಥೆಯನ್ನು ವಿಫಲಗೊಳಿಸಲೆಂದೇ ರಷ್ಯಾದಲ್ಲಿ ತಯಾರಾದ ಮತ್ತು ನಿರ್ದಿಷ್ಟವಾಗಿ ವಿನ್ಯಾಸಗೊಳಿಸಿರುವ ಸನ್‌ಬರ್ನ್ ಕ್ಷಿಪಣಿಗಳನ್ನು ಹೊಂದಿದೆ; ಆಫ್ಘಾನಿಸ್ತಾನ, ಉಜ್ಬೇಕಿಸ್ತಾನ, ಕತರ್ ಮತ್ತು ಸೌದಿ ಅರೇಬಿಯಾಗಳನ್ನೂ ತಲುಪುವ ಸಾಮರ್ಥ್ಯವುಳ್ಳ ಉತ್ತರ ಕೊರಿಯಾ ವಿನ್ಯಾಸದ ಸ್ಕಡ್‌ಗಳು ಮತ್ತು ಷಾಹಬ್-೩ ಬಾಲಿಸ್ಟಿಕ್ ಕ್ಷಿಪಣಿಗಳನ್ನು ಹೊಂದಿದೆ.

ಕನಿಷ್ಠ ಪಕ್ಷ ೨೦೦೩ನೇ ವರ್ಷದಿಂದ ತೈಲ ಬೆಲೆ ನಿಷ್ಕರ್ಷೆ 'ಡಾಲರ್'ನಲ್ಲಿದ್ದರೂ ತನ್ನ ತೈಲ ಖರೀದಿ ಹಣ ಪಾವತಿಯನ್ನು 'ಯೂರೋ' ರೂಪದಲ್ಲಿ ಕೊಡಬೇಕೆಂದು ಬೇಡಿಕೆಯನ್ನು ಮುಂದಿಟ್ಟಿದೆ. ನಿರೀಕ್ಷಿತ ಫಲ ಸಿಗದಿದ್ದರಿಂದ ಅಮೆರಿಕಾ ತೈಲ ಸಮುಚ್ಚಯದಿಂದ ಬೇರೆಯಾಗಿ ಸ್ವತಂತ್ರವಾಗಿ 'ಯೂರೋ' ತೈಲ ಮಾರುಕಟ್ಟೆಯನ್ನು ಸ್ಥಾಪಿಸಿ 'ಯೂರೋ' ಪಾವತಿ ತೈಲ ಸೂಚಕಕ್ಕೆ ಅಸ್ತಿಭಾರ ಹಾಕಲು ಇರಾನ್ ಇಚ್ಛಿಸಿದೆ. ಸಮಸ್ಯೆಯ ಮೂಲ ವಿರುವುದೇ ಇಲ್ಲಿ. ಯೂರೋ-ಆಧಾರಿತ ತೈಲ ಮಾರುಕಟ್ಟೆಯು ಇರಾನ್ ಕೈಯಲ್ಲಿ ಅಸ್ತ್ರವಾಗಿ ರೂಪುಗೊಂಡು ಪಾಶ್ಚಿಮಾತ್ಯ ಸಾಮ್ರಾಜ್ಯಶಾಹಿಗಳ ಹಿತಾಸಕ್ತಿಗೆ ಪ್ರಹಾರ ಬೀಳುವುದಲ್ಲದೆ ಪ್ರಮುಖವಾಗಿ ಅಮೆರಿಕಾವನ್ನು ತನ್ನ ಮೊದಲ ಬಲಿಯಾಗಿ ಆಹುತಿ ತೆಗೆದುಕೊಳ್ಳುವ ಸಾಧ್ಯತೆಯೂ ಇದೆ. ಇದರಿಂದ ಡಾಲರ್ ಮೌಲ್ಯದ ಗೋಪುರ ದಿಢೀರನೆ ಕುಸಿದು ೧೯೭೪ರಿಂದ ಅಮೆರಿಕಾದ ಆರ್ಥಿಕತೆಯನ್ನು ಬದುಕುಳಿಸಿಕೊಂಡು ಬಂದಿರುವ ಪೆಟ್ರೋಡಾಲರ್‌ನ ಯಜಮಾನಿಕೆಯಲ್ಲಿ ಗಂಭೀರ ಸವೆತ ಕಾಣುತ್ತದೆ.

ಪ್ರಸ್ತುತದಲ್ಲಿ, ಅಮೆರಿಕಾ ಪ್ರಾಬಲ್ಯ ಹೊಂದಿರುವ ಎರಡು ಏಜೆನ್ಸಿಗಳ ಮೂಲಕ ಜಾಗತಿಕ ತೈಲ ವಿನಿಮಯ ವ್ಯವಹಾರ ಜರುಗುತ್ತಿದೆ. ದಿ ನ್ಯೂಯಾರ್ಕ್ ಮರ್ಕ್ಯಂಟೈಲ್ ಎಕ್ಸ್‌ಚೇಂಜ್ (ಎನ್‌ವೈಎಂಇ), ಲಂಡನ್‌ನ ಅಂತರರಾಷ್ಟ್ರೀಯ ಪೆಟ್ರೋಲಿಯಂ ಎಕ್ಸ್‌ಛೇಂಜ್ (ಎಲ್‌ಐಪಿಇ) ಇವೆರಡೂ ಸಂಸ್ಥೆಗಳ ಮಾಲಿಕತ್ವ ಹೊಂದಿರುವುದು ಅಮೆರಿಕಾ ಸಮುಚ್ಚಯ ಕಂಪನಿಗಳು.

ಸಾಮ್ರಾಜ್ಯಶಾಹಿ ಹಣಕಾಸು ಶಕ್ತಿ ಕೇಂದ್ರಗಳಲ್ಲಿ ಪ್ರತಿಷ್ಠಿತ ಹೆಸರುಗಳಾದ ಬಿ.ಪಿ., ಗೋಲ್ಡ್‌ಮನ್ ಸ್ಯಾಚ್ಸ್ ಮತ್ತು ಮೋರ್ಗನ್ ಸ್ಟ್ಯಾನ್ಲಿಗಳು ೨೦೦೧ರಲ್ಲಿ ಐಪಿಇ ಕೊಂಡು ಕೊಂಡವು. ಇವೆರಡೂ ಕಡೆ ಎಲ್ಲ ರೀತಿಯ ತೈಲ ವಿನಿಮಯವು ಡಾಲರ್‌ಗಳಲ್ಲೇ ನಡೆಯುತ್ತದೆ. ಮತ್ತೂ ಮುಂದುವರಿದು, ತೈಲ ಮಾರುಕಟ್ಟೆಯಲ್ಲಿ ತೈಲ ಬೆಲೆ ನಿಷ್ಕರ್ಷೆ ಮಾಡುವುದನ್ನು 'ತೈಲ ಸೂಚಕ'ವೆಂದು ಕರೆಯಲಾಗುತ್ತದೆ. ಪ್ರಸ್ತುತ "ದಿ ವೆಸ್ಟ್ ಟೆಕ್ಸಾಸ್ ಇಂಟರ್‌ಮೀಡಿಯೇಟ್ ಕ್ರೂಡ್ (ಡಬ್ಲ್ಯುಟಿಐ), ನಾರ್ವೆ ಬ್ರೆಂಟ್ ಕ್ರೂಡ್ ಮತ್ತು ದಿ ಯುಎಇ ದುಬೈ ಕ್ರೂಡ್" ಎಂಬ ಮೂರು ತೈಲಸೂಚಕಗಳಿದ್ದು ಇಲ್ಲೆಲ್ಲ ಡಾಲರ್‌ನಲ್ಲೇ ವಿನಿಮಯವಾಗುತ್ತದೆ. ಅಂತರರಾಷ್ಟ್ರೀಯ ತೈಲ ಮಾರುಕಟ್ಟೆಯಲ್ಲಿ ಏಕಸ್ವಾಮ್ಯ ಕರೆನ್ಸಿಯೆಂದರೆ ಅಮೆರಿಕಾದ ಡಾಲರ್. ಈ ಸನ್ನಿವೇಶದಲ್ಲಿ ಇರಾನ್ ನಾಲ್ಕನೇ ತೈಲ ಸೂಚಕವನ್ನು ಸ್ಥಾಪಿಸುವುದಲ್ಲದೆ, ಅದರ 'ಯೂರೋ' ಕರೆನ್ಸಿ ವಿನಿಮಯ ಬಳಕೆಯಿಂದ ಅಮೆರಿಕಾಗೆ ನಡುಕ ಹುಟ್ಟುವಂತಾಗಿದೆ.

ಅಮೆರಿಕಾದ ಗ್ವಾಂಟಾನೊಮೊ ಸೆರೆಮನೆ ಶಿಬಿರದ 'ಪಾವಿತ್ರ್ಯತೆ'ಯು ಸ್ಫೋಟಗೊಂಡಂತೆಯೇ ಪೆಟ್ರೋಡಾಲರ್ ಯಜಮಾನಿಕೆಯು ಸಹ ಸ್ಫೋಟಗೊಳ್ಳುವ ಸೂಚನೆಗಳಿವೆ. ಯೂರೋ (ಪ್ರಸ್ತುತ ಒಂದು ಡಾಲರ್‌ಗೆ ೧.೨೦೮೨ ಯೂರೋ ಸಮ), ವಿದೇಶಿ ವಿನಿಮಯದಲ್ಲಿ ವಿಶ್ವದಲ್ಲೇ ದ್ವಿತೀಯ ಕರೆನ್ಸಿಯಾಗಿದೆ. ೨೦೦೩-೨೦೦೪ರಲ್ಲಿ ರಷ್ಯಾ ಮತ್ತು ಚೀನಾ ದೇಶಗಳು ತಮ್ಮ ಕೇಂದ್ರೀಯ ಬ್ಯಾಂಕ್‌ಗಳಲ್ಲಿ ಯೂರೋವನ್ನು ಮಹತ್ತರ ಪ್ರಮಾಣದಲ್ಲಿ ಹೆಚ್ಚಿಸಿಕೊಂಡವು. ಎರಡು ವರ್ಷಗಳ ಹಿಂದೆಯಷ್ಟೆ ಯೂರೋ-ಆಧಾರಿತ ಯೂರೋಪ್ ಒಕ್ಕೂಟ ರಾಷ್ಟ್ರಗಳ ಸಂಖ್ಯೆ ೧೨ ಇದ್ದದ್ದು ಈಗಾಗಲೇ ೨೨ಕ್ಕೇರಿದೆ. ಈ ಹಿನ್ನೆಲೆಯಲ್ಲಿ ಭವಿಷ್ಯತ್‌ನಲ್ಲಿ ತೈಲ ರಫ್ತು ಮಾಡುವ ರಾಷ್ಟ್ರಗಳೆಲ್ಲವೂ ಡಾಲರ್‌ನಿಂದ ಯೂರೋ ಕರೆನ್ಸಿಯಲ್ಲಿ ವ್ಯವಹರಿಸುವ ಸಾಧ್ಯತೆಯನ್ನು ತಳ್ಳಿಹಾಕಲಾಗದು. ಈ ಎಲ್ಲ ಬೆಳವಣಿಗೆಗಳಿಂದಾಗಿ ಶೀಘ್ರದಲ್ಲೇ ರಷ್ಯಾ, ಚೀನಾ, ವೆನಿಜುವೆಲಾ, ಕ್ಯೂಬಾ ಮತ್ತು ಇತರೆ ತೈಲ ರಫ್ತು ಮಾಡುವ ರಾಷ್ಟ್ರಗಳು ಯೂರೋ ಕರೆನ್ಸಿಯತ್ತ ದಾಪುಗಾಲಿಡುತ್ತವೆ.

ಪೆಟ್ರೋಡಾಲರ್‌ನಿಂದ ಪೆಟ್ರೋಯೂರೋವಿಗೆ ಬದಲಾಗುವುದರ ಪ್ರಾಮುಖ್ಯತೆ ಏನು ಮತ್ತು ಅದರಿಂದ ಇರಾನಿನ ತೈಲ ಮಾರುಕಟ್ಟೆಯ ಸ್ಥಿತಿಯೇನು ? ಬಲ್ಗೇರಿಯಾದ ಅಮೆರಿಕನ್ ವಿಶ್ವವಿದ್ಯಾನಿಲಯದಲ್ಲಿ ಅರ್ಥಶಾಸ್ತ್ರದ ಪ್ರೊಫೆಸರ್ ಆಗಿರುವ ಕ್ರಾಸಿಮಿರ್ ಪೆಟ್ರೋವ್ ಇದನ್ನು ಹೀಗೆ ವಿವರಿಸುತ್ತಾರೆ: "ಯೂರೋವಿಗೆ ಪರಿವರ್ತನೆ

ಹೊಂದಿದಲ್ಲಿ, ತೈಲಕ್ಕಾಗಿ ತಮ್ಮ ಹಣ ಪಾವತಿ ಮಾಡಲು ಯೂರೋಪಿನ ರಾಷ್ಟ್ರಗಳು ಡಾಲರ್‌ಗಳನ್ನು ಕೊಂಡುಕೊಂಡು ತೆಗೆದಿರಿಸಿಕೊಳ್ಳದೆ ತಮ್ಮದೇ ಕರೆನ್ಸಿಯಿಂದ ಪಾವತಿಸಬಹುದು. ತೈಲ ವಿನಿಮಯಗಳಿಗಾಗಿ ಯೂರೋವನ್ನು ಅಳವಡಿಸಿಕೊಳ್ಳುವುದರಿಂದ ಅದು ಯೂರೋಗೆ ವಿನಿಮಯ ಸ್ಥಾನಮಾನವನ್ನು ಅಮೆರಿಕನ್ನರ ವೆಚ್ಚದಲ್ಲಿ ಯೂರೋಪಿಯನ್ನರಿಗೆ ಒದಗಿಸಿಕೊಟ್ಟಂತಾಗುತ್ತದೆ. ತಾವು ಅಗಾಧ ಪ್ರಮಾಣದಲ್ಲಿ ಹೊಂದಿರುವ ಡಾಲರ್ ಸಂಗ್ರಹಣೆಯನ್ನು ಕಡಿತಗೊಳಿಸಿ ಯೂರೋದೊಂದಿಗೆ ಇತರೆ ಕಾರ್ಯಗಳಿಗಾಗಿ ಬಳಸುವ ಉಪಯುಕ್ತತೆಯು ದೊರಕುವುದರ ಜೊತೆಗೆ ಡಾಲರ್ ಅಪಮೌಲ್ಯದ ವಿರುದ್ಧ ರಕ್ಷಣೆ ಸಿಗುವುದರಿಂದ ಚೀನಾ ಮತ್ತು ಜಪಾನ್ ಈ ಹೊಸ ವಿನಿಮಯವನ್ನು ಅನುಸರಿಸಲು ಉತ್ಸುಕವಾಗಿವೆ.'' ಅಮೆರಿಕಾ ವಿರುದ್ಧ ವಾಸ್ತವವಾಗಿ ಇರಾನ್ ಹೊಂದಿರುವ ಸಮೂಹ ನಾಶಕ ಶಸ್ತ್ರಾಸ್ತ್ರವೆಂದರೆ ಇರಾನಿ ತೈಲ ಮಾರುಕಟ್ಟೆ ಮಾತ್ರವೇ ಎಂದು ಪೆಟ್ರೋವ್ ಹೇಳುತ್ತಾರೆ. ಆರ್ಥಿಕತೆ ಪರಿಭಾಷೆಯಲ್ಲಿ ಹೇಳುವುದಾದರೆ, ಇದು ಅಮೆರಿಕಾದ ರಿಸರ್ವ್ ಬ್ಯಾಂಕ್ 'ಫೆಡರಲ್ ರಿಸರ್ವ್'ನ ಸಿಂಹಸ್ವಪ್ನವಾಗಿ ರೂಪುತಾಳುತ್ತದೆ. ೨೦೦೩ರಲ್ಲಿ ಸದ್ದಾಂ ಹುಸೇನ್‌ನನ್ನು ಕಿತ್ತೊಗೆದಿರುವ ಹಿನ್ನೆಲೆಗೆ ಪೆಟ್ರೋಡಾಲರ್‌ನ ಯಜಮಾನಿಕೆಯನ್ನು ಕಾಪಾಡುವುದೇ ಪ್ರಮುಖ ಕಾರಣವಾಗಿತ್ತೆಂಬುದನ್ನು ಕ್ಲಾರ್ಕ್ ಅವರ ವಿಶ್ಲೇಷಣೆಯು ಬಯಲಿ ಗೆಳೆಯುತ್ತದೆ. ಇರಾಕಿ ತೈಲವನ್ನು ಯೂರೋದಲ್ಲಿ ಮಾರಾಟಮಾಡಲು ವಿಶ್ವಸಂಸ್ಥೆ (ಆಹಾರಕ್ಕಾಗಿ ತೈಲ ಕಾರ್ಯಕ್ರಮದಡಿ, ವಿಶ್ವಸಂಸ್ಥೆ ಕಾರ್ಯದರ್ಶಿ ಕೋಫಿ ಅನ್ನಾನ್ ಅವರ ಮಗ ಭಾಗಿಯಾಗಿದ್ದ ಎನ್ನಲಾದ ಹಣಕಾಸು ದುರುಪಯೋಗ)ಯ ಅನುಮತಿ ಪಡೆದು ಅದರಿಂದ ಸದ್ದಾಂ ಹುಸೇನ್‌ರು ಇರಾಕ್ ಲಾಭಗಳಿಸುವಂತೆ ಮಾಡಿದ್ದರು. ''ಬುಷ್ ಹೂಡುವ ಯುದ್ಧಗಳು ತೈಲಕ್ಕಾಗಿ ನಡೆದರೂ, ಅವೇನೂ ಬರೇ ತೈಲ ನಿಯಂತ್ರಣಕ್ಕೇ ಸೀಮಿತವಾಗಿರುವುದಿಲ್ಲ. ಅವು ತೈಲ ಬೆಲೆಯನ್ನು ನಿಯಂತ್ರಿಸಲು, ಯೂರೋಗಳ ಬದಲು ಅವುಗಳ ಬೆಲೆಯನ್ನು ಡಾಲರ್‌ಗಳಲ್ಲಿ ನಿಯಂತ್ರಿಸಲು ಮತ್ತು ಪೆಟ್ರೋಡಾಲರ್‌ಗಳ ಹರಿಯುವಿಕೆಯನ್ನು ನಿಯಂತ್ರಿಸಲು ನಡೆಸಲಾಗುತ್ತದೆ.'' ಇದು ಇರಾನ್ ಮೇಲೆ ಪುನರಾವರ್ತನೆಯಾಗಲು ಕ್ಷಣಗಣನೆ ಪ್ರಾರಂಭವಾಗಿದೆ.

ಒಂದು ಕರೆನ್ಸಿಯಾಗಿ ಡಾಲರ್ ಅತಿಮೌಲ್ಯ ಮತ್ತು ಹಣದುಬ್ಬರಕ್ಕೆ ಈಡಾಗಿದೆ. ಇದಕ್ಕೂ ಮಿಗಿಲಾಗಿ, ಯುದ್ಧದ ಯಂತ್ರೋಪಕರಣಗಳ ನಿರ್ವಹಣಾ ವೆಚ್ಚ, ಪ್ರಪಂಚದಾದ್ಯಂತ ನೀಗ್ರೋಗಳನ್ನು ಸುಮಾರು ೧೦೦೦ಕ್ಕೂ ಹೆಚ್ಚು ಸೆರೆಮನೆಗಳಲ್ಲಿಡಲು,

## ನಾಲ್ಕು ಪದ್ಯಗಳು

### ೧. ಸಿಡಿಲಿನಂತೆ ಹೊರಹೊಮ್ಮುವುದು

ಎಲ್ಲಾ ಇಲ್ಲೆ ಇದೆ ಸತೋರಿಯು ಎಲ್ಲೂ ಇಲ್ಲ ಅದು ಅಲ್ಲೂ ಇಲ್ಲ ಅದು
ಇಲ್ಲೂ ಇಲ್ಲ ಅದು ಬೇರೆಲ್ಲೂ ಇಲ್ಲ ಅದು ಮೇಲೆಲ್ಲೂ ಇಲ್ಲ ಅದು ಕೆಳಗೆಲ್ಲೂ
ಇಲ್ಲ ಅದು ತಾನೇ ತಾನಾಗಿ ಇರುವದದು ಮೋಡಿ ಅಲ್ಲ ಅದು ಮಾಟ ಅಲ್ಲ ಅದು
ಮಂತ್ರ ಅಲ್ಲ ಅದು ಹಸಿವು ನೀರಡಿಕೆಗೆ ಕಷ್ಟಕಾಲದಲ್ಲಿ ಸಿಡಿಲಿನಂತೆ ಹೊರಹೊಮ್ಮುವುದು
ವಿಶ್ವವಾಗಲು ಮಹಾಸ್ಫೋಟವಾಗುವುದು ಜಗದ ಹಿತಕೆ ಕಾಮ ಬಲಿಯಾಗಬಹುದು.

### ೨. ಚರಾಚರ ಜಡಜಂಗಮವು



ಹಾಡುವುದು ಕೋಗಿಲೆಯು ನುಡಿಯುವುದು ಗಿಳಿಯು ಕುಣಿಯುವುದು ನವಿಲು ಇಲ್ಲಿ
ಆಡುವುದು ಹಂಸವು ಝೇಂಕರಿಸುವುದು ದುಂಬಿಯು ಆಕಾಶವಾಗಿ ಶಾಂತಿ ಹರಡುವುದು
ಪಾರಿವಾಳವು ಫಲಬಿಡುವುದಾ ಮಾಮರವು ಅರಳುವುದು ಮಲ್ಲಿಗೆಯು ಕೆನೆಯುವುದು
ಕುದುರೆಯು ಘೀಳಿಡುವುದು ಆನೆಯು ಪ್ರಕೃತಿಯಲ್ಲಿ ತುಂಬಿಕೊಂಡಿದೆ ಸತೋರಿ ಧಮ್ಮವಾಗಿ
ಮತ್ತೆ ಬಿಹಾರದಲ್ಲಿ ನೆಲೆಸಿ ಬುದ್ಧ ಶುದ್ಧೀಕರಣಗೊಳಿಸಲು ವಿಶ್ವದ ಚರಾಚರ ಜಡಜಂಗಮವು.

### 3. ಪರಹಿತಕ್ಕಾಗಿ ಬದುಕು ಮುಡುಪಿಡುವುದರ ಮೇಲೆ

ಅರ್ಥ ಪರಿಪೂರ್ಣ ನಿಂತಿರುವುದು ಆಯಾಸ್ಥಳದ ಮೇಲೆ ಸಮಯ ಸಂದರ್ಭದ ಮೇಲೆ
ಪರಿಸರ ಪ್ರಜ್ಞೆಯ ಮೇಲೆ ವ್ಯಕ್ತಿಗಳ ಮೇಲೆ ಶಕ್ತಿಗಳ ಮೇಲೆ ಆಯಾ ದೇಶ ಕಾಲ
ಅರ್ಥೈಸುವುದರ ಮೇಲೆ ಕೊಡುವುದರ ಮೇಲೆ ಪಡೆಯುವುದರ ಮೇಲೆ ನೀಡುವುದರ
ಮೇಲೆ ನೋಡುವುದರ ಮೇಲೆ ದುಡಿಯುವುದರ ಮೇಲೆ ನಡೆಯುವುದರ ಮೇಲೆ ಸಾಮಾನ್ಯ
ಸ್ವಾತಂತ್ರ್ಯದಿಂದ ಬಾಳುವುದರ ಮೇಲೆ ಪರಹಿತಕ್ಕಾಗಿ ಬದುಕು ಮುಡುಪಿಡುವುದರ ಮೇಲೆ.

### ೪. ಒಂದೇ ಜನಾಂಗ ಆದಾಗ ಇಲ್ಲಿ

ಶೂನ್ಯವೆಂಬುವದು ನವರಸಗಳನ್ನು ದಾಟಿ ಹೋದಾಗ ನಿದ್ರಿಸುವುದು ತೊರೆದಾಗ ಸೋಮಾರಿತನ
ಅಟ್ಟಿದಾಗ ಚಂಚಲ ಮನಸು ಮೆದುಳು ಸ್ತಬ್ಧಗೊಳಿಸಿದಾಗ ಬರೀ ಧ್ಯಾನಿಯಾಗಿ ಜ್ಞಾನಿಯಾಗಿ ತೀಕ್ಷ್ಣ
ಸ್ಥಿತಿಗಳನ್ನು ದಾಟಿಹೋಗಿ ಎಲ್ಲ ಅವ್ಯವಸ್ಥೆಗಳನ್ನು ನಿಲ್ಲಿಸಿದಾಗ ವ್ಯೋಮದಲ್ಲಿ ವ್ಯೋಮ ಸೇರಿ
ಸಿಂಧುವಿನಲ್ಲಿ ಸಿಂಧು ಸೇರಿ ಸರ್ವವೂ ಒಂದಾಗಿ ಖಂಡಗಳೆಲ್ಲ ಅಖಂಡವಾಗಿ ಹೋದಾಗ ಬಿಗ್
ಬ್ಯಾಂಗಿನಿಂದ ಒಡಕಾದದ್ದು ಮತ್ತೆ ಒಂದೇ ಭಾಷೆ ಒಂದೇ ಧರ್ಮ ಒಂದೇ ಆಡಳಿತ ಒಂದೇ ಜನಾಂಗ ಆದಾಗ ಇಲ್ಲಿ



ಚೆನ್ನಣ್ಣ ವಾಲೀಕಾರ, ಬಿ. ೩೩ - ೧೩೦, ಬಡೇಪುರ ಕಾಲೋನಿ, ವಿಶ್ವವಿದ್ಯಾಲಯ ರಸ್ತೆ, ಗುಲ್ಬರ್ಗಾ - ೫೮೫ ೧೦೫

ಮತ್ತು ತನ್ನದೇ ನೆಲದಲ್ಲಿ ಕೆಟ್ಟುಹೋಗುತ್ತಿರುವ ಆರ್ಥಿಕ-ಪರಿಸ್ಥಿತಿಯನ್ನು ಸುಸ್ಥಿತಿಯಲ್ಲಿಡಲು ಅಮೆರಿಕಾವು ತೀವ್ರತರದ ಆಯವ್ಯಯ ಕೊರತೆ ಮತ್ತು ವ್ಯಾಪಾರ ಅಂತರವನ್ನು ಎದುರಿಸುತ್ತಿದೆ. ಜಾನ್ ಫಿಲ್ಜರ್ ಹೇಳುವಂತೆ "೨೦೦೫ರಲ್ಲಿ ೮ ಲಕ್ಷ ಕೋಟಿ ಡಾಲರ್ ರಾಷ್ಟ್ರೀಯ ಸಾಲದ ಹೊರೆ ಮತ್ತು ೭೦,೦೦೦ ಕೋಟಿ ಡಾಲರ್ ವ್ಯಾಪಾರ ಕೊರತೆಯ ಭಾರವನ್ನು ಹೊತ್ತಿರುವ, ಯಾವುದೇ ಬೆಲೆಯಿಲ್ಲದ ಕರೆನ್ಸಿಯಾಗಿ ಡಾಲರ್ ಮಾರ್ಪಟ್ಟಿದೆ." (ದಿ ನ್ಯೂ ಸ್ಟೇಟ್ಸ್‌ಮನ್, ೦೨-೧೪-೦೬). ಕಳೆದ ಬಾರಿ ಅಮೆರಿಕಾವು ವ್ಯಾಪಾರ ಮಿಗುತಾಯ ಹೊಂದಿದ್ದುದು ೧೯೭೫ರಲ್ಲಿ. ವಿದೇಶೀ ಹಣದ ಬಲವಾದ ಹರಿಯುವಿಕೆ ಅದರಲ್ಲೂ ವಿಶೇಷವಾಗಿ ಏಷ್ಯಾದ ಕೇಂದ್ರೀಯ ಬ್ಯಾಂಕುಗಳ ಮೇಲೆ ಅಮೆರಿಕಾವು ತನ್ನ ವ್ಯಾಪಾರದ ಕೊರತೆಯನ್ನು ನೀಗಲು ಸಂಪೂರ್ಣವಾಗಿ ಅವಲಂಬಿತವಾಗಿದೆ. ಅಮೆರಿಕಾ ತನ್ನ ಆಯವ್ಯಯ ಕೊರತೆಯನ್ನು ನೀಗಲು ಭದ್ರತಾ ಪತ್ರಗಳನ್ನು ಚೀನಾ, ಜಪಾನ್ ಮತ್ತು ಇತರೆ ವಿದೇಶೀ ಸರ್ಕಾರಗಳ ಬಳಿಯಿಟ್ಟಿದೆ. ಇರಾಕ್ ಯುದ್ಧವೊಂದೇ ಅಮೆರಿಕಾ ಜನತೆಯ ಮೇಲೆ ೨ ಲಕ್ಷ ಕೋಟಿ ಡಾಲರ್ ಹೊರೆ ತಂದಿದೆ. ತಮ್ಮ ತೈಲ ಮಾರಾಟಗಳಿಗಿಂತ ಹೆಚ್ಚಿನ ಆದಾಯವನ್ನು ಕುವೈತ್‌ನ ರಾಯಲ್ ಸರ್ವಾಧಿಕಾರವು ಅಮೆರಿಕಾ ಮತ್ತು ಬ್ರಿಟನ್‌ಗಳಲ್ಲಿ ಹೂಡಿರುವ ಬಂಡವಾಳದಿಂದ ಗಳಿಸುತ್ತದೆ. ಅಮೆರಿಕಾದ ದರ್ಪವಿರುವುದು ಮಿಲಿಟರಿ ಶಕ್ತಿಯಿಂದಾಗಿಯೇ ಹೊರತು ಆರ್ಥಿಕಶಕ್ತಿಯಿಂದಲ್ಲ.

### ಇರಾನ್ ಅಪಾಯಕಾರಿಯೇ ?

ಇಸ್ರೇಲ್ ಮತ್ತು ಅಮೆರಿಕಾದ ಸ್ನೇಹಿತ ರಾಷ್ಟ್ರಗಳ ನಗರಗಳನ್ನು ತಲುಪಬಲ್ಲ ಕ್ಷಿಪಣಿಗಳನ್ನು ಹಾರಿಸಬಲ್ಲ ವ್ಯವಸ್ಥೆಯನ್ನು ಇರಾನ್ ಹೊಂದಿದೆ; ತನ್ನ ಹಿತ್ತಲಲ್ಲೇ ಇಸ್ರೇಲ್ ಇರುವಾಗ ಅಗತ್ಯವಿರುವಷ್ಟು ಭದ್ರತಾ ವ್ಯವಸ್ಥೆ ಮಾಡಿಕೊಳ್ಳದಿದ್ದರೆ ಇರಾನ್‌ನ ಮೂರ್ಖತನವಾಗುತ್ತದಷ್ಟೆ. ಇಸ್ರೇಲ್‌ನಿಂದ ಇರಾನ್‌ಗಿರುವ ಅಣ್ವಸ್ತ್ರ ಬೆದರಿಕೆಯ ಹಿನ್ನೆಲೆಯಲ್ಲಿ ಇರಾನ್ ಅಣ್ವಸ್ತ್ರ ತಯಾರಿಸದಿರುವುದು ಹುಚ್ಚುತನವೆಂದೇ ಇಸ್ರೇಲ್‌ನ ಮಿಲಿಟರಿ ಇತಿಹಾಸಕಾರ ಮಾರ್ಟಿನ್ ವ್ಯಾನ್ ಕ್ರೆವೆಲ್ಡ್ ಅಭಿಪ್ರಾಯಪಡುತ್ತಾರೆ. ಮಧ್ಯಪೂರ್ವದಲ್ಲಿ ಇರಾನ್ ಮತ್ತು ಇತರೆ ರಾಷ್ಟ್ರಗಳನ್ನು ಗುರಿಯಾಗಿಸಿಕೊಂಡು ನಿಂತಿರುವ ಇಸ್ರೇಲ್‌ನ ಅಣ್ವಸ್ತ್ರಗಳ ಸಂಖ್ಯೆ ೨೦೦-೭೦೦ರಷ್ಟಿವೆ. ಅದಕ್ಕೂ ಮಿಗಿಲಾಗಿ ಎಲ್‌ಬರೈದಿ ಇಸ್ರೇಲ್ ಒಂದು ಅಣ್ವಸ್ತ್ರ ರಾಷ್ಟ್ರ ಎಂದು ತಾವೇ ಸ್ವತಃ ಘೋಷಿಸಿದ್ದಾರೆ.

ಇರಾನ್ ಒಂದು ದಮನಕಾರಿ, ಧಾರ್ಮಿಕ ಪ್ರಭುತ್ವದ ಮತ್ತು ಸಂಪ್ರದಾಯಶರಣ ರಾಷ್ಟ್ರವೆಂಬುದು ನಿಜ. ಆದಾಗ್ಯೂ, ತನ್ನ ಸಾಹಸಯುತ ನೀತಿಯಿಂದಾಗಲೀ ಅಥವಾ ವ್ಯಕ್ತಿಗತ ನಿಂದನೆಯಿಂದಾಗಲೀ ಇರಾನ್ ಸಂಘರ್ಷ ಸೃಷ್ಟಿಸಿದೆಯೆಂದು ಹೇಳಲು ಸಾಧ್ಯವಿಲ್ಲ. ವಾಸ್ತವವಾಗಿ, ಇರಾನ್ ಬಹು ತಾಳ್ಮೆಯ ರಾಜನೀತಿಯಿಂದ ತನ್ನ ಪಾತ್ರವನ್ನು ನಿರ್ವಹಿಸಿದೆ. ಅಣ್ವಸ್ತ್ರ ನಿಷೇಧ ಒಪ್ಪಂದಕ್ಕೆ ಸಹಿಹಾಕಿ ಸ್ವಯಂ ತಾನಾಗಿ ಎಲ್ಲ ರೀತಿಯ ಅಂತರರಾಷ್ಟ್ರೀಯ ತಪಾಸಣೆಗಳಿಗೆ ಒಪ್ಪಿ ಶರಣಾಗತವಾಗಿದೆ. ಭಾರತ ಮತ್ತು ಪಾಕಿಸ್ತಾನಗಳು ಕೂಡ ಆ ಒಪ್ಪಂದಕ್ಕೆ ಇನ್ನೂ ಸಹಿ ಹಾಕಿಲ್ಲ. ದೇಶೀಯವಾಗಿ ಶಕ್ತಿಯುತವಾಗಿದ್ದ ಆಂತರಿಕ ವಿರೋಧಗಳ ನಡುವೆಯೂ ಇರಾನ್ ಸಹಿಹಾಕಿತು.

ಆದರೆ ವಾಸ್ತವವಾಗಿ ಅಮೆರಿಕಾವು ಮಾತುಕತೆಗಾಗಲಿ ಅಥವಾ ವಿಚಾರಯುತವಾಗಿ ವರ್ತಿಸದೆ ಪೂರ್ವ ನಿಯೋಜಿತವಾಗಿ ಇರಾನ್ ವಿರುದ್ಧ ಅಣಿಯಾಗುತ್ತಿದೆ. ಇಲ್ಲಿ ಕೆಲವೊಂದು ಘಟನೆಗಳನ್ನು ಸ್ಮರಿಸಿಕೊಳ್ಳೋಣ. ಅಣ್ವಸ್ತ್ರ ತಂತ್ರಜ್ಞಾನಕ್ಕಾಗಿ ಶಾಹ್‌ನೊಂದಿಗೆ ಇರಾನ್‌ಗೆ ಕಾರ್ಯಕ್ರಮವನ್ನು ನೀಡಿದ್ದು ಮತ್ತು ಇಂದು ಭಾರತದೊಂದಿಗೆ ಸಹಿ ಹಾಕಿರುವ ರೀತಿಯೇ ಇರಾನ್‌ನೊಂದಿಗೆ ನಾಗರಿಕ ಅಣ್ವಸ್ತ್ರ ಒಪ್ಪಂದವನ್ನು ೧೯೫೭ರಲ್ಲಿ ಸಹಿ ಹಾಕಿದ್ದಲ್ಲ ಅಮೆರಿಕಾವೆ. ಇರಾನ್‌ಗೆ ಪ್ರಪ್ರಥಮವಾಗಿ ಪ್ರಾಯೋಗಿಕ ಅಣ್ವಸ್ತ್ರ ರಿಯಾಕ್ಟರ್‌ಗಳನ್ನು ನೀಡಿದ್ದು ಸಹ ಅಮೆರಿಕಾ. ಅಂದಿನ ಈ ಕೊಡುಕೊಳ್ಳುವಿಕೆಗಳ ವ್ಯವಹಾರಕ್ಕೆ ಶಾಹ್‌ನು ಯಾವುದೇ ಕಠಿಣ ಒಪ್ಪಂದಕ್ಕೆ ಅಮೆರಿಕಾದೊಂದಿಗೆ ಸಹಿ ಹಾಕುವ ಅವಶ್ಯಕತೆಯಿರಲಿಲ್ಲ. ಆದರೆ ಈಗಿನ ಆಳ್ವಿಕೆಯು ಅಣ್ವಸ್ತ್ರ ನಿಷೇಧ ಒಪ್ಪಂದಕ್ಕೆ ಸ್ವಯಂಪ್ರೇರಿತವಾಗಿ ಸಹಿ ಹಾಕಿರುವುದು ಗಮನಾರ್ಹ. ಅಣ್ವಸ್ತ್ರ ತಯಾರಿಕೆಗಾಗಿ ಇರಾನ್‌ಅನ್ನು ನಾಶಪಡಿಸಲು ಸಿದ್ಧವಾಗಿ ಕುಳಿತಿರುವ ಅದೇ ತಂಡದ ಪ್ರಮುಖರು ಅಂದು ಶಾಹ್‌ನು ಅಣುಶಕ್ತಿ ರಾಷ್ಟ್ರವಾಗಿ ಇರಾನ್‌ನನ್ನು ಬೆಳೆಸಲು ಸರ್ವ ಸಹಕಾರ ನೀಡಿದ್ದರು. ಅವರುಗಳಲ್ಲಿ ಪ್ರಮುಖರೆಂದರೆ ಅಮೆರಿಕಾದ ರಕ್ಷಣಾ ಕಾರ್ಯದರ್ಶಿ ಡೊನಾಲ್ಡ್ ರಮ್ಸ್‌ಫೆಲ್ಡ್ (ಅಂದು ಫೋರ್ಡ್ ಕಂಪನಿಯಲ್ಲಿದ್ದ) ಉಪಾಧ್ಯಕ್ಷ ಡಿಕ್ ಚೆನಿ (ಅಂದು ಫೋರ್ಡ್ ಕಂಪನಿಯ ಸಿಬ್ಬಂದಿಗಳ ಮುಖ್ಯಸ್ಥನಾಗಿದ್ದ) ಮತ್ತು ವೊಲ್ಫೋವಿಟ್ಜ್.

ಇದೇ ವೇಳೆಯಲ್ಲಿ ಕ್ಯೂಬಾ ಮತ್ತು ವೆನಿಜುವೆಲಾ ತಳೆದ ನಿಲುವುಗಳು ನಾಟಕೀಯವಾಗಿ ವಿರುದ್ಧವಾಗಿವೆ. ೨೦೦೬ರ ಫೆಬ್ರುವರಿ ೫ರಂದು ಇರಾನ್‌ಗೆ ಭೇಟಿ ನೀಡಿದ ಕ್ಯೂಬಾದ ವಿದೇಶಾಂಗ ಸಚಿವ ಫಿಲಿಪ್ ಪೆರೆಜ್ ರೋಕ್‌ರವರು ಪ್ರಸಕ್ತ ಬಿಕ್ಕಟ್ಟಿನ ಸಂದರ್ಭದಲ್ಲಿ ಬಲವಾದ ಬೆಂಬಲವನ್ನು ವ್ಯಕ್ತಪಡಿಸಿದ್ದಾರೆ. ಕ್ಯೂಬಾ ಮತ್ತು ವೆನಿಜುವೆಲಾ ರಾಷ್ಟ್ರಗಳೆರಡೂ ಸಹ ಅಣ್ವಸ್ತ್ರ ವಿಷಯ ಕುರಿತಂತೆ ಇರಾನ್‌ನನ್ನು ಬಲವಾಗಿ ಸಮರ್ಥಿಸಿಕೊಂಡಿದ್ದು, ಪಾಶ್ಚಿಮಾತ್ಯ ರಾಜಕೀಯ ಹಿತಾಸಕ್ತಿಗಳನ್ನು ಕಟುವಾಗಿ ಖಂಡಿಸಿದ್ದಾರೆ.

### ಇರಾನ್ ಬಿಕ್ಕಟ್ಟಿನ ಸಮಯದಲ್ಲಿ ಭಾರತದ ಪಾತ್ರ

ಪ್ರಸಕ್ತ ಬಿಕ್ಕಟ್ಟಿನಲ್ಲಿ ಭಾರತವು ಅಪಾಯಕಾರಿ ಆಟವಾಡುತ್ತಿದೆ ಎನ್ನಬಹುದು. ಇದೇ ಆಟ ಮುಂದುವರಿದಲ್ಲಿ, ಇಡೀ ಉಪಖಂಡ ಮತ್ತು ಅದರ ಲಕ್ಷಾಂತರ ಮುಗ್ಧ ನಾಗರಿಕರಿಗೆ ಊಹಿಸಲಸದಳವಾದ ಪರಿಣಾಮಗಳನ್ನು ಅದು ಉಂಟುಮಾಡಬಲ್ಲದು. ೧೯೯೮ರಲ್ಲಿ ಭಾರತ ತನ್ನ ಅಣ್ವಸ್ತ್ರ ಬಾಂಬುಗಳನ್ನು ಪ್ರಯೋಗ ಪರೀಕ್ಷೆಗೊಳಪಡಿಸಿದಾಗ, ಪಾಕಿಸ್ತಾನ ಮತ್ತು ಇಸ್ರೇಲ್‌ಗಳು ಅಣ್ವಸ್ತ್ರ ನಿಷೇಧ ಒಪ್ಪಂದಕ್ಕೆ ಸಹಿ ಹಾಕದಿರುವುದರಿಂದ, ತಾನು ಸಹಿ ಹಾಕುವುದು ಯೋಗ್ಯ ಸಾಧುವಲ್ಲವೆಂದು ಭಾರತ ಹಿಂಜರಿಯಿತು. ಅಮೆರಿಕಾ ಭಾರತದ ವಿರುದ್ಧ ಆರ್ಥಿಕ ದಿಗ್ಬಂಧನ ವಿಧಿಸಿತು. ಆದರೆ ಪ್ರಸಕ್ತ ಯುಪಿಎ ಸರ್ಕಾರವು ಇರಾನ್ ಮತ್ತು ಪಾಕಿಸ್ತಾನದೊಡನೆ ನೈಸರ್ಗಿಕ ಅನಿಲ ಸಂಬಂಧ ಮಾಡಿಕೊಂಡ ಒಪ್ಪಂದವನ್ನು ಕೈಬಿಡುವಂತೆ ಅಮೆರಿಕಾ ಒತ್ತಾಯಿಸುತ್ತಿರುವುದಕ್ಕೆ ಮಣಿದಂತೆ ಕಾಣುತ್ತಿದೆ. ಈ ಯೋಜನೆಯ ಮಹತ್ತರ ಅಂಶವೆಂದರೆ 'ಭಾರತವು ತನ್ನ ಇಂಧನ ಮೂಲಗಳಿಗಾಗಿ ಸಾಮ್ರಾಜ್ಯಶಾಹಿಯ ಮೇಲೆ ಅವಲಂಬಿತವಾಗುವುದು ತಪ್ಪುತ್ತದೆ. ಆದರೆ ಇರಾನ್‌ನನ್ನು ಮೂಲೆಗುಂಪು ಮಾಡಲು, ಭಾರತದ ಇಂಧನ ಬೇಡಿಕೆಯನ್ನು ಪೂರೈಸಲು ತಾನು ವಿಶೇಷ ಅಣು-ಇಂಧನ ಒಪ್ಪಂದಗಳೂ ಸೇರಿದಂತೆ ಭಾರತವನ್ನು ಪ್ರಮಾಣೀಕೃತ ಅಣ್ವಸ್ತ್ರ ಶಕ್ತಿಯೆಂದು ಪರಿಗಣಿಸುವ ಆಮಿಷವನ್ನು ಅಮೆರಿಕಾ ಭಾರತದ ಮುಂದಿಟ್ಟಿದೆ. ೨೦೦೫ರ ಜುಲೈ ೧೮ರಂದು ಭಾರತದ ಪ್ರಧಾನಮಂತ್ರಿ ಮನಮೋಹನ್ ಸಿಂಗ್‌ರವರು ವಾಷಿಂಗ್ಟನ್‌ನಲ್ಲಿ ಬುಷ್‌ರವರೊಂದಿಗೆ ನಾಗರಿಕ-ಅಣ್ವಸ್ತ್ರ ಕುರಿತ ಜಂಟಿ ಒಪ್ಪಂದಕ್ಕೆ ಸಹಿಹಾಕಿದರು. ಆದಾಗ್ಯೂ, ಈ ಒಪ್ಪಂದಕ್ಕೆ ಅಮೆರಿಕಾದ ಮೇಲ್ಮನೆ ಕಾಂಗ್ರೆಸ್‌ನಲ್ಲಿ ಅನುಮೋದನೆ ಪಡೆದುಕೊಳ್ಳಬೇಕಿರುವುದರಿಂದ ಬುಷ್ "ಭಾರತದೊಂದಿಗೆ ಸಂಪೂರ್ಣ ನಾಗರಿಕ ಅಣ್ವಸ್ತ್ರ ಇಂಧನ ಸಹಕಾರ ಮತ್ತು ವ್ಯಾಪಾರಗಳನ್ನು ಅಭಿವೃದ್ಧಿಪಡಿಸಲು ಅಂತರರಾಷ್ಟ್ರೀಯ ಕಟ್ಟಳೆಗಳನ್ನು ಹೊಂದಿಸಿಕೊಳ್ಳುವಂತೆ ಅಮೆರಿಕಾದ ಕಾನೂನು ಮತ್ತು ನೀತಿಗಳನ್ನು ಸರಿಹೊಂದಿಸುವಂತೆ ಕಾಂಗ್ರೆಸ್‌ನಿಂದ ಒಪ್ಪಿಗೆ ಪಡೆಯಲಾಗುವುದೆಂದು" ಹೇಳಿದ್ದಾರೆ. ಇದರಿಂದಾಗಿ, ೨೦೦೫ರ ಸೆಪ್ಟೆಂಬರ್‌ನಲ್ಲಿ ಐಎಇಎ (ಅಂತರರಾಷ್ಟ್ರೀಯ ಅಣುಶಕ್ತಿ ಸಂಸ್ಥೆ)ಯಿಂದ ಇರಾನ್ ವಿಷಯವನ್ನು ವಿಶ್ವಸಂಸ್ಥೆಯ ಭದ್ರತಾ ಸಮಿತಿಗೆ ಶಿಫಾರಸು ಮಾಡುವ ನಿರ್ಣಯಕ್ಕೆ ಭಾರತ ಸಹಿ ಹಾಕಿ ಅಮೆರಿಕಾದ "ಟೆಹರಾನ್‌ನಲ್ಲಿ ಪ್ರಭುತ್ವ ಬದಲಾವಣೆ" ಒತ್ತಾಸೆಗೆ ಬೆಂಬಲ ನೀಡಿತು. ಚೀನಾ, ರಷ್ಯಾ ಮತ್ತು ಅಮೆರಿಕಾದ ಸಾಂಪ್ರದಾಯಿಕ ಮಿತ್ರ ಪಾಕಿಸ್ತಾನ ಒಳಗೊಂಡಂತೆ ಹಲವು ಅಲಿಪ್ತ ರಾಷ್ಟ್ರಗಳಂತೆ ಭಾರತ ಮತದಾನದಿಂದ ಗೈರುರಾಜರಿ ಸಹ ಆಗಲಿಲ್ಲ. ಅಲಿಪ್ತ ಕೂಟ ರಾಷ್ಟ್ರಗಳ ನಾಯಕ ಸ್ಥಾನದಲ್ಲಿರುವ ಭಾರತವು ಏಷ್ಯಾದ ಶಕ್ತಿಯುತವಾದ ಮತ್ತು ತಾಂತ್ರಿಕವಾಗಿ ಅಭಿವೃದ್ಧಿ ಹೊಂದಿರುವ ರಾಷ್ಟ್ರವಾಗಿ ಅಮೆರಿಕಾ-ಯೂರೋಪಿನ ಸಾಮ್ರಾಜ್ಯಶಾಹಿಗಳ ಗುಂಪು ಸೇರಲು ಹಾತೊರೆಯುತ್ತಿರುವುದು ಸ್ವತಂತ್ರ ವಿದೇಶಾಂಗ ನೀತಿಯ ಕೊರತೆಯನ್ನು ಎತ್ತಿತೋರುತ್ತದೆ. ಭಾರತ ತಾನೇ ಪಾರದರ್ಶಕವಾಗಿಲ್ಲದಿದ್ದರೂ ಇರಾನ್ ಅಣ್ವಸ್ತ್ರ ವಿಷಯದಲ್ಲಿ ಅದು ಪಾರದರ್ಶಕವಾಗಿರಬೇಕೆನ್ನುವುದು ಕೂಡ ಸಮ್ಮತವಾದುದಲ್ಲ.

ಅಮೆರಿಕಾದ ಕೃಪೆಯಿಂದ ಭಾರತವು ಅಣ್ವಸ್ತ್ರ ಗುಂಪಿನ ರಾಷ್ಟ್ರಗಳ ಸದಸ್ಯ ರಾಷ್ಟ್ರವಾಗಿ "ಅಣ್ವಸ್ತ್ರ ತಂತ್ರಜ್ಞಾನ ಹೊಂದಿರುವ ಜವಾಬ್ದಾರಿಯುತ ರಾಷ್ಟ್ರ" ಎಂದು ಅಮೆರಿಕಾದಿಂದ ಪ್ರಮಾಣಪತ್ರ ಪಡೆಯುವುದಕ್ಕೆ ಭಾರತ ಕೂಡ ಬದಲಿಗೆ ಬೇರೇನಾದರೂ ನೀಡಲೇ ಬೇಕಲ್ಲ! ಅಮೆರಿಕಾದ ಬಹುರಾಷ್ಟ್ರೀಯ ಕಂಪನಿಗಳ ಹಿತಾಸಕ್ತಿಗಳನ್ನು ಕಾಪಾಡುವಂತಹ ರಾಷ್ಟ್ರೀಯ ನೀತಿಗಳನ್ನು ರೂಪಿಸಿ ನಿಯಂತ್ರಿಸುವ ಅಮೆರಿಕಾದ ಪ್ರತಿಗಾಮಿಗಳ ಪ್ರಭಾವಿ ವರ್ಗವು "ಭಾರತದ ಚಿಲ್ಲರೆ ಮಾರುಕಟ್ಟೆ ಮತ್ತು ಇಂಧನ ಮಾರುಕಟ್ಟೆಯನ್ನು ಮುಕ್ತಗೊಳಿಸಿ ಭಾರತವೂ ತನ್ನ ಪಾರದರ್ಶಕತೆಯನ್ನು ಪ್ರದರ್ಶಿಸ ಬೇಕೆಂದು" ಈಗಾಗಲೇ ಪಟ್ಟುಹಿಡಿದಿದ್ದಾರೆ.

ಇಂದಿನ ಬಹುಮುಖ್ಯ ಕಾರ್ಯವೆಂದರೆ ಭಾರತದ ಮಣ್ಣಿನಲ್ಲಿ ಅಮೆರಿಕಾ ತಳವೂರದಂತೆ ತಡೆಯೊಡ್ಡುವುದು. ಎಲ್ಲ ಹೋರಾಟಗಳು ಮತ್ತು ಶಕ್ತಿಗಳನ್ನು ಇದಕ್ಕಾಗಿ ಅಣಿನೆರಸಬೇಕಾಗಿದೆ.

ಡಿ. ರಾಯ್ ಮತ್ತು ಜೈಕುಮಾರ್
೧-೧೦-೫೦, ಟಾಕರ್ಸ್ ಕಾಂಪೌಂಡ್, ಸ್ಟೇಷನ್ ರಸ್ತೆ
ರಾಯಚೂರು - ೫೮೪ ೧೦೧



# ಮುಚ್ಚಿದ ಬಾಗಿಲು

ಒರಿಯಾ ಮೂಲ : **ಸುಸ್ಮಿತಾ ಬಾಗಚಿ**

ಕನ್ನಡಕ್ಕೆ :

**ಡಾ॥ ಮಾಧವಿ ಎಸ್. ಭಂಡಾರಿ**

**ಹೊ**ಸ ಬಾಡಿಗೆಮನೆಯೊಳಗೆ ಹೊಕ್ಕಿದ್ದೆ ತಡ ಸುಜಾತಳಿಗೆ ಎಲ್ಲಿಲ್ಲದ ಕೋಪ ಬಂತು. ತನ್ನ ಮೆದುಳಿನ ಮೂರು ನಾಲ್ಕು ನರಗಳು ಒಮ್ಮೆಲೆ ಹರಿದುಹೋದ ಅನುಭವವಾಯ್ತು. ಪ್ರಯತ್ನಪೂರ್ವಕವಾಗಿ ತನ್ನ ಧ್ವನಿಯ ಮೇಲೆ ಹಿಡಿತ ಸಾಧಿಸಿಕೊಂಡು ಕೇಳಿದಳು – "ಏನ್ರೀ... ಇದು ಮನೆಯಾ ?"

ಆಗಲೂ ಅವಳ ಕಣ್ಣುಗಳೆರಡೂ ಬೆಂಕಿ ಕಾರುತ್ತಿದ್ದವು – "ಅಷ್ಟೊಂದು ನೋಡಿದ್ರಿ, ಅಷ್ಟೊಂದು ಹುಡುಕಿದ್ರಿ, ಅಷ್ಟಾಗಿಯೂ ಈ ವಿಚಿತ್ರ ಮನೆಯನ್ನು ಆಯ್ಕೆ ಮಾಡಿದ್ರಾ ? ಇದೇನ್ ಮನೇನಾ ಅಥವಾ ಪಾರಿವಾಳದ ಗೂಡಾ ?"

ಅನುಪಮ ಇಷ್ಟಪಟ್ಟು ಈ ಮನೆಯನ್ನು ಆಯ್ಕೆ ಮಾಡಿದ್ದಾನೇ ಅಂದರೆ ಅನ್ಯಾಯವಾಗಬಹುದು. ಅವನು ಅಸಹಾಯಕನಾಗಿದ್ದ. ಸೀಮಿತ ಬಾಡಿಗೆಯಲ್ಲಿ ಸಿಗುವ ಮನೆಗಳಲ್ಲಿ ಇದ್ದುದರಲ್ಲಿ ಇದು ಒಳ್ಳೆಯದಾಗಿತ್ತು. ನಿಜವಾಗಿ ಅವನಿಗೇ ಇಷ್ಟವಾಗಿರಲಿಲ್ಲ. ಹಾಗಿರುವಾಗ ಸುಜಾತಳಿಗೆ ಇಷ್ಟವಾಗುವುದಾದರೂ ಹೇಗೆ? ಹಾಗಂತ ಅನುಪಮ ಅವಳ ಮೇಲೆ ಗೂಬೆ ಕೂರಿಸ್ತಾ ಇಲ್ಲ. ಭುವನೇಶ್ವರದಲ್ಲಿ ಭವ್ಯವಾದ ಸರಕಾರಿ ಬಂಗ್ಲೆಯಲ್ಲಿದ್ದವಳಿಗೆ ಈ ಮನೆ ಇಷ್ಟವಾಗುವುದಕ್ಕೆ ಸಾಧ್ಯವೇ ಇಲ್ಲ.

ಇಕ್ಕಟ್ಟಾದ ಮೂರಂತಸ್ತಿನ ಮನೆಯಿದು. ಮನೆ ಮಾಲಿಕ ಕಟ್ಟಿಸುವಾಗ ಬಹುಶಃ ಕಣ್ಣಿಗೆ ಪಟ್ಟಿ ಕಟ್ಟಿಕೊಂಡು ಇಟ್ಟಿಗೆ ಇಡಸ್ತಾಹೋಗಿರಬೇಕು. ಅಬ್ಬಾ ಎಂಥ ಟೇಸ್ಟು! ಗೇಟು ಅನ್ನುವಂಥದೊಂದು ಇಲ್ಲವೇ ಇಲ್ಲ. ಮೇನ್ ರೋಡಲ್ಲೆ ನಿಂತು ಹೆಬ್ಬಾಗಿಲಿನ ಕರೆಗಂಟೆ ಒತ್ತಬಹುದು. ಹಾಗಂತ ಕೆಳಗೊಬ್ಬರು ಬಾಡಿಗೆಗೆ ಇದ್ದಾರೆ, ಸರಕಾರಿ ಹೈಸ್ಕೂಲಿನ ಹೆಡ್‌ಮಾಸ್ಟರು. ಅದರ ಮೇಲಿನ ಎರಡೂ ಅಂತಸ್ತನ್ನು ಅನುಪಮ ಬಾಡಿಗೆಗೆ ತೆಗೆದುಕೊಂಡಿದ್ದಾನೆ. ಹೇಳುವುದಕ್ಕೆ ಎರಡು ಅಂತಸ್ತು. ಒಂದೆಡೆ ನಿಂತು ಒಂದು ಕಾಲನ್ನೆತ್ತಿ ತಿರುಗಿಸಿದರೆ ಇಡೀ ಅಂತಸ್ತನ್ನೆ ಕವರ್ ಮಾಡಬಹುದು. ಮನೆಯಲ್ಲ ಇದು, ಟ್ರಾನ್ಸ್‌ಫಾರ್ಮರ್ ಕಂಬ ಇದ್ದಂತಿದೆ.

ಅನುಪಮ ಇವೆಲ್ಲವನ್ನು ಸುಜಾತಳಿಗೆ ಪತ್ರದಲ್ಲಿ ಬರೆದು ತಿಳಿಸಿಬಿಡಬೇಕಿತ್ತು. ಆದರೆ ದೂರದಲ್ಲಿರುವ ಅವಳಿಗೆ ಇವನ್ನೆಲ್ಲ ಬರೆದು ತೊಂದರೆಕೊಡಬಾರದೆಂಬ ಇರಾದೆಯಿಂದ ಎರಡೂ ಅಂತಸ್ತನ್ನು ಬಾಡಿಗೆಗೆ ಪಡೆದಿದ್ದೇನೆಂದು ಬರೆದಿದ್ದ. ಗಂಡ ತನಗೋಸ್ಕರ ಅರಮನೆಯನ್ನೆ ತೆಗೆದುಕೊಂಡಿರಬೇಕೆಂದು ಈ ಬಡಪಾಯಿ ಅಲ್ಲಿ ಕನಸು ಕಂಡಿರಬೇಕು... ಛೇ... ನನ್ನಿಂದ ತಪ್ಪಾಗಿ ಬಿಡ್ತು!

ಕಿರಿಕಿರಿಯಾಗಿ ಸುಜಾತಾಳ ಕಣ್ಣಾಲಿಗಳು ತುಂಬಿ ಬಂದವು. "ಏನ್ ನೋಡಿ ಈ ಮನೆಯನ್ನ ಸೆಲೆಕ್ಟ್ ಮಾಡಿದ್ರಿ ಅಂತ ಹೇಳಿ ನೋಡೋಣ! ಒಂದು ಮಾಳಿಗೆಯಲ್ಲಿ ಮಲಗುವ ಕೋಣೆಯಿದ್ದರೆ ಇನ್ನೊಂದರಲ್ಲಿ ಅಡುಗೆ ಕೋಣೆ. ನನಗಿಲ್ಲಿ ಯಾರಿದ್ದಾರೆ? ಅಮ್ಮ ಇದ್ದಾರಾ? ಅತ್ತೆ ಇದ್ದಾರಾ? ಮೂರು ತಿಂಗಳೂ ಪೂರ್ತಿ ಆಗದ ಪುಟ್ಟೀನ ನೋಡೋರು ಯಾರು? ಅವಳನ್ನು ಮೇಲೆ ಮಲಗಿಸಿ ನಾನು ಕೆಳಗೆ ಬಂದು ಅಡಿಗೆ ಮಾಡೋದಾ?"

"ಅವ್ವಾರ, ನಾನ ಬಂದಿದ್ದೇನ್ರೀ."

"ಯಾರು!" ಸುಜಾತಾ ನಿಂತಲ್ಲಿಂದಲೆ ಹಿಂದಕ್ಕೆ ತಿರುಗಿದಳು. ಬಾಗಿಲ ಹತ್ತಿರವೆ ಗೋಡೆಗೊರಗಿ ಮಧ್ಯ ವಯಸ್ಕ ಹೆಂಗಸೊಬ್ಬಳು ನಿಂತಿದ್ದಳು. ತೆಳ್ಳಗಿನ ಮೈಮಾಟ. ಚೌಕಳಿ ಹಸಿರು. ಬಣ್ಣದ ಸೀರೆ ಸುತ್ತಿದ್ದಳು. ಸಾಕಷ್ಟು ಉದುರಿಹೋದ ಕೂದಲಿಗೆ ಒಂದಿಷ್ಟು ಎಣ್ಣೆ ಹಾಕಿ ತುರುಬು ಕಟ್ಟಿಕೊಂಡಿದ್ದಳು. ಎಣ್ಣೆಗಪ್ಪು ವರ್ಣವಾದರೂ ನೋಡುವುದಕ್ಕೆ ಕುರೂಪಿಯಾಗಿರಲಿಲ್ಲ. ಮೂಗುತಿ, ಬೆಂಡೋಲೆ ಎಲ್ಲಾ ಬಂಗಾರದ್ದೆ. ಬಾಯಲ್ಲಿ ತುಂಬಿ ಕೊಂಡಿದ್ದ ಎಲೆ ಅಡಿಕೆ, ಯಾರಿವಳು?

"ನಾನ ಫಕೀರನ ಅವ್ವರೀ. ಯಜಮಾನ್ರು ಮನಿ ಕೆಲಸಕ್ಕ ಬರಾಕ ಹೇಳಿದ್ರೀ."

ಅನುಮಪಮನಿಗಂತೂ ಬಾನ ಚಂದಿರನೆ ಕೈಗೆ ಸಿಕ್ಕಂತಾದ. "ಇವಳು ಕೆಳಗಿನ ಮನೆಯಲ್ಲಿ ಕೆಲಸ ಮಾಡ್ತಿದ್ದವಳು. ನಾನವಳಿಗೆ ಬರಲಿಕ್ಕೆ ಹೇಳಿದ್ದೆ. ಒಂದು ವರ್ಷದ ಮಟ್ಟಿಗಲ್ಲವಾ, ಹೇಗೂ ಒಂದು ವರ್ಷದೊಳಗೆ ನಮಗೆ ಕ್ವಾರ್ಟರ್ಸ್ ಸಿಕ್ಕೇ ಸಿಗ್ತದೆ. ದಿಸ್ ವುಮನ್ ಈಸ್ ಎಕ್ಸಟ್ರೀಮಲೀ ಗುಡ್!" ಆ ಹೆಂಗಸಿನೆದುರು ಅವಳ ಗುಣಗಾನ ಮಾಡೋದು ಅನುಪಮನಿಗೆ ಸರಿ ಎನಿಸಿರಲಿಕ್ಕಿಲ್ಲ. ಹಾಗಾಗಿ ಹೆಂಡತಿಗೆ ಇಂಗ್ಲಿಷ್‌ನಲ್ಲಿ ಹೇಳಿದ, ಹಾಗೆಯೇ ಕೆಳಗಿಳಿದು ಹೋಗಿಬಿಟ್ಟ.

ಸುಜಾತ ಮೌನಿಯಾಗಿ ಫಕೀರನ ಅಮ್ಮನನ್ನು ನೋಡುತ್ತಿದ್ದಳು. ಮುಖ ನೋಡಿದರೆ ಸುಭಗಳಂತೆ ಕಾಣುತ್ತಾಳೆ. ಆದರೆ ಮುಖದಂತೆ ವ್ಯಕ್ತಿತ್ವ ಇರಬೇಕು ಎಂದಿಲ್ಲವಲ್ಲ! ಎರಡು ವರ್ಷಗಳ ಹಿಂದೆ ಅವಳ ಹಳೆಯ ಕೆಲಸದವಳು ಒಂದಲ್ಲ ಎರಡಲ್ಲ ಮೂರು ಬೆಲೆ ಬಾಳುವ ಸೀರೆಗಳನ್ನೇ ಹಾರಿಸಿಬಿಟ್ಟಿದ್ದಾಳೆ.

ಇವಳೊಂದಿಗಂತೂ ಸಲಿಗೆ ಸುತರಾಂ ಸಲ್ಲ. ದೃಢ ಮನಸ್ಸಿನಿಂದ ಹೇಳಿಯೇ ಬಿಟ್ಟಳು – "ನೋಡಮ್ಮ, ನಮ್ಮ ಮನೆಕೆಲಸ ಸ್ವಲ್ಪ ಬೇರೆ ರೀತಿಯದು. ಅಲ್ಲಿಷ್ಟು ಇಲ್ಲಿಷ್ಟು ಮಾಡಿ ಮುಗಿಸಿಕೊಂಡು ಹೋದರೆ ಆಗೋದಿಲ್ಲ. ಪಾತ್ರೆ ತಿಕ್ಕಬೇಕು, ಗುಡಿಸಬೇಕು, ಒರೆಸಬೇಕು, ಬಟ್ಟೆ ಒಗೆಯೋದಂತೂ ಇದ್ದೇ ಇದೆ. ಆಗೀಗ ಮಸಾಲೆ ಪುಡಿಗೂ ಕುಟ್ಟಿಕೊಡಬೇಕು." ಇದ್ದ ವಿಷಯವನ್ನು ಬಿಡಿಸಿ ಹೇಳಿಬಿಡುವುದೇ ವಾಸಿ ಎಂದು ಸುಜಾತಾಳಿಗೆ ಅನ್ನಿಸಿತು.

"ಆಗಲರಿಯವ್ವಾ, ಮನಿ ಅಂದಮ್ಯಾಲ ಇವೆಲ್ಲಾ ಇರೋವೆ. ನಿಮಗೇನು ಹರಕತ ಆಗಾಕಿಲ್ಲರಿ. ಕೊಡ್ರಿಯವ್ವಾ ಮಗೀನ ನನ್ನ ಹಂತೇಕ. ಹೋಗಿ ಲಗೂನ ಜಳಕಾ ಮಾಡಿ ತಯಾರಾಗಿ ಬರ್ರಿ. ಮತ್ತ ಮಗೀಗ ಉಣಸಿ ಮಲಗಿಸದ್ರ ಕೆಲಸ ಮಾಡಾಕ್ ಆಗತೈತ್ರಿ. ನಾ ತರಕಾರಿ

ಹೆಚ್ಚತ್ತೇನಿ. ಆಮ್ಯಾಕಿಂದ ನೀವ್ ಏನೂಂತ ಮಾಡಕಳಿ."

ಸುಜಾತಾ ಸ್ತಬ್ಧಳಾಗಿ ಅವಳ ಮಾತುಗಳನ್ನೇ ಕೇಳ ತೊಡಗಿದಳು.

ಫಕೀರನ ಅಮ್ಮ ಇನಾಳನ್ನೆತ್ತಿಕೊಂಡು ಲಲ್ಲೆಗೆರೆಯು ತ್ತಿದ್ದಳು. ಮೂರು ತಿಂಗಳೂ ಆಗದ ಮಗು ತಾನು ಹೇಳಿದ್ದೆಲ್ಲವನ್ನು ಅರ್ಥ ಮಾಡಿಕೊಳ್ಳುತ್ತಿದ್ದಾಳೇನೊ ಎಂಬಂತಿತ್ತು ಅವಳ ಮಾತುಗಳು.

"ರಾಜಕುಮಾರಿಗೆ ಕಾಲಾಗ ಗೆಜ್ಜೆಯಾಕಿಲ್ಲ! ಗೆಜ್ಜೆ ಮಾಡಸ್ತಾರಾ, ಕೈಯಾಗ ತೊಟಕೊಳ್ಳಾಕ ಬಳಿ ಮಾಡಿಸ್ತಾರ... ಝುಮಕ್ ಝುಮಕ್ ಅಂತ ಕುಣಿತಾಳ ನಮ್ ರಾಜಕುಮಾರಿ... ಅರೆರೆ ಇದೇನ ಮಾಡದಿ... ಅಯ್ಯಯ್ಯಯ್ಯೊ ಎಲ್ಲ ಒದ್ದಿ ಮಾಡಬಿಟ್ಟಿ."

ಬಚ್ಚಲು ಮನೆಗೆ ಹೋಗಿದ್ದ ಸುಜಾತಾ ಹಾಗೆ ಓಡಿ ಬಂದಳು. "ಅಯ್ಯೋ ನಿನ್ನ ಸೀರೆ ಒದ್ದೆ ಮಾಡಿಬಿಟ್ಟಲ್ಲವಾ ...ಕೊಡು ...ಕೊಡು ...ಕೊಡು."

ಫಕೀರನ ಅಮ್ಮ ಇನಾಳನ್ನು ಕೊಡಲಿಲ್ಲ. "ಅಯ್ಯ ಶಿವನ... ಈಟ ಸಾಣ ವಿಷ್ಯಾಕ ನೀವ್ ಜಳಕಾ ಮಾಡೂದ ನಿಲ್ಸ ಬಂದ್ರೇನ್ರಿ ಅವ್ವರ! ನಾಯೇನ್ ಮಕ್ಕಳ ಹಡದಿಲ್ಲೇನ್ರಿ... ಸಾಕಿಲ್ಲೇನ್ರಿ? ನಾಯೇನ್ ಅವರ ಹೇಲು-ಉಚ್ಚೆ ತಗದಿಲ್ಲೇನ್ರಿ?... ನೀವ್ ಹೋಗ್ರಿ. ಲಗೂನ ಮುಗಿಸಿಕೊಂಡಬರ್ರಿ... ಹೀಂಗ್ ಹೊತ್ತ ಮಾಡಿದ್ರ ಕೂಸೀಗ ಹಸಿವಾಗತೈತಿ."

ಪೇಟೆಯ ವಾತಾವರಣದಲ್ಲಿಯೇ ಬೆಳೆದ ಸುಜಾತಾಳಿಗೆ ಇದು ಅಚ್ಚರಿ ಹುಟ್ಟಿಸುತ್ತಿತ್ತು. ಕೆಲಸದವರೆಂದರೆ ಗಡಿಯಾರದ ಮುಳ್ಳಿಗೆ ಬದ್ಧರಾಗಿರುವವರು. ಕಾಯಂ ಕೆಲಸದಲ್ಲಿ ಏನಾದರೊಂದು ವ್ಯತ್ಯಾಸವಾಗಿಬಿಟ್ಟರೆ ಮೋರೆ ಕಪ್ಪಿಟ್ಟಿತು. ಅದಕ್ಕೆ ತಕ್ಕ ಹಾಗೆ ಒಂದಕ್ಕೆರಡು ಉತ್ತರವೂ ತಯಾರಾಗಿರುತ್ತದೆ.

ಆದರೆ ಇಲ್ಲಿದ್ದಾಳೆ ಈ ಫಕೀರನ ಅಮ್ಮ. ಕೆಲಸದ ಮೊದಲನೆಯ ದಿನ ಅಲ್ವ. ನನ್ನ ಮನಸ್ಸನ್ನ ಗೆಲ್ಲುವ ಪ್ರಯತ್ನ ಮಾಡೇಮಾಡ್ತಾಳೆ. ನಿಜವಾದ ಬಣ್ಣ ಗೊತ್ತಾಗುವುದು ತಿಂಗಳ - ಎರಡು ತಿಂಗಳ ನಂತರವೇ ... ನೋಡೋಣ.

ವಿಚಿತ್ರವೆಂದರೆ, ಸುಜಾತಾಳ ಈ ಸಂದೇಹ ಎಂದೂ ನಿಜವಾಗಲೇ ಇಲ್ಲ. ಫಕೀರನ ಅಮ್ಮ ಹಾಗೆಯೇ ಇದ್ದಳು. ಎಲೆ ಅಡಿಕೆಯ ಕೆಂದುಟಿಯಲ್ಲಿ ಮುಗುಳು ನಗೆಯ ಜತೆಗೆ ಸವಿಯಾದ ಮಾತುಗಳು. ಕೆಲಸ ಎಷ್ಟೇ ಆದರೂ, ಏನೇ ಆದರೂ ಬೇಸರವಿಲ್ಲ. ಮೇಲಿಂದ ಒಂದೆರಡು ಕೆಲಸ ಹೆಚ್ಚಿಗೆ ಮಾಡೋಳು. ಇನಾಳ ಕೆಲಸ ಮಾಡೋದರಲ್ಲೂ ಅವಳಿಗೆ ಎಲ್ಲಿಲ್ಲದ ಆಸಕ್ತಿ.

ಸುಜಾತಾಳಿಗೆ ಆಶ್ಚರ್ಯ. ಈ ಹೆಂಗಸಿನ ತೆಳ್ಳಗಿನ ಮೈಯಲ್ಲಿ ಅದೆಲ್ಲಿಂದ ಇಷ್ಟೊಂದು ತಾಕತ್ತು ಶೇಖರಣೆಯಾಗಿಬಿಡುತ್ತದೆ! ಮೂರು ಅಂತಸ್ತು ಇಳಿದು ಹೋಗಿ ಕುಡಿಯೋದಕ್ಕಾಗಿ, ಕೆಳಗಿನಿಂದ ನೀರು ತರುತ್ತಾಳೆ. ಕೆಳಗಿನ ಮನೆ ಕೆಲಸ, ಮೇಲಿನ ಮನೆ ಕೆಲಸ, ಜೊತೆಗೆ ಇನಾಳನ್ನು ಗಂಟೆಗಟ್ಟಲೆ ಹಿಡಿದು ಆಡಿಸೋದು!

ಉಸಿರುಗಟ್ಟಿಸುವ ಈ ಮನೆಯಲ್ಲಿ ಅವಳೊಂದೇ ಬೀಸುವ ತಂಗಾಳಿಯಂತಿದ್ದಳು.

ಇನಾಳನ್ನು ಮಲಗಿಸುವಾಗ ಫಕೀರನ ಅಮ್ಮ ತನ್ನ ಪುರಾಣ ಬಿಚ್ಚಿಡಲಾರಂಭಿಸಿದಳು - "ನಿಮಗ ನಂಬಿಕೆ ಬರ್ಕಿಲ್ರಿಯವ್ವಾ. ಈ ನನ್ನ ಮಾರಿ ನೋಡ್ತಿರಲ್ಲ ಇದ ಹೀಂಗ್ ಇತ್ತೇನ್ರಿ? ನೋಡ್ರಿಯಲ್ವಾ ನಾನಿಷ್ಟ ಲಟ್ಟ ಇದ್ದಿದ್ದನ್ರಿ." ತನ್ನೆರಡೂ ಕೈಗಳನ್ನು ಬಿಡಿಸಿ ತೋರಿಸಿದಳು. "ಫಕೀರನ ಅಪ್ಪಂದು ಒಂದ ಸಾಣ ಅಂಗಡಿ ಇತ್ರಿ. ಎರಡು ಪೈಸಾದ್ದು ಭಲೋ ವ್ಯಾಪಾರ ಇತ್ರಿ. ನನಗ ಕುತ್ತಿಗ್ಯಾಗ, ಕೈಯಾಗ, ಕಿಂವಿಯಾಗ ಬಂಗಾರದ ದಾಗಿನು ಮಾಡಿಸಿ ಹಾಕಿದ್ದನ್ರಿ. ಅದ್ರ ಪನ್ನಿ ಮತ್ತು ಚೆನ್ನಿ ಮದ್ವಿಯಾಗ ಸಾಂವಕಾರನ ತಾವ ಮೂರ ಸಾವಿರ ಸಾಲ ಮಾಡಿದ್ದನ್ರಿ. ತೀರಸಾಕಾಗಿದ್ದಿಲ್ಲರಿ. ಆ ಸಾಂವಕಾರ ಬಂದ ಅಂಗಡಿ ಪೂರಾ ಜಪ್ತಿ ಮಾಡದನ್ರಿ. ಆಮ್ಯಾಕಿಂದ ಮನಿಯೊಳಗಿನ ಒಂದೊಂದೇ ಸಾಮಾನು, ದಾಗೀನು ಎಲ್ಲಾ ಮಾರಾಟ ಮಾಡೋ ಪ್ರಸಂಗ ಬಂದಬಿಡ್ತರೀ."

ತನ್ನ ಅಳಿದುಳಿದ ಒಡವೆಗಳನ್ನು ತೋರಿಸಿ ಅವಳೆಂದಳು - "ನೋಡ್ರಿಯವ್ವಾ, ಈಟ ಉಳದಾಗ ನನ್ನ ತೆಲಿ ಸುತ್ತ ಬಂತ್ರಿ. ನೀವ ಹೇಳ್ರಿಯವ್ವಾ. ಒಂದಿನ ನನ ಮಗನ ಮದ್ವಿ ಆಗತೈತಿಲ್ಲೊ? ಸೊಸ ಬರತಾಳ ನನಗ. ಒಬ್ಬೇ ಮಗಾರಿ. ಆಕಿಗೊಂಚೂರು ದಾಗಿನಿ ಮುಟ್ಟಲಿಲ್ಲಾ ಅಂತಂದ್ರ ಭಲೋ ಇರತೈತೇನ್ರಿ!

"ಆಮ್ಯಾಕಿಂದ ಒಬ್ಬಾಕಿ ಮಗಳಿದ್ದಾಳರ್ರಿ. ಅದಕ ಮತ್ತ... ಮುದುಕನ ಕೂಟಾ ಜಗಳಾಡಿ ದುಡಿಯಾಕ ಬರೂದರ್ರಿ. ಎರಡ ಮನ್ಯಾಗಿಂದ ಬಂದದ್ರಲ್ಲಿ ಜೀವನ ನಡದ ಹೋಗತೈತ್ರಿ... ಏಯ್... ಮುದುಕ ಏನ್ ಉಪಯೋಗಿಲ್ಲರಿ. ಅಂವಗ ಗಂಟ ನೋವು ಬ್ಯಾರೆ ಹಿಡಿಕಂಡೈತಿ. ಮಗಾ ಮೆಕೆನಿಕ್ ಅಧಾನ್ರಿ... ಕೆಲ್ಸಾ ಮಾಡಿ ಗಳಸ್ತಾನ್ರಿ. ಅವಂಗ ಕಮಾಯಿ ಐತಿ."

ಸುಜಾತಾಳಿಗೆ ಆಶ್ಚರ್ಯವಾಯಿತು. ಮುಟ್ಟಿದರೆ ಮುರಿದು ಬೀಳುವಂತಹ ಪರಿಸ್ಥಿತಿ. ಆದರೂ ಮುದುಕಿ ಗಟ್ಟಿಯಾಗಿದ್ದಾಳೆ. ಬಡತನದಿಂದ ಮೇಲೆದ್ದು ಸಿರಿತನವನ್ನಪ್ಪಿ ಕೊಳ್ಳುವುದು ಬಲು ಸುಲಭ. ಆದರೆ ಒಂದು ಕಾಲದಲ್ಲಿ ಕುಳಿತು ಉಂಡವರು ಮನೆ ಮನೆಗೆ ಹೋಗಿ ಮುಸುರೆ ತಿಕ್ಕುವುದು ಅಷ್ಟು ಸುಲಭವಾ? ಆದರೂ ಏನೊಂದು ವ್ಯಥೆಯಿಲ್ಲ, ಯಾರನ್ನೂ ದೂರೋದಿಲ್ಲ. ಇದ್ದುದರಲ್ಲಿಯೆ ಒಂದು ರೀತಿಯ ಆತ್ಮ ಸಮಾನದ ಬದುಕು!




"ಅಲ್ರೀ, ಅವ್ವಾರ... ಸಾಂವಕಾರ ನಮ್ಮ ಅಂಗಡಿ ಜಪ್ತಿ ಮಾಡದಾಗ ನನ ತಮ್ಮಗೋಳು ಇಬ್ಬರೂ ಬಂದಿದ್ದರಿ. ನನಗ ತಮ್ಮ ಸಂಗಡ ಬರಾಕ್ ಹೇಳಿದ್ರೀ. ನಾ ಒಲ್ಲೆ ಅಂದೇನ್ರಿ. ಯಾವನ ಕೈ ಹಿಡಿದಿದ್ದೆ ಅವನ ಜೊತೆ ಸುಖದಾಗಂತೂ ಕಾಲ ಚಾಚಕೊಂಡ ಕುಂತಾಕಿ ಈಗ ಕಷ್ಟದಾಗ ಬಿಟ್ಟಹೋಗಬಿಡಲೇನ್ರಿ... ನೀವ ಹೇಳ್ರಿ, ದ್ಯಾವರು ಮೆಚ್ಚತಾನೇನ್ರಿ?"

ಮಾತನಾಡುತ್ತಿದ್ದಂತೆ ಅವಳ ಕಣ್ಣುಗಳಲ್ಲಿ ಹೊಳಪು ಕಾಣಿಸಿಕೊಂಡಿತು. - "ಅಲ್ರೀ ಅವ್ವಾರೆ, ನಮ್ಮ ಅಂಗಡಿ ಲಿಲಾವು ಆಗಿ ಬಿಟ್ಟೈತಿ." ಅವಳ ಗಂಟಲು ಒಮ್ಮೆಲೆ ಕಟ್ಟಿ ಬಂದಂತಾಯಿತು. ಮತ್ತೆ ಮಾತು ಮುಂದುವರಿಸಿದಳು - "ನಾ ಈಗ ಹೊಟ್ಟಿ ಬಟ್ಟಿ ಕಟ್ಟಿ ಚೂರ-ಪಾರ್ ಉಳಿಸಾಕ್ ಹತ್ತೇನ್ರಿ. ದೀಡ ಸಾವಿರಕ ಒಂದು ಜಮೀನ ಸಿಗತೈತ್ರಿ."

ಅಬ್ಬಾ! ಐವತ್ತರ ಹೊಸ್ತಿಲಲ್ಲೂ ಭವಿಷ್ಯದ ಬಗ್ಗೆ ಅದೆಷ್ಟು ಕನಸುಗಳು! ಅವಳು ಬದುಕುವ ರೀತಿ ನೋಡಿದರೆ ಹೊಟ್ಟೆಕಿಚ್ಚು ಬರುತ್ತದೆ. - ಕಷ್ಟವನ್ನು ಕಷ್ಟವೆಂದು ತಿಳಿಯದೆ ಮುಂದಕ್ಕೆ ಹೋಗುವ ಧೈರ್ಯ ಎಷ್ಟು ಜನರಿಗಿದೆ? ಬದುಕಿನಲ್ಲಿ ಹಗಲು - ರಾತ್ರಿಯನ್ನು ಸಮಾನಸ್ಥಿತಿಯಲ್ಲಿ ನೋಡುವವರು ಎಷ್ಟು ಜನರಿದ್ದಾರೆ? ಕತ್ತಲೆಯ ರಾತ್ರಿಯಲ್ಲಿ ಸೂರ್ಯೋದಯದ ಕನಸು ಕಾಣುವವರೇ ಎಲ್ಲರು.

ಅಂದು ಫಕೀರನ ಅಮ್ಮ ಬರುವುದಕ್ಕೆ ತುಂಬಾ ತಡವಾಯಿತು. "ಯವ್ವಾ ಬ್ಯಾಸರ ಮಾಡಬ್ಯಾಡ್ರಿ. ಹೇಳದೆ ಕೇಳದೆ ದೂರ ಹೋಗಬಿಟ್ಟಿದನ್ರಿ." ಎಲೆ ಅಡಿಕೆ ಜಗಿದು ಕರ್‍ರಗಾದ ಹಲ್ಲುಗಳನ್ನು ಗಿಂಜುತ್ತ ಅವಳು ನಗುತ್ತ ಹೇಳಿದಳು - "ನಮ ಫಕೀರಾಗ ಕನ್ಯಾ ನೋಡಾಕ್ ಹೋಗಿದ್ದನ್ರಿ. ಭಾಳ ಭಲೋ ಐತ್ರಿ. ಗುಂಡಗ ಕೆಂಪಾಗಿದ್ದಾಳರಿ. ಹದ್ನಾರ - ಹದನ್ಯೋಳ ಇರಬೌದ್ರಿ. ಅವಳಪ್ಪಗೊಂದ ಸಾಣ ಬಳ್ಳೀ ಅಂಗಡಿ ಐತ್ರಿ. ಕೊಡುದು ತಾಂಬುದು ಎಲ್ಲಾ ಸರಿ ಮಾಡಬೌದೇಳ್ರಿ." ಸ್ವಲ್ಪ ಹೊತ್ತು ಸುಮ್ಮನಿದ್ದು ಪುನಃ ಹೇಳಿದಳು - "ಅದರಾಗೇನೈತಿ? ಏನ ಕೊಟ್ಟರೂ ತನ್ನ ಮಗಳಗ ಕೊಡತಾನಲ್ಲರಿ? ನಾ ಹೇಳಬಿಟ್ಟೇನ್ರಿ, ನನ್ನ ಫಕೀರಗ ಮುತ್ತಿನಂಥ ಹುಡುಗಿ ಬೇಕು, ಮತ್ತಿನ್ನೇನೂ ಬ್ಯಾಡ."

ಮದುವೆಯ ಸಿದ್ಧತೆ ನಿಧಾನಗತಿಯಲ್ಲಿ ಸಾಗುತ್ತಿದೆ ಎಂಬುದರ ನೇರ ವರದಿ ಸುಜಾತಾಳಿಗಂತೂ ಫಕೀರನ ಅಮ್ಮನಿಂದ ಸಿಗುತ್ತಿರುತ್ತಿತ್ತು. ಸೊಸೆಯನ್ನು ಮನೆ ತುಂಬಿಸಿಕೊಳ್ಳುವಾಗ ಕೊಡುವುದಕ್ಕೆಂದು ತನ್ನಲ್ಲಿದ್ದ ಬೆಂಡೋಲೆಯ ಜೊತೆಯನ್ನು ಆಗಲೇ ಸ್ವಚ್ಛ ಮಾಡಿಸಿ ಇಟ್ಟಿದ್ದಳು. ಮನೆ ಯಜಮಾನನ ಹತ್ತಿರ ಗೋಗರೆದು ಮನೆಗೊಂದು ಸಣ್ಣ ಜಗಲಿಯನ್ನು ಜೋಡಿಸಿ ಕೊಂಡಳಂತೆ. ಅದಕ್ಕೆ ನಾಲ್ಕೂ ಕಡೆ ಪರದೆ ಇಳಿಬಿಟ್ಟು ಕೋಣೆಯಂತೆ ಮಾಡಿಸಿದಳಂತೆ.

"ಹೊಸದಾಗಿ ಮದ್ವಿಯಾದೋರು ಮನಸಿನಾಗಿದ್ದದ್ದನ್ನ ಹೇಳಕೊಳ್ಳಾಕ ಮುಚ್ಚು ಮರಿ ಬೇಕಾಗತೈತಿ. ಅಲ್ಲೇನ್ರೀಯವ್ವಾ?"

ಹೀಗೆ ಒಂದು ದಿನ ಮದುವೆಯೂ ಆಯಿತು. ಸುಜಾತಾ ಸೊಸೆಗಾಗಿ ಫಕೀರನ ಅಮ್ಮನ ಹತ್ತಿರ ಐವತ್ತು ರೂಪಾಯಿ, ಒಂದು ಸೀರೆ, ಅರಿಸಿಣ-ಕುಂಕುಮ,

ಬಳೆಗಳನ್ನು ಕಳಿಸಿಕೊಟ್ಟಳು. ಮದುವೆಗೋಸ್ಕರ ಫಕೀರನ ಅಮ್ಮ ಒಂದು ವಾರದ ರಜೆ ಪಡೆದ್ದಿಳು. ಬದಲಿಗೆ ತನ್ನ ವಠಾರದ ಒಂದು ಹುಡುಗಿಯನ್ನು ಕೆಲಸಕ್ಕೆಂದು ಗೊತ್ತು ಮಾಡಿದ್ದಳು.

ಶೋಭನದ ಮರುದಿನವೇ ಫಕೀರನ ಅಮ್ಮ ಕೆಲಸಕ್ಕೆ ಹಾಜರು. ಸುಜಾತಾ ನಗುತ್ತ ಕೇಳಿದಳು – "ಏನು ಫಕೀರನ ಅಮ್ಮ ನಿನ್ನ ಸೊಸೆ ಆಗಲೇ ನಿನಗೆ ಕೆಲಸ ಮಾಡುವುದಕ್ಕೆ ಬಿಟ್ಟಳಾ ?"

ಒಗೆಯಬೇಕಾದ ಬಟ್ಟೆಗಳನ್ನೆಲ್ಲ ಬಕೆಟ್‌ಗೆ ತುಂಬಿಸುತ್ತ ಫಕೀರನ ಅಮ್ಮ ಸುಜಾತಾಳ ಕಡೆಗೆ ನೋಡಿದಳು.

"ಏನ್ರಿಯವ್ವಾ, ಸೊಸಿ ಬಂದಬಿಟ್ರ ಏನಾತೀಗ ? ಏನ್ ಕಾಲ ಚಾಚಿ ಕುಂತ್, ಆಕಿ ಮ್ಯಾಲ್ ಹುಕುಂ ಚಲಾಯಿಸ್ಲೇನ್ರಿ ? ನನ ಕಡೀಯಿಂದ ಆಗಾಣೆಲ್ಲ ನೋಡ್ರಿ. ಆ ಶಿವ ಎಲ್ಲೀವರೀಗ ಕೈಕಾಲು ಗಟ್ಟಿ ಇಟ್ಟಿರತಾನೋ ಅಲ್ಲೀವರೀಗ ದುಡಿತೀನರಿ. ಆಮ್ಯಾಕಿಂದ ಬಿದ್ರ ಮತ್ತ ಮಗ–ಸೊಸೀನ ನೋಡಬೇಕಲ್ಲೇನರಿ ?" ಹುಮ್ಮಸ್ಸಿನಿಂದ ಮಾತು ಮುಂದುವರಿಸಿದಳು – "ನನ್ನ ಸೊಸಿ ಭಾಳ ಒಳ್ಳೆಯವಳರಿ, ಕೆಲಸಕ್ಕೆ ಹೋಗೋದು ಬ್ಯಾಡ ಅಂತ ನನ ಕೈ ಹಿಡಕಂಡ ಸಾರಿ ಸಾರಿ ಹೇಳಿದಳರಿ, ಹರಕತ ಇದ್ರ ತಾನೇ ಹೊಕ್ಕೇನಿ, ಸೊಸೆ ಬಂದ ಮ್ಯಾಲೆ ಅತ್ತಿ ಮನಿ–ಮನಿಗೆ ಹೋಗಿ ಮುಸುರಿ ಭಾಂಡಿ ತಿಕ್ಕೋತ ಕುಂತರ ಮಂದಿ ಏನಂದಾರು, ಅಂತ ಅಂದಳರಿ... ಬಿಡ್ರಿ... ನಾ ಯಾಕ್ ಕೇಳತೇನ್ ಹೇಳ್ರಿ ಅವಳ ಮಾತ! ನನಗ ಇರೋಳು ಒಬ್ಬಾಕಿ ಸೊಸಿ. ಆಕಿನ್ ಮಂದಿ ಮನಿ ಕೆಲಸಕ್ಕೆ ಕಳಿಸಿದ್ರ ಅವರ ಅಪ್ಪನ ಮಾರಿ ನೋಡೋದ ಹ್ಯಾಂಗ್ರಿ ! ಹಾಂಗ, ನಾ ಆಕಿಗ ಬ್ಯಾಡ ಅಂತಂದೆನ್ರಿ."

ನಗುನಗುತ್ತ ತನ್ನ ಕೆಲಸಗಳಲ್ಲಿ ತೊಡಗಿಕೊಂಡಳು.

* * *

ದಸರಾ ರಜೆಗೆ ಇನ್ನೂ ಸುಮಾರು ಇಪ್ಪತ್ತು ದಿನ ಬಾಕಿಯಿದೆ. ಅಂದು ಆಫೀಸಿನಿಂದ ಹಿಂದಿರುಗಿದ ಅನುಪಮ ನಗುನಗುತ್ತ ಸುಜಾತಾಳ ಕೈಗೊಂದು ಪತ್ರವನ್ನಿಟ್ಟ– "ನಿನ್ನ ಅಪ್ಪ– ಅಮ್ಮ ಹನ್ನೆರಡನೆಯ ತಾರೀಖಿಗೆ ಬರ್‍ತಾ ಇದ್ದಾರೆ."

ಒಂದೇ ಉಸಿರಿಗೆ ಪತ್ರ ಓದಿ ಸುಜಾತಾ ಹಿರಿಹಿರಿ ಹಿಗ್ಗಿದಳು. ಮದುವೆಯಾಗಿ ಮೂರು ವರ್ಷವಾದರೂ, ಅವಳ ತಂದೆ ತಾಯಿ ಒಮ್ಮೆಯೂ ಬಂದಿಲ್ಲವೆಂದೇನಲ್ಲ. ಬೆಳಗ್ಗೆ ಬಂದು ಸಂಜೆ ಹೊರಟುಹೋಗುತ್ತಿದ್ದರು. ಒಂಬತ್ತು ನಂಬರ್ ಯೂನಿಟ್‌ನಿಂದ ಫಾರೆಸ್ಟ್ ಪಾರ್ಕ್‌ನ ದೂರವಾದರೂ ಎಷ್ಟಿದೆ. ಶರ್ಬತ್ ಅಥವಾ ಚಹಾ ಕಾಫಿ ಬಿಟ್ಟರೆ ಅವಳ ಗಂಡನ ಮನೆಯಲ್ಲಿ ಅವರೇನನ್ನೂ ಮುಟ್ಟುವುದಿಲ್ಲ. ಹಾಗಂತ ಅವಳ ಅತ್ತೆ ಮಾವ ಪೇಟೆಯಿಂದ ತಿಂಡಿ ತಿನಿಸು ಅಥವಾ ವಾಸುದೇವ ಮಂದಿರದಿಂದ ಸಿಹಿತಿಂಡಿ ತರಿಸಿ ಇಡುತ್ತಾರೆ. ಗರ್ವದಿಂದ ಸುಜಾತಾಳ ಕಣ್ಣಾಲಿಗಳು ತುಂಬಿಬಂದವು. ಅವರು ಈಗಲೂ ಅದೇ ಸಂಪ್ರದಾಯವನ್ನು ಮುಂದುವರಿಸಿಕೊಂಡು ಬಂದಿದ್ದಾರೆ. ಮದುವೆ ಮಾಡಿಕೊಟ್ಟಮೇಲೆ ಮಗಳ ಮನೆಯ ಹಂಗಿಗೆ ಒಳಗಾಗೋದು ಬೇಡ ಎಂಬುದು ಅವರ ಸಿದ್ಧಾಂತ. ಹಾಗಾದರೆ ಮದುವೆಯಾದಳೆಂದರೆ ಮಗಳು ಪರಕೀಯಳಾಗಿಬಿಡುವಳೇ ?

ಅಪ್ಪ ಬರೆದಿದ್ದಾರೆ, ಈ ಬಾರಿ ಅವರು ಒಂದು ವಾರದ ಮಟ್ಟಿಗೆ ಬರುತ್ತಾರಂತೆ. ಇಷ್ಟು ದೂರ ಬಂದಬೇಲೆ ಬೆಳಿಗ್ಗೆ ಬಂದು ಸಂಜೆ ಹೊರಡುವುದು ಸಾಧ್ಯವಿಲ್ಲ. ಹೋಟೆಲಿನಲ್ಲಿರುವುದು ಚೆನ್ನಾಗಿರುವುದಿಲ್ಲ. ಹಾಗಾಗಿ ಮಗಳ ಜತೆಯಲ್ಲೇ ಇರುತ್ತಾರೆ.

ಸುಜಾತಾಳ ಮುಖ ಅರಳಿತು.

"ನೋಡಿ ನೀವು ಆ ದಿವಸ ಟೂರ್–ಗೀರ್ ಅಂತ ಎಲ್ಲಿಗೂ ಹೋಗಬೇಡಿ. ಮತ್ತೆ, ದಾಸ್ ಬಾಬು ಹೇಳ್ತಾ ಇದ್ರು, ಇಲ್ಲೆಲ್ಲೊ ಹಿಲ್ಸಾ ಮೀನು ಸಿಗುತ್ತದಂತೆ. ಅವರನ್ನ ಕೇಳಿ ಒಂದು ದಿವಸ ಮುಂಚಿತವಾಗಿ ತಂದಿಡಿ. ನಂದ ಸಾಹೂರಿಗೆ ಹೇಳಿ ಅವರ ಊರಿಂದ ಒಳ್ಳೆಯ ತುಪ್ಪ ತರಿಸೋ ಏರ್ಪಾಡು ಮಾಡಲಿಕ್ಕಾಗಲಿಕ್ಕಿಲ್ಲವಾ ?" ಬಹುಶಃ ಸುಜಾತಾ ಈಗಲೇ ಸರ್ವ ಸಿದ್ಧತೆಯಲ್ಲಿ ತೊಡಗಿಕೊಂಡಂತ್ತಿತ್ತು.

"ಸಾಕು, ಸಾಕು, ನಾನೆಲ್ಲ ಕೇಳಿಸಿಕೊಂಡೆ."

"ಆದರೆ ಈ ಮನೆ ! ಅಪ್ಪ– ಅಮ್ಮ ಈ ಮನೆ ನೋಡಿ ಏನ್ ಹೇಳ್ತಾರೇನೋ ?"

"ಏನ್ ಹೇಳ್ತಾರೆ ? ಯೋಚನೆ ಮಾಡಬಹುದು, ನಮ್ಮ ಈ ಅಳಿಯ ಅವರ ಪ್ರೀತಿಯ ಕಿರಿಯ ಮಗಳಿಗೆ ಎಂಥ ಕಷ್ಟ ಕೊಡ್ತಾ ಇದ್ದಾನೆ. ಎಂಥ ಪಾಳುಬಿದ್ದ ಮನೆಯಲ್ಲಿಟ್ಟು ನರಕಯಾತನೆ ಕೊಡ್ತಾ ಇದ್ದಾನೆ." ಅನುಪಮ ಕೈಕಾಲು ತೊಳೆಯಲು ಹೋಗಿಬಿಟ್ಟ. 'ತಥ್ !' ಸೀರಿಯಸ್ ವಿಷಯದ ಕುರಿತು ಮಾತಾಡುವಾಗ ಹಾಸ್ಯದಲ್ಲಿ ತೇಲಿಸಿಬಿಡುವುದು ಸುಜಾತಾಳಿಗೆ ಎಂದೂ ಹಿಡಿಸುವುದಿಲ್ಲ.

"ಅಲ್ರಿ ಬಾಯರೆ, ನೀವ್ಯಾಕೆ ಚಿಂತಿ ಮಾಡ್ತೀರಿ. ನಾ ಎಲ್ಲಾ ಸರಿ ಮಾಡ್ತೀನಿ ತಗೋರಿ. ನಿಮ್ಮ ಅವ್ವಾರು–ಅಪ್ಪಾರು ಬರೋ ಒಂದು ದಿವ್ಸ ಮುಂಚೆ ಮನಿ ಪೂರ್ತಿ ತೊಳೆದು–ಬಳದು ಒರೆಸ್ತಿನಿ ಬಿಡ್ರಿ, ಹ್ಯಾಂಗ್ ಲಕಾ–ಲಕಾ ಮಾಡ್ತಿನ್ ನೋಡ್ರಿ, ಮಾರಿ ಕಾಣಬೇಕ ಅದರಾಗ, ಹಂಗ ಮಾಡ್ತಿನಿ ಹೇಳ್ರಿ. ಮುಂಜಾನಿಂದ ಸಂಜಿ ಮಟ ನಾ ಇಲ್ಲೇ ಇರ್‍ತೇನ್ರಿ. ನಿಮಗ ಏನ್ ಆಗಬೇಕ, ಹ್ಯಾಂಗ್ ಆಗಬೇಕ, ನನ್ನ ಹತ್ರ ಹೇಳ್ರಿ" ತೊಳೆದ ಬಟ್ಟೆಗಳನ್ನೆಲ್ಲ ಹಿಂಡಿ ಹಗ್ಗದ ಮೇಲೆ ಹರಡುತ್ತ ಫಕೀರನ ಅಮ್ಮ ಹೇಳಿದಳು.

* * *

ಸುಜಾತಾ ಸಿಟ್ಟಿನಿಂದ ಹಲ್ಲು ಮಸೆಯುತ್ತಿದ್ದಳು. ಎಷ್ಟೇ ಆದರೂ... ಏನೇ ಆದರೂ ಅಲ್ಪರು ತಮ್ಮ ಬುದ್ಧಿ ತೋರಿಸಿಯೇ ತೋರಿಸುತ್ತಾರೆ. ಇವರನ್ನು ನಂಬುವದೆಂದರೆ... ಆ ದಿವಸ ದೊಡ್ಡ ದೊಡ್ಡ ಮಾತಾಡಿದಳು. ಅಪ್ಪ–ಅಮ್ಮ ಬರೋದಕ್ಕೆ ಎರಡು ದಿವಸ ಮುಂಚಿತವಾಗಿ ಕೈಕೊಟ್ಟಳು.

ಛೆ... ಇನ್ನೇನೂ ಅಲ್ಲ... ಹದಿನಾರಾಣೆ ತಪ್ಪು ನನ್ನದೆ. ಅಪ್ಪ ಅಮ್ಮ ಬರೋ ವಿಚಾರ ಮೊದಲೇ ತಿಳಿಸಬಾರದಿತ್ತು. ಕೆಲಸ ಹೆಚ್ಚಾಗ್ತೊ ಭಯದಿಂದ ಬರೋದನ್ನೇ ನಿಲ್ಲಿಸಿಬಿಟ್ಟಳು. ಅದೂ ಒಪ್ಪತ್ತೊ, ಒಂದು ದಿನಾನೋ ಅಲ್ಲ, ಪೂರ್ತಿ ಹದಿನೇಳು ದಿನ ! ನಂಬೋದಾದ್ರೂ ಈಗಿನ ಕಾಲದಲ್ಲಿ ಯಾರನ್ನ ನಂಬೋದು ? ಆದರೂ ಫಕೀರನ ಅಮ್ಮ ಹೀಗೆ ಮಾಡಬಹುದು ಅಂತ ಯೋಚಿಸಿಯೆ ಇರಲಿಲ್ಲ. ಬೆಣ್ಣೆಯಂಥ ಮಾತಾಡಿ ನೂರು ರೂಪಾಯಿ ಅಡ್ವಾನ್ಸ್ ಬೇರೆ ಎತ್ತಿಕೊಂಡು ಹೋದಳು... ಅವಳ ಮನೆ ಎಡ್ರೆಸ್ ಇದ್ದಿದ್ದರೆ ತುರುಬು ಹಿಡಿದು ಎಳೆದು ತರಬಹುದಿತ್ತು.

ಅಪರೂಪಕ್ಕೆ ಅಪ್ಪ–ಅಮ್ಮ ಬಂದಿದ್ದಾರೆ. ನನ್ನ ಕಷ್ಟ ನನಗೆ. ನೆರೆಮನೆ ಕೆಲಸದವಳು ಹೆಚ್ಚು ಹಣಕ್ಕಾದರೂ ಕೆಲಸ ಮಾಡೋದಕ್ಕೆ ಒಪ್ಪಿಕೊಂಡದ್ದೆ ದೊಡ್ಡ ಪುಣ್ಯ. ಅವಳ ಕೆಲಸ ಭಗವಂತನಿಗೆ ಪ್ರಿಯವಾದದ್ದು. ಪೊರಕೆ ಹಿಡಿದು ನಾಲ್ಕು ಕಡೆ ಎಳೆದಳು, ಗುಡಿಸೋ ಕೆಲಸ ಮುಗಿಯಿತು. ಮುಸುರೆ ಪಾತ್ರೆ ತೊಳೆದು ಒಂದು ಕಡೆ ಇಟ್ಟಳು, ತಿಕ್ಕೋ ಕೆಲಸ ಮುಗಿಯಿತು. ನೀರಲ್ಲೆ ಕುಸುಕಿ ಹಿಂಡಿದಳು, ಬಟ್ಟೆ ಒಗೆಯೋ ಕೆಲಸ ಮುಗಿಯಿತು. ಸುಜಾತಾಳಿಗೆ ಫಕೀರನ ಅಮ್ಮನ ಮೇಲೆ ಎಲ್ಲಿಲ್ಲದ ಸಿಟ್ಟು ಬಂತು.

ಅನುಪಮ ಸಾರಿ ಸಾರಿ ಹೇಳಿದ– "ಹಾಗಲ್ಲ... ನೀನು ಯಾಕೆ ಅರ್ಥಮಾಡಿ ಕೊಳ್ಳೋದಿಲ್ಲ, ಅವಳಿಗೆ ಏನಾದರೊಂದು ತೊಂದರೆ ಆಗಿದ್ದಿರಬಹುದು. ಎಂದಾದರೂ ಹೇಳದೆ ಕೇಳದೆ ರಜೆ ಮಾಡಿದ್ದಾಳಾ ? ಶೀತ–ಜ್ವರ ಏನೇ ಇದ್ದರೂ ಕೂರುತ್ತ - ಕುಂಟುತ್ತ ಕೆಲಸ ಮಾಡಿ ಹೋಗಿದ್ದಾಳೆ."

"ಸಾಕು ಬಿಡಿ," ಅವಳ ಪರ ವಹಿಸಿ ಮಾತಾಡಿದ್ದಕ್ಕೂ ಸುಜಾತಾಳಿಗೆ ಎಲ್ಲಿಲ್ಲದ ಕೋಪ. "ನೀವು ಅವಳ ಬಗ್ಗೆ ಇನ್ನೇನೂ ವಕಾಲತು ಮಾಡಬೇಡಿ. ಇಷ್ಟು ದಿನ ಕೆಲಸಕ್ಕೆ ಬರದೇ ಇರುವಂಥದ್ದೇನು ಆಗಿರ್ತದೆ ? ನನಗೆ ಅಂಥವರ ಜಾತಕ ಚೆನ್ನಾಗಿ ಗೊತ್ತಿದೆ. ಆ ದಿವಸ ಗೋಗರೆದು ನೂರು ರೂಪಾಯಿ ಗಿಟ್ಟಿಸಿಕೊಂಡಳು. ತಮ್ಮೂರಿಗೆ ಹೋಗಿ ಕುಳಿತಿರಬೇಕು. ವಿಜಯದಶಮಿಯ ಉತ್ಸವ ಅಲ್ವಾ ? ನೋಡ್ತಾ ಇರಿ. ದುಡ್ಡು ಖರ್ಚಾಗ್ತಾ ಇದ್ದ ಹಾಗೆ ಬಂದು ಮುಖ ತೋರಿಸ್ತಾಳೆ."

ನಿಜಕ್ಕೂ ಹುಣ್ಣಿಮೆಯ ಮಾರನೆಯ ದಿನ ಫಕೀರನ ಅಮ್ಮ ಹಾಜರಾದಳು. ಬಾಗಿಲು ತೆರೆದ ಸುಜಾತಾ ಒಮ್ಮೆಲೆ ಹೌಹಾರಿದಳು. ಅರೆ, ಇವಳು ಮೊದಲಿದ್ದ ಫಕೀರನ ಅಮ್ಮ ಅಲ್ಲವೇ ಅಲ್ಲ. ಧೂಳಿ ಧೂಸರ ಹರಕು ಸೀರೆಯಲ್ಲಿದ್ದ ಅವಳ ಶರೀರದಲ್ಲಿ ಸಾವಿರ ಸುಕ್ಕುಗಳು ಒಮ್ಮೆಲೆ ಎದ್ದು ಬಂದಂತಿದ್ದವು. ಗುಳಿಬಿದ್ದ ಕಣ್ಣುಗಳಲ್ಲಿ ಶೂನ್ಯ ಆವರಿಸಿದಂತ್ತಿತ್ತು. ಎಣ್ಣೆ ಕಾಣದೆ ಕಂಗೆಟ್ಟ ತಲೆ ಕೂದಲು. ಒಟ್ಟಾರೆಯಾಗಿ ಸುತ್ತಿಕೊಂಡ ತುರುಬಲ್ಲೂ ಬಂಧಕ್ಕಿಂತ ಮುಕ್ತವಾಗಿ ಹಾರಾಡುವ ಕೂದಲೇ ಜಾಸ್ತಿ. ಏನಪ್ಪ ಇದು, ನಿಜಕ್ಕೂ ಕಾಯಿಲೆ ಬಿದ್ದಿದ್ದಾಳಾ ?

ಹಾಳಾಗಿ ಹೋಗಲಿ. ಸುಜಾತಾ ಕಾಠಿಣ್ಯವನ್ನು ತನ್ನಲ್ಲಿ ಆಹ್ವಾನಿಸಿಕೊಂಡಳು. ಕಾಯಿಲೆ ಬಿದ್ದಿದ್ದರೆ ಹಿಂದಿನ ಹಾಗೆ ಮಗನ ಹತ್ತಿರ ಹೇಳಿ ಸುದ್ದಿ ಮುಟ್ಟಿಸಬಹುದಿತ್ತಲ್ಲ. ಕುಂಟು ನೆಪಕ್ಕೆ ಮಿತಿಯಿರಬೇಕು. ಇಂಥ ಮುಖ ಹೊತ್ತು ಹೋದರೆ ಅಮ್ಮಾವ್ರ ಕರುಣೆಯಿಂದ ಕರಗಿ ನೀರಾಗಬಹುದು, ಎಂದು ಯೋಚಿಸಿಬೇಕು. ಇವಿಷ್ಟೆಯೊ, ಇನ್ನೆಷ್ಟು ನೆಪಗಳನ್ನು ಕಲೆಹಾಕಿಕೊಂಡು ಬಂದಿದ್ದಾಳೋ, ಏನೊ ? ಎಷ್ಟೇ ಆದರೂ ಅಲ್ಪರ ಬುದ್ಧಿ...

"ಈಗ ಯಾಕೆ ಬಂದಿದ್ದೀಯಾ ?" ಸುಜಾತಾಳ ಧ್ವನಿಯಲ್ಲಿ ಗಡಸುತನ ತುಂಬಿ ಕೊಂಡಿತ್ತು. "ಮಾನ ಮರ್ಯಾದೆ ಇದೆಯೋ ಇಲ್ಲವೊ ? ನನ್ನ ಅನಿವಾರ್ಯತೆಯನ್ನು ನೋಡಿ, ನೀನು ಎಷ್ಟರವಳು ಅನ್ನೋದನ್ನ ತೋರಿಸಿಬಿಟ್ಟಿಯಲ್ಲವಾ ?... ಇನ್ನು ಮೇಲೆ ಇಲ್ಲಿ ಕೆಲಸ ಮಾಡೋ ಅವಶ್ಯಕತೆಯೇ ಇಲ್ಲ... ಏನ್ ತಿಳಕೊಂಡಿದ್ದಿಯಾ, ನೀನು ಬರದೇ ಇದ್ದರೆ ಕೆಲಸ ಹಾಗೆ ಇದ್ದು ಬಿಡ್ತದೆ ಅಂತಲೋ ?... ನಾನು ಬೇರೆ ವ್ಯವಸ್ಥೆ ಮಾಡಿಕೊಂಡಿದ್ದೇನೆ. ನೀನಿನ್ನು ಹೋಗು..."

ಫಕೀರನ ಅಮ್ಮನ ಕಣ್ಣುಗಳಿಂದ ಕಣ್ಣೀರು ಒತ್ತರಿಸಿ ಬಂದವು. – "ದಾಸಬಾಬೂ

ಮನ್ಯಾಗೂ ಕೆಲಸದಿಂದ ತಗದಾರ್ರಿ ... ಅವ್ವಾರ ನೀವು ಹೀಂಗ..."

"ಇಲ್ಲ, ಇಲ್ಲಿ ಇಟ್ಟುಕೊಂಡು ಎಲ್ಲರೂ ನಿನ್ನ ಪೂಜೆ ಮಾಡ್ತೇವೆ... ಹೀಗೆ ಹೇಳದೆ ಕೇಳದೆ ಕೈಕೊಟ್ಟು ಬಿಟ್ಟರೆ ಯಾರು ನಿನ್ನ ಹತ್ರ ಕೆಲಸ ಮಾಡಿಸಿಕೊಳ್ತಾರೆ!... ನೀ ಹೋಗು ಇಲ್ಲಿಂದ ನನ್ನ ತಲೆ ತಿನ್ನಬೇಡ." ಅವಳಿಗೆ ಇನ್ನೇನನ್ನೂ ಹೇಳುವುದಕ್ಕೆ ಅವಕಾಶ ಕೊಡದೆ ಧಡಾರನೆ ಅವಳೆದುರು ಬಾಗಿಲು ಹಾಕಿ ಸುಜಾತಾ ಮೇಲಕ್ಕೆ ಹೋಗಿಬಿಟ್ಟಳು.

ಸುಜಾತಾ ಕ್ಷಣಕಾಲ ಶಾಂತವಾಗಿ ಸ್ವಲ್ಪ ಯೋಚನೆ ಮಾಡಿದ್ದರೆ ಅವಳು ಅಚ್ಚರಿ ಪಡದೆ ಇರುತ್ತಿರಲಿಲ್ಲ. ಇಷ್ಟೊಂದು ಸ್ವಾಭಿಮಾನ ಇದ್ದವಳು, ಎಲ್ಲವನ್ನೂ ಕಳೆದುಕೊಂಡೂ ತಲೆ ಎತ್ತಿ ಬಾಳಬೇಕೆನ್ನುವವಳು, ಅದೇ ಫಕೀರನ ಅಮ್ಮ ಮೂರು ಕಾಸಿನ ನೌಕರಿಗಾಗಿ ಅವಳೆದುರು ಈ ಪರಿಯಲ್ಲಿ ಅಂಗಲಾಚುವವಳೇ? ... ಆದರೆ ಇವೆಲ್ಲವನ್ನು ಯೋಚಿಸಬಹುದಾದಷ್ಟು ಅವಳ ಮನಸ್ಸು ಸ್ಥಿಮಿತದಲ್ಲಿರಲಿಲ್ಲ.

ದಯೆ ತೋರಿಸುವವಳಂತೆ, ಬಿಟ್ಟಿಯಾಗಿ ಕೆಲಸ ಮಾಡಿಕೊಡುವವಳಂತೆ ಬರುತ್ತಿದ್ದ ನೆರೆಮನೆಯ ಕೆಲಸದವಳೂ ಒಂದು ದಿನ ಬರುವುದನ್ನು ನಿಲ್ಲಿಸಿಬಿಟ್ಟಳು. 'ಕುರುಡರಲ್ಲಿ ಮೆಳ್ಳ ಶ್ರೇಷ್ಠ' ಎಂಬ ಗಾದೆಯಂತೆ ಸುಜಾತಾ ಅವಳನ್ನು ಸಹಿಸಿಕೊಂಡಿದ್ದಳು. ಆದರೆ ಒಂದು ದಿನ ಇಂತಹ ಸ್ಥಿತಿಯೂ ಬರಬಹುದೆಂದು ಸುಜಾತಾ ಎಣಿಸಿರಲೇ ಇಲ್ಲ. ಅಲ್ಲಿ - ಇಲ್ಲಿ ಹುಡುಕಾಡಿದ ಮೇಲೆ ಜಬ್ಬಿಬ್ಬರು ಸಿಕ್ಕಿದರೂ ಒಪ್ಪತ್ತು - ಎರಡು ಹೊತ್ತು ಕೆಲಸ ಮಾಡಿದವರು, ಕೆಲಸ ಜಾಸ್ತಿಯೆಂಬ ನೆಪ ಹೇಳಿ ಹೊರಟುಹೋದರು. ಹೋಗುವಾಗ ಅವರ ಕಂಪ್ಲೇಂಟ್ ಇಷ್ಟೆ, "ಮೇಲೆ ಕೆಳಗೆ ಓಡಾಡಿಕೊಂಡು ಹೇಗೆ ಮಾಡುವುದಪ್ಪ!"

ಆಶ್ಚರ್ಯ! ಹೆಚ್ಚು ಸಂಬಳ ಕೊಡುತ್ತೇನೆಂದರೂ ಇವರ ವೈಯಾರವೆ!

ಎಲ್ಲಾ ಕಡೆಯಿಂದಲೂ ಸೋತು ಸುಣ್ಣವಾಗಿ ಸುಜಾತಾ ಮೂಲೆ ಹಿಡಿದಾಗ ಜಾನಕಿ ಬಂದಳು.

ರವಿವಾರ ಬೆಳಿಗ್ಗೆ - ಬೆಳಿಗ್ಗೆ ಬೋಳಮ್ಮ ಮನೆ ಬಾಗಿಲಿಗೆ ಬಂದಾಗ ಸುಜಾತಾಳಿಗೆ ಏನೊಂದು ಅರ್ಥವಾಗಲಿಲ್ಲ.

"ಅಮ್ಮ ನಾನು ಜಾನಕಿ. ನಿಮ್ಮ ಮನೆಯಲ್ಲಿ ಕೆಲಸ ಇದೆಯಾ, ಕೇಳಲಿಕ್ಕೆ ಫಕೀರನ ಅಮ್ಮ ಹೇಳಿದ್ದಳು."

"ಫಕೀರನ ಅಮ್ಮ !" ಸುಜಾತಾಳಿಗೆ ಆಗಲೂ ತಲೆ ಬುಡ ಒಂದೂ ಗೊತ್ತಾಗಲಿಲ್ಲ.

"ಹೌದು, ಅದೇ, ನಿಮ್ಮ ಮನೆಯಲ್ಲಿ ಕೆಲಸ ಮಾಡುತ್ತಿದ್ದಳಲ್ಲವಾ? ಹೋಗುವಾಗ ಅವಳು ಹೇಳಿಹೋದಳು - ಅಮ್ಮಾವರಿಗೆ ಚಿಕ್ಕ ಮಗುವುಂಟು, ಅವರಿಗೆ ತೊಂದರೆಯಾಗ ಬಹುದು, ನೀನು ಹೋಗಿ ಅವರ ಮನೆಯಲ್ಲಿ ಕೆಲಸ ಇದ್ದರೆ ಕೇಳು ಎಂದಳು. ಆದರೆ ಅಮ್ಮ ನಾನು ತಿರುಪತಿಗೆ ಹೋಗಿದ್ದೆ." ತನ್ನ ಬೋಳಿಸಿಕೊಂಡ ತಲೆಯ ಮೇಲೆ ಕೈ ಯಾಡಿಸುತ್ತಾ ಜಾನಕಿ ಬಾಯಿ ಕಿಸಿಯುತ್ತ ತನ್ನ ಹಳದಿ ವರ್ಣದ ಹಲ್ಲುಗಳನ್ನು ತೋರಿಸಿದಳು.

ಸುಜಾತಳಿಗೆ ಏನು ಹೇಳಬೇಕೆಂಬುದೇ ತೋಚದಾಯಿತು. ನನ್ನ ಕಷ್ಟ ದೂರ ಮಾಡುವುದಕ್ಕೆ ಫಕೀರನ ಅಮ್ಮ ಇವಳನ್ನು ಕಳಿಸಿದ್ದಾಳೆಯೆ?

"ಯಾಕಮ್ಮ ಕೆಲಸಕ್ಕೆ ಸೇರಿಕೊಳ್ಳುವುದಾ ಅಥವಾ ಯಾರಾದರೂ ಕೆಲಸಕ್ಕಿದ್ದಾಳಾ?"

ಜಾನಕಿಯ ನೇರ ಪ್ರಶ್ನೆಗೆ ಸುಜಾತಾ ಹೇಳಿದ್ದಿಷ್ಟೆ, - "ಇಲ್ಲ ಇಲ್ಲ ನೀನು ಒಳಗೆ ಬಾ. ಸದ್ಯ ಇಲ್ಲಿ ಯಾರೂ ಕೆಲಸಕ್ಕಿಲ್ಲ."

ಅಡಿಗೆ ಕೋಣೆಗೆ ಹೋಗಿ ಜಾನಕಿಗೆ ಕೆಲಸ ಹೇಳುವಾಗ ಸುಜಾತಾಳ ಮನಸ್ಸು ಹಿಂಡಿ ಹಿಪ್ಪೆಯಾದಂತಾಯಿತು. ಕೇಳಿಯೇ ಬಿಟ್ಟಳು - "ಫಕೀರನ ಅಮ್ಮ ಈಗ ಎಲ್ಲಿದ್ದಾಳೆ?"

ಪಾತ್ರೆ ತಿಕ್ಕುತ್ತಿರುವಾಗ ಜಾನಕಿ ಪೀಠಿಕೆ ಹಾಕಿದಳು - "ಅಮ್ಮ ನಿಮಗೆ ಗೊತ್ತಿಲ್ಲವಾ? ಅವಳು ಊರಿಗೆ ಹೊರಟುಹೋದಳು. ಇಲ್ಲಿ ಅವಳ ಜೊತೆ ಇಷ್ಟೆಲ್ಲ ಕೆಟ್ಟದ್ದು ಆಗಿರುವಾಗ ಅವಳು ಇಲ್ಲಿ ಹೇಗೆ ಇರತಾಳೆ...? ಫಕೀರನ ಅಪ್ಪನ ಹೆಸರಿನಲ್ಲಿ ಸ್ವಲ್ಪ ಜಮೀನು ಉಂಟಂತೆ. ಅಣ್ಣ ತಮ್ಮಂದಿರೆಲ್ಲ ಅದನ್ನ ಒಳಗೆ ಹಾಕಿಕೊಂಡಿದ್ದಾರಂತೆ. ಅವರ ಕೈ-ಕಾಲು ಹಿಡಿದು ಬೇಡಲಿಕ್ಕೆ ಅಲ್ಲಿಗೆ ಹೋಗಿದ್ದಾರೆ. ಇಲ್ಲಿ ಎರಡು ಹೊತ್ತಿನ ಗಂಜಿಗೂ ಗತಿಯಿಲ್ಲ. ಅಲ್ಲಿ ಏನೂ ಇಲ್ಲದೆ ಇದ್ದರೂ ಮನೆ ಬಾಡಿಗೆ ಕೊಡಲಿಕ್ಕಿಲ್ಲ. ಅಲ್ಲವಾ...?"

"ಗಂಜಿಗೂ ಗತಿಯಿರಲಿಲ್ಲವಾ?" ಸುಜಾತಾ ಯಾವುದೋ ಒಗಟಿನಲ್ಲಿ ಸಿಕ್ಕಿ ಬಿದ್ದಂತಳಾದಳು.

ದೀರ್ಘ ನಿಟ್ಟುಸಿರು ಬಿಟ್ಟು ಜಾನಕಿ ಹೇಳಿದಳು - "ಎಲ್ಲ ದೇವರ ಆಟ ಅಮ್ಮ. ಮಗನೇ ಸತ್ತ ಮೇಲೆ..." "ಏನ್... ಏನ್ ಹೇಳಿದೆ?..." ಅವಳಿಗೆ ಗೊತ್ತಿಲ್ಲದೆ ದನಿ ಏರಿ ಹೋಯಿತು... ಅದಿರಲಿಕ್ಕಿಲ್ಲ. ಬಹುಶಃ ಅವಳೇನಾದರೂ ಬೇರೆ ಕೇಳಿಸಿಕೊಂಡಿರಬಹುದು.

"ಯಾಕಮ್ಮ, ನಿಮಗೇನೂ ಗೊತ್ತಿಲ್ಲವಾ?..." ಪಾತ್ರೆ ತಿಕ್ಕುವುದನ್ನು ಬಿಟ್ಟು ಜಾನಕಿ ಅಲ್ಲೇ ಕುಂಡೆ ಊರಿ ಕುಳಿತಳು... "ಇಪ್ಪತ್ತೆರಡು ವರ್ಷದ ಹುಡುಗ. ಎಂದೂ ಏನೂ ಆಗಿದ್ದೇ ಇಲ್ಲ. ಏನು ಆಯಿತೋ ಏನೋ... ಎರಡು ದಿವಸ ಜರ (ಜ್ವರ) ಬಂತು. ಎಲ್ಲ ಮುಗಿದು ಹೋಯಿತು. ವಿಜಯ ದಶಮಿಯ ದಿವಸವೇ ಇದಾಗಿದ್ದು. ಅಯ್ಯಯ್ಯೋ... ಫಕೀರನ ಅಮ್ಮನ ಬೊಬ್ಬೆ... ಅಬ್ಬಬ್ಬಾ ಪ್ರಾಣಿಗಳೂ ಕಣ್ಣೀರು ಹಾಕಬೇಕು... ಇಷ್ಟೇ ಅಲ್ಲ..."

ಕಣ್ಣುಗಳನ್ನು ಸ್ವಲ್ಪ ಕಿರಿದಾಗಿಸಿ ಧ್ವನಿಯನ್ನೂ ಸ್ವಲ್ಪ ತಗ್ಗಿಸಿ ಹೇಳಿದಳು - "ಮಗ ಸತ್ತ ಮಾರನೇ ದಿನವೆ ಅತ್ತೆ ಹತ್ತಿರ ಜಗಳ ಮಾಡಿ, ಕಾಸು ಒಡವೆಯೆಲ್ಲಾ ದೋಚಿಕೊಂಡು ಸೊಸೆ ಬೇರೊಬ್ಬನ ಸಂಗಡ ಪರಾರಿ, ಆ ಸುಟ್ಟು ಮೋರೆಯವಳು ಹೇಳಿದಳು - ಫಕೀರನಿಗೆ ಏನೋ ದೊಡ್ಡ ಕಾಯಿಲೆ ಇದ್ದಿರಬೇಕು. ಮುಚ್ಚಿಟ್ಟು ನನ್ನ ಜೊತೆ ಮದುವೆ ಮಾಡಿದ್ದಾರೆ... ನೀವೇ ಹೇಳಿ ಅಮ್ಮ, ಎಂಥ ಕಾಲ ಬಂತು. ಕಲಿಕಾಲ, ಕಲಿಕಾಲ!"

ಉಳಿದ ಪಾತ್ರೆಗಳನ್ನು ತಿಕ್ಕಲು ಜಾನಕಿ ಎದ್ದಳು.

ಸುಜಾತಾಳ ಕೈಕಾಲುಗಳಿಗೆ ಲಕ್ವಾ ಹೊಡೆದಂತಾಗಿತ್ತು. ಕಣ್ಮುಂದೆ ಕೇವಲ ಫಕೀರನ ಅಮ್ಮನ ದೈನ್ಯತೆ ತುಂಬಿದ ಮುಖ. ಅದರಲ್ಲಿ ಕಾಣುತ್ತಿದ್ದುದು ಶೂನ್ಯ ಆವರಿಸಿಕೊಂಡ ಕಣ್ಣುಗಳು ಮಾತ್ರ... ಅವಳಿಗೆ ಮಾತನಾಡುವುದಕ್ಕೂ ಅವಕಾಶ ಕೊಡದೆ ಎಷ್ಟೊಂದು ಕೆಟ್ಟದಾಗಿ ಬೈದು ದಬ್ಬಿಬಿಟ್ಟಿದ್ದಳು! ಆಗ ತಾನೆ ಮಗನನ್ನು ಕಳೆದುಕೊಂಡು, ಹಸಿವನ್ನು ತಾಳಲಾರದೆ ಅವಳಲ್ಲಿಗೆ ಬಂದಿದ್ದಳು. ಬೇರೇನೂ ಅಲ್ಲದಿದ್ದರೂ ಅನುಕಂಪ ತುಂಬಿದ ಎರಡು ಮಾತುಗಳನ್ನಾದರೂ ಅವಳು ಆಡಬಹುದಿತ್ತು. ಹೆಚ್ಚೆಂದರೆ ಬೆನ್ನು ತಟ್ಟಿ ಸಮಾಧಾನ ಮಾಡಬಹುದಿತ್ತು ... ಆದರೆ ಏನನ್ನೂ ಕೇಳದೆ, ಏನೂ ತಿಳಿಯದೆ, ಒರಟಾಗಿ ಮಾತನಾಡಿ ಅವಳೆದುರು ದೊಪ್ಪೆಂದು ಬಾಗಿಲು ಹಾಕಿದ್ದಳು.

ಛೆ! ಅಡಿಗೆ ಕೋಣೆಯ ಬಾಗಿಲಿನಿಂದ ತೂರಾಡುತ್ತ ಸುಜಾತಾ ಹೊರಬಂದಳು. ಅವಳ ತಲೆಯಲ್ಲಿ ಎಲ್ಲವೂ ಗೋಜಲು ಗೋಜಲು. ಆತ್ಮಗ್ಲಾನಿ, ಅಪರಾಧ ಪ್ರಜ್ಞೆಯನ್ನು ಹಿಂದಕ್ಕೆ ತಳ್ಳಿದರೂ ಅವಳ ಅಸ್ತಿತ್ವವೇ ಒಂದು ಬಗೆಯ ಗುಮಾನಿಯಿಂದ ತುಂಬಿ ಕೊಂಡಂತೆ ಅವಳಿಗೆ ಭಾಸವಾಯಿತು... ಫಕೀರನ ಅಮ್ಮನೊಂದಿಗಿನ ಅವಳ ಸಂಬಂಧ ಕೆಲಸದವಳ ಹಾಗೂ ಯಜಮಾನಿಯ ಸಂಬಂಧವಷ್ಟೇ ಆಗಿತ್ತೇ? ... ಹಾಗಿದ್ದರೆ?

ಹಾಗೊಂದು ವೇಳೆ ಅವಳು ಸಿಟ್ಟಿನಿಂದ ಎರಡು ಮಾತುಗಳನ್ನಾಡಿದರೆ, ಇದರರ್ಥ ಫಕೀರನ ಅಮ್ಮ ಹೊರಟುಬಿಡುವುದೆ? ತನ್ನಲ್ಲಿರುವ ಎಲ್ಲ ವಿಷಯವನ್ನು ಒಳಗೆ ಬಚ್ಚಿಟ್ಟು ಕೊಳ್ಳುವುದೆ! ಹಾಗಿದ್ದರೆ, ಫಕೀರನ ಅಮ್ಮನ ಮೇಲೆ ಅವಳಿಗೆ ಯಾವ ಅಧಿಕಾರವೂ ಇದ್ದಿರಲಿಲ್ಲವೆ?

ಸುಜಾತಾಳ ಮನಸ್ಸಿನಲ್ಲಿ ಆತ್ಮಾಭಿಮಾನದ ಉಬ್ಬರ ಮತ್ತೆ ಮತ್ತೆ ಮೇಲಕ್ಕೇಳುತ್ತಿದ್ದವು. ದೆವ್ವದಂತೆ ಅವಳು ಹೊರಬಾಗಿಲನ್ನು ನೋಡುತ್ತಿದ್ದಾಳೆ.

ಇಲ್ಲೇ... ಇದೇ ಸ್ಥಳದಲ್ಲಿ ಅವಳು ಫಕೀರನ ಅಮ್ಮನಿಗೆ ಬಾಯಿಗೆ ಬಂದಂತೆ ಹೇಳಿ ಹೊರಗಟ್ಟಿದ್ದಳು. ತನಗರಿವಿಲ್ಲದೆ ಅವಳ ಕೈಗಳು ಬಾಗಿಲಿನ ಕಡೆಗೆ ಸಾಗಿದವು.

ಈ ಬಾಗಿಲನ್ನು ತೆರೆದಾಕ್ಷಣ, ಇಲ್ಲೆ, ಬಾಗಿಲಿನಾಚೆ ಬದಿಯಲ್ಲಿ ಫಕೀರನ ಅಮ್ಮ ನಿಂತಿದ್ದು ಕಾಣಬಹುದು. ತೆರೆದ ಬಾಗಿಲಿನಿಂದ ಒಳಬಂದು ಅವಳು ಹೇಳಬಹುದು - "ಅವ್ವಾ, ನನ್ನ ಮುದ್ದಿನ ರಾಜಕುಮಾರಿ ಹ್ಯಾಂಗಿದ್ದಾಳರ್ರಿ? ಭಾಳ ದಿವಸಾತು ಆಕೀನ್ ನೋಡ್ದ. ಕಣ್ಣ್ ಹರ್ಕೊಳ್ಳೋ ಹಾಂಗ ಆಗ್ಯೆತಿ."

ಫಕೀರನ ಅಮ್ಮ ನಿಜವಾಗಿಯೂ ಬಂದಿರಬಹುದೆ? ಎಲ್ಲವನ್ನು ಸೇರಿಸಿಕೊಂಡು ಪ್ರಾಯಶ್ಚಿತ್ತ ಮಾಡುವವರಂತೆ ಸುಜಾತಾ ಹೆಬ್ಬಾಗಿಲಿಗೆ ಕೈಯಿಟ್ಟು ನಿಶ್ಯಬ್ದವಾಗಿ ಅಳತೊಡಗಿದಳು.

---

ಒರಿಯಾ ಮೂಲ: **ಸುಸ್ಮಿತಾ ಬಾಗಚಿ**
ಕನ್ನಡಕ್ಕೆ: **ಡಾ|| ಮಾಧವಿ ಎಸ್. ಭಂಡಾರಿ**
ಹಿಂದಿ ಅಧ್ಯಾಪಕರು, ಪೂರ್ಣಪ್ರಜ್ಞ ಕಾಲೇಜು, ಉಡುಪಿ - ೫೭೬ ೧೦೧

# ಜಾಗತೀಕರಣಕ್ಕೆ ಪರ್ಯಾಯ ಭಾರತ ನೀಡಬಲ್ಲದು

ಬಿ. ಆರ್. ಶಶಿಧರ

**ಬದಲಾದ ಸ್ಥಿತಿಯಲ್ಲಿ ವಿಜ್ಞಾನ ತಂತ್ರಜ್ಞಾನಗಳ ಬೆಳವಣಿಗೆಗೆ ಪ್ರೋತ್ಸಾಹವೂ ಅಗತ್ಯ. ಇವೆಲ್ಲಾ ಗಾಂಧೀಜಿಯವರ ಚಿಂತನೆ, ಆಶಯಗಳಿಗೆ ಅನುಗುಣವಾಗಿಯೇ ಇವೆ. ಆದರೆ ಇದೆಲ್ಲಾ ನಮ್ಮ ದೇಶದ ಸಂಕೀರ್ಣ ಸಂಸ್ಕೃತಿಯ ಹಿನ್ನೆಲೆಗೆ ಪೂರಕವಾಗಿರಬೇಕು. ನಮ್ಮ ಸಂಸ್ಕೃತಿಯನ್ನು ನಾಶಮಾಡುವ ಆಮದು ಚಿಂತನೆಗಳು ನಮಗೆ ಬೇಡ. ಭಾರತದಂತಹ ಪ್ರಾಚೀನ ನಾಗರಿಕತೆಯ ದೇಶಕ್ಕೆ ಪರಕೀಯ ಅಭಿವೃದ್ಧಿ ಮಾರ್ಗಸೂಚಿಗಳು ಬೇಡವೆನಿಸುತ್ತವೆ. ಗಾಂಧೀಜಿಯವರ ದೇಶೀ ಚಿಂತನೆಗಳ ಮೂಲಕ ಬಂಡವಾಳಶಾಹಿ ಹಾಗೂ ಸಾಮ್ರಾಜ್ಯಶಾಹಿ ವ್ಯವಸ್ಥೆಯ ಹೊಸ ಅವತಾರವಾದ ಜಾಗತೀಕರಣಕ್ಕೆ ಪರ್ಯಾಯವನ್ನು ಒದಗಿಸಿಕೊಡಬಹುದಾಗಿದೆ.**

ಐತಿಹಾಸಿಕ ದಾಖಲೆಗಳ ಆಧಾರದ ಮೇಲೆ ಹೇಳುವುದಾದರೆ ೧೮ನೇ ಶತಮಾನದವರೆಗೆ ಭಾರತ ಜಗತ್ತಿನ ಇತರ ದೇಶಗಳಿಗೆ ಹೋಲಿಸಿದರೆ ಒಂದು ಸಮೃದ್ಧ ದೇಶವಾಗಿತ್ತು. ಫ್ರಾನ್ಸಿನ ನೆಪೋಲಿಯನ್ ಬೋನಾಪಾರ್ಟೆ ಭಾರತದ ಅಪರಿಮಿತ ಸಂಪತ್ತೇ ಇಂಗ್ಲೆಂಡಿನ ಪ್ರಾಬಲ್ಯಕ್ಕೆ ಕಾರಣ ಎಂದು ಸರಿಯಾಗಿಯೇ ಗುರುತಿಸಿದ್ದ. ಅಲ್ಲದೆ ಸ್ವಾತಂತ್ರ್ಯ ಸಂಗ್ರಾಮದ ಕಾಲದಲ್ಲಿ ಮಂದಗಾಮಿ ಚಳವಳಿಯ ಮುಖ್ಯ ನಾಯಕರಾಗಿದ್ದ ದಾದಾಭಾಯಿ ನವರೋಜಿಯವರು ತಮ್ಮ 'ಬಡತನ ಮತ್ತು ಭಾರತದಲ್ಲಿ ಬ್ರಿಟಿಷ್ ಆಳ್ವಿಕೆ' ಎಂಬ ಕೃತಿಯಲ್ಲಿ ಬ್ರಿಟಿಷರ ಸ್ವಾರ್ಥ ವ್ಯಾಪಾರಿ ನೀತಿಗಳಿಂದ ಭಾರತದ ಸಂಪತ್ತು ಇಂಗ್ಲೆಂಡಿಗೆ ಕೊಚ್ಚಿಹೋಯಿತು ಎಂದಿದ್ದರು. ಇವೆಲ್ಲಾ ಈ ಮೇಲಿನ ಮಾತನ್ನು ಸಮರ್ಥಿಸುತ್ತವೆ. ಹಾಗೆ ನೋಡಿದರೆ ನೈಸರ್ಗಿಕವಾಗಿ ಇಂದಿಗೂ ಭಾರತ ಒಂದು ಮಹಾನ್ ಸಂಪದ್ಭರಿತ ರಾಷ್ಟ್ರವೇ ಸರಿ. ಆದರೆ ಹೆಚ್ಚು ಕಡಿಮೆ ಇದೇ ಅವಧಿಯಲ್ಲಿ ಇಂಗ್ಲೆಂಡಿನಲ್ಲಿ ಆರಂಭವಾದ ಕೈಗಾರಿಕಾ ಕ್ರಾಂತಿಯು ಪ್ರಾರಂಭದಲ್ಲಿ ಯೂರೋಪಿನಲ್ಲಿ ಹರಡಿ ಕ್ರಮೇಣ ಜಗತ್ತಿನಾದ್ಯಂತ ವ್ಯಾಪಿಸಿತು. ಬೃಹತ್ ಪ್ರಮಾಣದ ಬಂಡವಾಳ ಹೂಡಿಕೆ ಮತ್ತು ಲಾಭ ಗಳಿಕೆಯೇ ಮುಖ್ಯ ಗುರಿಯಾಗಿ ಹೊಂದಿದ್ದ ಕೈಗಾರಿಕಾ ಕ್ಷೇತ್ರವು ಬಂಡವಾಳಶಾಹಿ ವ್ಯವಸ್ಥೆಯನ್ನು ಹುಟ್ಟುಹಾಕಿತು. ಈ ಬಂಡವಾಳಶಾಹಿ ವ್ಯವಸ್ಥೆ ಜಗತ್ತಿನಲ್ಲಿ ಎಷ್ಟು ಬಲಿಷ್ಠವಾಯಿತೆಂದರೆ ಮುಂದೆ ಅದು ನಾನಾ ದೇಶಗಳ ಸರ್ಕಾರಗಳನ್ನು ನಿಯಂತ್ರಿಸುತ್ತಾ ಕ್ರಮೇಣ ಈ ಸಿದ್ಧಾಂತದ ಆಧಾರದ ಮೇಲೆಯೇ ಹಲವು ರಾಷ್ಟ್ರಗಳು ರೂಪುಗೊಂಡವು. ಸರ್ಕಾರಗಳ ಮೇಲೆ ಬಂಡವಾಳಶಾಹಿಗಳ ಹಿಡಿತ ಹೆಚ್ಚಾದಂತೆ ಅದು ಸಾಮ್ರಾಜ್ಯಶಾಹಿ ನೀತಿಯ ಬೆಳವಣಿಗೆಗೆ ಕಾರಣವಾಯಿತು. ಅಂದರೆ ಕೈಗಾರಿಕಾ ಉತ್ಪನ್ನಗಳನ್ನು ಬೃಹತ್ ಪ್ರಮಾಣದಲ್ಲಿ ಉತ್ಪಾದಿಸುತ್ತಾ ಹೋದ ಕಾರ್ಖಾನೆ ಮಾಲೀಕರು ಮಾರುಕಟ್ಟೆಗಾಗಿ ಪರದಾಡುವಂತಾಯಿತು. ಅದರ ಫಲವೇ ಯೂರೋಪಿನ ಹಲವು ದೇಶಗಳು ಭೌಗೋಳಿಕ ಅನ್ವೇಷಣೆಗಳಲ್ಲಿ ತೊಡಗಿಸಿಕೊಂಡದ್ದು. ಪ್ರಾರಂಭದಲ್ಲಿ ಕೇವಲ ಕುತೂಹಲಕ್ಕಾಗಿ, ಕೆಲವೊಮ್ಮೆ ತಮ್ಮ ದೇಶಗಳಲ್ಲಿ ಅಧಿಕ ಬೇಡಿಕೆ ಇರುವ ವಸ್ತುಗಳಿಗಾಗಿ ಈ ದೇಶಗಳ ವ್ಯಾಪಾರಿ ಶಕ್ತಿಗಳು ಮುಖ್ಯವಾಗಿ ಅಮೆರಿಕಾ, ಆಫ್ರಿಕಾ, ಏಷ್ಯಾ ಮುಂತಾದ ದೇಶಗಳ ಕಡೆ ಸಾಗಿ ಕ್ರಮೇಣ ಅವುಗಳನ್ನು ತಮ್ಮ ವಸಾಹತುಗಳನ್ನಾಗಿ ಪರಿವರ್ತಿಸಿಕೊಂಡವು. ಇಂಗ್ಲಿಷರು, ಫ್ರೆಂಚರು, ಪೋರ್ಚುಗೀಸರು, ಡಚ್ಚರು ಮುಂತಾದ ಯೂರೋಪಿನ ಜನಾಂಗಗಳು ಪೈಪೋಟಿಯ ಮೇಲೆ ಜಗತ್ತಿನ ಇತರ ದೇಶಗಳ ಮೇಲೆ ಹತೋಟಿ ಸಾಧಿಸಲು ಪ್ರಯತ್ನಿಸಿದರು. ಇದರಲ್ಲಿ ಹೆಚ್ಚು ಯಶಸ್ಸು ಗಳಿಸಿದ ಇಂಗ್ಲೆಂಡ್ ೧೯ನೇ ಶತಮಾನದ ಕೊನೆಯ ವೇಳೆಗೆ ಇಡೀ ಜಗತ್ತಿನ ಮೇಲೆ ಪ್ರತ್ಯಕ್ಷ ಹಾಗೂ ಪರೋಕ್ಷ ಹಿಡಿತ ಸಾಧಿಸಿ 'ಸೂರ್ಯ ಮುಳುಗದ ಸಾಮ್ರಾಜ್ಯ' ಎಂದು ಖ್ಯಾತಿ ಗಳಿಸಿತು. ಜಗತ್ತಿನ ಹಲವು ದೇಶಗಳ ಸಂಪತ್ತು ಪ್ರವಾಹದಂತೆ ಇಂಗ್ಲೆಂಡಿನತ್ತ ಹರಿಯಿತು. ಬ್ರಿಟಿಷರ ಕುತಂತ್ರ ನೀತಿಗಳು, ನೌಕಾಪ್ರಾಬಲ್ಯ ಹಾಗೂ ವ್ಯಾಪಾರಿ ಬುದ್ಧಿ ಅವರ ಈ ಯಶಸ್ಸಿಗೆ ಕಾರಣಗಳಾಗಿದ್ದವು.

ಎರಡನೇ ಜಾಗತಿಕ ಮಹಾಯುದ್ಧದ ವೇಳೆಗೆ ಜಗತ್ತಿನಲ್ಲಿ ಬಂಡವಾಳಶಾಹಿ ವ್ಯವಸ್ಥೆಗೆ ವಿರುದ್ಧವಾಗಿ ಒಂದು ಸಿದ್ಧಾಂತ ಹುಟ್ಟಿಕೊಂಡು ಜನಪ್ರಿಯವಾಗಿತ್ತು. ಅದೇ ಸಮಾಜವಾದಿ ಸಿದ್ಧಾಂತ. ಸಮತಾವಾದ, ಸಮಾಜವಾದ, ಕಮ್ಯುನಿಸ್ಟ್ ಸಿದ್ಧಾಂತ ಎಂದೆಲ್ಲಾ ಹೆಸರು ಪಡೆದಿದ್ದ ಇದು ಕಾರ್ಲ್ ಮಾರ್ಕ್ಸ್ ಹಾಗೂ ಅವನಿಗಿಂತ ಹಿಂದಿನ ಸಮಾಜವಾದಿಗಳ ಚಿಂತನೆಯ ಫಲವಾಗಿ ಮೂಡಿ ಬಂದಿದ್ದರೂ ಈ ಚಿಂತನೆಗೆ ಮೂಲಕಾರಣ ಕೈಗಾರಿಕಾ ಕ್ರಾಂತಿಯ ನಂತರ ಬಂಡವಾಳಗಾರರ ಶೋಷಣೆ ಹೆಚ್ಚುತ್ತಾ ಸಾಗಿದ್ದು. ಕಡಿಮೆ ಕೂಲಿ, ಕೆಲಸದಲ್ಲಿ ಅಭದ್ರತೆ, ಯಂತ್ರಗಳ ಅಳವಡಿಕೆಯಿಂದ ಕೆಲಸ ಕಳೆದುಕೊಂಡು ಬೀದಿಪಾಲಾಗುತ್ತಿದ್ದ ಅಸಂಖ್ಯಾತ ರೈತ ಹಾಗೂ ಕೂಲಿ ಕಾರ್ಮಿಕರ ನಿರುದ್ಯೋಗಿ ಪಡೆಗಳ ಆಕ್ರೋಶ ಕಮ್ಯುನಿಸ್ಟ್ ತತ್ವಗಳ ರೂಪದಲ್ಲಿ ಜಾಗತಿಕ ರಂಗದಲ್ಲಿ ಕಾಣಿಸಿಕೊಂಡಿತು. ಬಡವರ, ಶೋಷಿತರ ಪರವಾಗಿ ಹಲವು ನೀತಿಗಳ ಜಾರಿಗಾಗಿ ಆಯಾ ದೇಶಗಳ ಸರ್ಕಾರಗಳನ್ನು ಒತ್ತಾಯಿಸಿತು. ಅಸಮಾನತೆಯನ್ನು ತೊಡೆದು

ಹಾಕುವುದು, ವರ್ಗ ತಾರತಮ್ಯವನ್ನು ನಿವಾರಿಸುವುದು, ಉಳ್ಳವರ ದುಷ್ಪತನಕ್ಕೆ ಕಡಿವಾಣ ಹಾಕುವುದು ಹಾಗೂ ಸಾಮಾಜಿಕ ನ್ಯಾಯವನ್ನು ಎತ್ತಿಹಿಡಿಯುವುದೇ ಸರ್ಕಾರಗಳ ಮುಖ್ಯ ಗುರಿಯಾಗಬೇಕೆಂಬ ಬೇಡಿಕೆ, ಒಂದು ದೇಶದ ಎಲ್ಲಾ ಸಂಪತ್ತಿನ ಮೇಲೆ ಅಲ್ಲಿ ಬಾಳುತ್ತಿರುವ ಸರ್ವರಿಗೂ ಹಕ್ಕಿರಬೇಕು, ಶ್ರೀಮಂತರ ಹೆಚ್ಚುವರಿ ಸಂಪತ್ತನ್ನು ತೆರಿಗೆ, ಭೂಸುಧಾರಣೆ, ಸೂಕ್ತ ಕಾನೂನು ತಿದ್ದುಪಡಿ ಇತ್ಯಾದಿಗಳ ಮೂಲಕ ಸರ್ಕಾರವೇ ವಶಪಡಿಸಿಕೊಂಡು ಅವುಗಳನ್ನು ದುರ್ಬಲ ಬಡವರ್ಗಗಳಿಗೆ ಹಂಚಬೇಕು, ಜಗತ್ತಿನಲ್ಲಿ ರೈತರು, ಕಾರ್ಮಿಕರು ಶತಮಾನಗಳಿಂದ ಶೋಷಣೆಗೆ ಒಳಗಾದವರು, ಕಾರ್ಖಾನೆ ಮಾಲೀಕರಿಂದ ಕಾರ್ಮಿಕರು ಶೋಷಣೆಗಳಿಗೆ ಒಳಗಾದರೆ, ದೊಡ್ಡ ಭೂಮಾಲಿಕರಿಂದ, ಜಮೀನ್ದಾರರಿಂದ ಸಣ್ಣ ರೈತರು ಹಾಗೂ ರೈತ ಕಾರ್ಮಿಕರು ನಿರಂತರವಾಗಿ ಶೋಷಣೆಗೆ ಒಳಗಾಗುತ್ತಿದ್ದಾರೆ ಎಂದು ಸಮಾಜವಾದಿ ಸಿದ್ಧಾಂತ ಸಾರುತ್ತದೆ. ಹೀಗೆ ಬಡವರ್ಗದವರ ಪರವಾದ ಈ ಸಮಾಜವಾದಿ ಚಿಂತನೆಗಳ ಆಧಾರದ ಮೇಲೆ ಜಗತ್ತಿನ ಹಲವು ದೇಶಗಳಲ್ಲಿ ಸಮಾಜವಾದಿ ಸರ್ಕಾರಗಳು ಅಸ್ತಿತ್ವಕ್ಕೆ ಬಂದವು. ಮುಖ್ಯವಾಗಿ ರಷ್ಯಾದಲ್ಲಿ ೧೯೧೭ರಲ್ಲಿ ರೈತ ಕಾರ್ಮಿಕರ ಸರ್ಕಾರ ಕ್ರಾಂತಿಯ ಮೂಲಕ ಅಸ್ತಿತ್ವಕ್ಕೆ ಬಂದು ದೇಶವನ್ನು ಪ್ರಗತಿಪಥದೆಡೆಗೆ ಸಾಗಿಸಿತು. ರಷ್ಯಾದ ತ್ವರಿತ ಅಭಿವೃದ್ಧಿ ಜಗತ್ತಿನ ಉಳಿದ ಹಲವು ದೇಶಗಳ ಗಮನ ಸೆಳೆದು ಅಲ್ಲೂ ಕಮ್ಯುನಿಸ್ಟ್ ಸರ್ಕಾರಗಳು ರಚನೆಯಾದವು. ಅಲ್ಲದೆ ಬಂಡವಾಳಶಾಹಿಪರ ಅಮೇರಿಕಾ ಹಾಗೂ ಸಮಾಜವಾದಿಪರ ರಷ್ಯಾಗಳೆಂಬ ೨ ಬೃಹತ್ ರಾಷ್ಟ್ರಗಳು ಜಗತ್ತಿನಲ್ಲಿ ಶೀತಲ ಸಮರಕ್ಕೆ ನಾಂದಿ ಹಾಡಿದವು. ಈ ರೀತಿಯ ಶೀತಲ ಸಮರ ಆಯಾ ದೇಶಗಳ ಬೆಳವಣಿಗೆಗೆ ಕೆಲಮಟ್ಟಿಗೆ ಪೂರಕವಾದರೂ, ಅದು ಅಣ್ವಸ್ತ್ರಗಳಂತಹ ಮಾರಕ ಯುದ್ಧ ಶಸ್ತ್ರಾಸ್ತ್ರಗಳ ಪೈಪೋಟಿಗೆ ಕಾರಣವಾದದ್ದು ಒಂದು ದುರಂತ.



ನೀವು ಸಹ ನಮ್ಮ ಪರವಾಗಿರುವ ವಿಷಯ ತಿಳಿದು ತುಂಬಾ ಸಂತೋಷವಾಯಿತು ಪೂಜಾರ್ರೇ... !!?

ಜಾಗತಿಕ ಶಾಪಗಳಾದ ಬಡತನ, ಹಸಿವು, ಅಸಮಾನತೆಗಳ ನಿವಾರಣೆಗೆ ಬಳಸಬೇಕಾಗಿದ್ದ ಸಂಪತ್ತು – ಯುದ್ಧಪಿಪಾಸು ರಾಷ್ಟ್ರಗಳ ಕುತಂತ್ರ ಚಟುವಟಿಕೆಗಳಿಗೆ ಬಳಕೆ ಯಾಯಿತು. ಕೋಟ್ಯಂತರ ಅಮಾಯಕ ಜನ ಬಲಿಷ್ಠದೇಶಗಳ ಸ್ವಪ್ರತಿಷ್ಠೆಯ ಯುದ್ಧಗಳಿಗೆ ಬಲಿಯಾದರು. ಈ ಹಿಂದೆ ಇಂಗ್ಲೆಂಡ್, ಫ್ರಾನ್ಸ್ ಮುಂತಾದ ದೇಶಗಳು ಜಗತ್ತಿನ ಇತರ ಕಡೆಗಳಲ್ಲಿ ಮಾರುಕಟ್ಟೆಗಾಗಿ ತಮ್ಮ ಸಾಮ್ರಾಜ್ಯ ವಿಸ್ತರಣೆಯಲ್ಲಿ ತೊಡಗಿದ್ದರೆ ಈಗ ಅಮೇರಿಕಾ ಮತ್ತು ರಷ್ಯಾಗಳು ತಮ್ಮ ಸಿದ್ಧಾಂತಗಳ ಪ್ರಚಾರಕ್ಕಾಗಿ ಸ್ಪರ್ಧೆಗೆ ನಿಂತವು. ಇದರಲ್ಲಿ ರಷ್ಯಾ ಸೋಲು ಕಂಡಿತು. ಸಮಾಜವಾದಿ ಸಿದ್ಧಾಂತ ತಾತ್ಕಾಲಿಕವಾಗಿಯಾದರೂ ನೆಲಕಚ್ಚಿತು. ಇಷ್ಟಾದರೂ ಆ ಸಿದ್ಧಾಂತ ಸಂಪೂರ್ಣವಾಗಿ ನಾಶವಾಗಲಿಲ್ಲ. ಇಂದಿಗೂ ಅಮೇರಿಕಾದ ತೀರಾ ಸನಿಹವೇ ಇರುವ ಕ್ಯೂಬಾ, ವೆನಿಜುವೆಲಾ, ಅರ್ಜೆಂಟೈನಾ, ಬೊಲಿವಿಯಾ ಮುಂತಾದ ದೇಶಗಳಲ್ಲಿ ಸಮಾಜವಾದಿ ಪರ ಒಲವುಳ್ಳ ಸರ್ಕಾರಗಳು ಅಸ್ತಿತ್ವದಲ್ಲಿದ್ದು ಅಮೇರಿಕಾದ ದುರಹಂಕಾರ ಪ್ರವೃತ್ತಿಗೆ ಸಡ್ಡುಹೊಡೆದು ನಿಂತಿವೆ. ಅಷ್ಟು ಪುಟ್ಟ ದೇಶಗಳ ಸ್ವಾಭಿಮಾನ, ಕೆಚ್ಚು, ಧೈರ್ಯದ ವರ್ತನೆಗಳನ್ನೂ ವಿಶ್ವದ ಬೃಹತ್ ದೇಶಗಳಾದ ಚೀನಾ, ಭಾರತ ಮುಂತಾದ ರಾಷ್ಟ್ರಗಳು ಪ್ರದರ್ಶಿಸದೇ ಇರುವುದು ಆಶ್ಚರ್ಯಕರ ಸಂಗತಿಯಾಗಿದೆ. ಅಪಾರ ನೈಸರ್ಗಿಕ ಸಂಪನ್ಮೂಲ ಹಾಗೂ ಮಾನವಶಕ್ತಿಯನ್ನು ಹೊಂದಿರುವ ಭಾರತ ಸ್ವಾತಂತ್ರ್ಯಾನಂತರ ಯೋಗ್ಯ ಆರ್ಥಿಕ, ರಾಜಕೀಯ, ನಿರ್ಧಾರಗಳನ್ನು ಕೈಗೊಳ್ಳದೆ ಪ್ರಗತಿಯ ಹಾದಿಯಲ್ಲಿ ಕುಂಟುತ್ತಾ ಸಾಗಿದೆ. ಸ್ವಾತಂತ್ರ್ಯಾನಂತರ ನೆಹರೂ ಸರ್ಕಾರ ಅಳವಡಿಸಿದ ಪಂಚವಾರ್ಷಿಕ ಯೋಜನೆಗಳ ವೈಫಲ್ಯಕ್ಕೆ ಆತಂಕಕಾರಿಯಾಗಿ ಹೆಚ್ಚುತ್ತಿರುವ ಜನಸಂಖ್ಯೆ, ಅನಕ್ಷರತೆ, ಭ್ರಷ್ಟಾಚಾರಗಳೇ ಕಾರಣ ಎಂಬಂತೆ ಸೂಚಿಸಲಾಗುತ್ತಿದೆ. ಆದರೆ ಅವುಗಳ ಜೊತೆಗೆ ನಮ್ಮ ದೇಶ ಒಂದು ಕೃಷಿಪ್ರಧಾನ ದೇಶವಾಗಿರುವುದನ್ನು ಮರೆತ ರಾಜಕೀಯ ಮುಖಂಡರ ಪಾತ್ರವೂ ಇರುವುದನ್ನು ಮರೆಯಲಾಗದು. ಅದು ಹೋಗಲಿ, ಪ್ರಥಮ ಪಂಚವಾರ್ಷಿಕ ಯೋಜನೆಯ ಅವಧಿಯಲ್ಲಿ ಕೃಷಿಗೆ ಆದ್ಯತೆಕೊಟ್ಟ ಸರ್ಕಾರವು ೨ನೇ ಪಂಚವಾರ್ಷಿಕ ಯೋಜನೆಯಲ್ಲಿ ಪ್ರಥಮ ಯೋಜನೆಯ ಗುರಿಯನ್ನು ಪೂರ್ತಿಯಾಗಿ ಸಾಧಿಸ ಲಾಗಿದೆಯೇ ಎಂದು ಪರಿಶೀಲಿಸದೆ ಕೈಗಾರಿಕೆಗೆ ಆದ್ಯತೆ ನೀಡಿತು. ಇದರಿಂದ ಇತ್ತ ಕೃಷಿಕ್ಷೇತ್ರವೂ ಅಭಿವೃದ್ಧಿ ಸಾಧಿಸದೆ ಅತ್ತ ಬೃಹತ್ ಕೈಗಾರಿಕೆಗಳು ಅಲ್ಪಸ್ವಲ್ಪ ದೇಶದ ಪ್ರಗತಿಗೆ ಸಹಾಯಕವಾದರೂ ಪರಿಸರಮಾಲಿನ್ಯ, ಮಾರುಕಟ್ಟೆ ಬಿಕ್ಕಟ್ಟುಗಳನ್ನು ಎದುರಿಸಿ ಭಾರತ ಕೈಗಾರಿಗಾ ಪ್ರಧಾನ ರಾಷ್ಟ್ರವೂ ಆಗದೆ ಇಂದು ಅತಂತ್ರ ಸ್ಥಿತಿಗೆ ತಲುಪಿದೆ. ಯಾವುದೇ ಒಂದು ದೇಶ ಅಭಿವೃದ್ಧಿ ಸಾಧಿಸಬೇಕಾದರೆ ತನ್ನ ಆದ್ಯತೆ ಯಾವುದೆಂದು ಸ್ಪಷ್ಟವಾಗಿ ಮೊದಲು ಗುರುತಿಸಿಕೊಳ್ಳಬೇಕಾಗುತ್ತದೆ. ಅಲ್ಲದೆ, ಅದಕ್ಕೆ ಬದ್ಧವಾದ ಸೂಕ್ತ ದೀರ್ಘಾವಧಿ ಯೋಜನೆಗಳನ್ನು ರೂಪಿಸಿಕೊಳ್ಳ ಬೇಕಾಗುತ್ತದೆ. ಉದಾಹರಣೆಗೆ, ಚೀನಾದಂತಹ ದೇಶ ಗುಡಿ ಕೈಗಾರಿಕೆಗಳ ಮೂಲಕವೇ ಇವತ್ತೂ ಜಗತ್ತಿನ ಬಲಿಷ್ಠ ದೇಶವಾಗಿ ಹೊರಹೊಮ್ಮಿದೆ. ಕ್ಯೂಬಾದಂತಹ ಪುಟ್ಟ ರಾಷ್ಟ್ರ ಕಬ್ಬನ್ನು ಬೆಳೆದು 'ಸಕ್ಕರೆಯ ರಾಷ್ಟ್ರ' ಎಂಬ ಖ್ಯಾತಿ ಪಡೆದಿದೆ. ಸಿಂಗಪುರ, ಮಲೇಷ್ಯಾಗಳಂತಹ ಸಣ್ಣ ದೇಶಗಳು ಪ್ರವಾಸೋದ್ಯಮಕ್ಕೆ ಆದ್ಯತೆ ನೀಡಿ ಅದರಿಂದಲೇ ಜಗತ್ತಿನ ಗಮನ ಸೆಳೆದಿವೆ. ಆದ್ದರಿಂದ ತನ್ನ ಪ್ರಥಮ ಆದ್ಯತೆ ಯಾವುದು ಎಂಬುದನ್ನು ಭಾರತ ಮೊದಲು ಗುರುತಿಸಿಕೊಳ್ಳಬೇಕು. ಆ ಮೂಲಕ ೧೮ನೇ ಶತಮಾನಕ್ಕಿಂತ ಹಿಂದೆ ಭಾರತ ಹೊಂದಿದ್ದ ಘನತೆ ಗೌರವಗಳನ್ನೂ ಮತ್ತೆ ಸಂಪಾದಿಸಿಕೊಳ್ಳಲು ಪ್ರಯತ್ನಿಸಬಹುದು.

ಭಾರತದ ಸಂಪತ್ತನ್ನು ಇಂಗ್ಲೆಂಡ್ ಸ್ವಾತಂತ್ರ್ಯಪೂರ್ವದಲ್ಲಿ ಕೊಳ್ಳೆಹೊಡೆದರೂ ನಂತರದ ೬೦ ವರ್ಷಗಳಲ್ಲಿ ಭಾರತ ಒಂದು ಜಾಗತಿಕ ಶಕ್ತಿಯಾಗಿ ನಿಲ್ಲಲು ಶ್ರಮಿಸುತ್ತಿರುವುದು ಸಾಮಾನ್ಯ ಸಾಧನೆಯೇನಲ್ಲ. ಆದರೆ ೧೯೯೧ರ ದಶಕದ ಜಾಗತೀಕರಣ ಪ್ರಕ್ರಿಯೆ ಮತ್ತೆ ಭಾರತದಲ್ಲಿ ರಾಜಕೀಯ, ಆರ್ಥಿಕ, ಸಾಮಾಜಿಕ ಕ್ಷೋಭೆಗಳನ್ನು ಉಂಟುಮಾಡುತ್ತಿದೆ. ಜಾಗತೀಕರಣಕ್ಕೆ ಪರ್ಯಾಯವಾಗಿ ನಾವು ಗಾಂಧೀಜಿಯವರ 'ಗ್ರಾಮಸ್ವರಾಜ್ಯ' ಚಿಂತನೆಗಳನ್ನು ಅಳವಡಿಸಿಕೊಳ್ಳಬಹುದಾಗಿದೆ. ದುರದೃಷ್ಟವಶಾತ್ ನಮ್ಮ ಈಗಿನ ಸರ್ಕಾರಗಳ ಚಿಂತನೆಗಳೆಲ್ಲವೂ ನಗರ ಕೇಂದ್ರಿತ ಚಿಂತನೆಗಳಾಗಿವೆ. ನಮ್ಮ ಅಭಿವೃದ್ಧಿಯ ಕನಸುಗಳು ಗ್ರಾಮಮಟ್ಟದಿಂದ ಪ್ರಾರಂಭವಾಗಬೇಕು. ಸರ್ಕಾರಗಳು ಲಾಭವನ್ನು ಮಾತ್ರ ಬಯಸುವ ದಲ್ಲಾಳಿಯಂತಾಗ ಬಾರದು. ಸರ್ಕಾರ ಸೇವೆ ಹಾಗೂ ಇನ್ನಿತರ ಮೂಲಭೂತ ಸೌಕರ್ಯಗಳ ಕ್ಷೇತ್ರಗಳಲ್ಲಿ ಲಾಭವನ್ನೇ ಗುರಿಯಾಗಿಟ್ಟುಕೊಂಡು ಮುನ್ನಡೆಯುವುದು ಸಮರ್ಥನೀಯವಲ್ಲ. ನಮ್ಮ ಸಂವಿಧಾನ ೨೬-೧-೧೯೫೦ರಲ್ಲಿ ಘೋಷಿಸಿದಂತೆ ಭಾರತ ಒಂದು ಸಾರ್ವಭೌಮ, ಪ್ರಜಾಸತ್ತಾತ್ಮಕ (ಧರ್ಮ ನಿರಪೇಕ್ಷ ಮತ್ತು ಸಮಾಜವಾದಿ) ಗಣರಾಜ್ಯವಾಗಿದೆ. ಇಲ್ಲಿನ ಸಂವಿಧಾನ ತನ್ನೆಲ್ಲಾ ನಾಗರಿಕರಿಗೆ ಸಾಮಾಜಿಕ ನ್ಯಾಯ, ಅಂದರೆ ಕಾನೂನಿನ ಮುಂದೆ ಸರ್ವರೂ ಸಮಾನರೆಂಬ ನೀತಿ, ಸಮಾಜದ ಸಂಪತ್ತನ್ನು ಸರ್ವರೂ ಹಂಚಿಕೊಳ್ಳುವಿಕೆ ಅಂದರೆ ಆರ್ಥಿಕ ಸಮಾನತೆ, ರಾಜಕೀಯ ಸಮಾನತೆ ಇವುಗಳನ್ನು ನೀಡಿದೆ. ಆದರೆ ಇವೆಲ್ಲಾ ಕೇವಲ ಕಾಗದದ ಮೇಲೆ ಉಳಿಯುವಂತಾಗಬಾರದು. ಅಪಾರ ಉದ್ಯೋಗಾವಕಾಶಗಳನ್ನು ಹಾಗೂ ಸಂಪತ್ತನ್ನು ಕ್ರೋಢೀಕರಿಸಬಹುದಾದ ಕೃಷಿಗೆ ಪ್ರಥಮ ಆದ್ಯತೆ ಕಲ್ಪಿಸುವುದು ಅಗತ್ಯ. ಕೃಷಿ ಉತ್ಪನ್ನಗಳಿಗೆ ಸೂಕ್ತ ಆಂತರಿಕ ಮತ್ತು ವಿದೇಶೀ ಮಾರುಕಟ್ಟೆ ವ್ಯವಸ್ಥೆ ಕಲ್ಪಿಸುವುದು, ಅದೇ ರೀತಿ ಕೈಗಾರಿಕಾ ಉತ್ಪನ್ನಗಳಿಗೂ ಉತ್ತಮ ಮಾರುಕಟ್ಟೆ ಸೌಲಭ್ಯ ಒದಗಿಸುವುದು ಹಾಗೂ ನಿರಂತರ ವಿದ್ಯುತ್ ಪೂರೈಕೆ, ಪರಿಸರ ರಕ್ಷಣಾ ದೃಷ್ಟಿಯಿಂದ ಬೃಹತ್ ಕೈಗಾರಿಕೆಗಳಿಗೆ ಕಡಿವಾಣ ಹಾಕಿ ಸಣ್ಣ ಗುಡಿಕೈಗಾರಿಕೆಗಳಿಗೆ ಪ್ರೋತ್ಸಾಹ, ಅಪಾರವಾಗಿರುವ ಮಾನವ ಸಂಪನ್ಮೂಲವನ್ನು ಅಭಿವೃದ್ಧಿ ಕಾರ್ಯಗಳಲ್ಲಿ ಬಳಸಿಕೊಳ್ಳುವ ಯೋಜನೆಗಳನ್ನು ರೂಪಿಸುವುದು ಇವು ಇಂದಿನ ಸರ್ಕಾರಗಳ ಮುಖ್ಯ ಧೋರಣೆಗಳಾಗಬೇಕು. ಬದಲಾದ ಸ್ಥಿತಿಯಲ್ಲಿ ವಿಜ್ಞಾನ ತಂತ್ರಜ್ಞಾನಗಳ ಬೆಳವಣಿಗೆಗೆ ಪ್ರೋತ್ಸಾಹವೂ ಅಗತ್ಯ. ಇವೆಲ್ಲಾ ಗಾಂಧೀಜಿಯವರ ಚಿಂತನೆ, ಆಶಯಗಳಿಗೆ ಅನುಗುಣವಾಗಿಯೇ ಇವೆ. ಆದರೆ ಇದೆಲ್ಲಾ ನಮ್ಮ ದೇಶದ ಸಂಕೀರ್ಣ ಸಂಸ್ಕೃತಿಯ ಹಿನ್ನೆಲೆಗೆ ಪೂರಕವಾಗಿರಬೇಕು. ನಮ್ಮ ಸಂಸ್ಕೃತಿಯನ್ನು ನಾಶಮಾಡುವ ಆಮದು ಚಿಂತನೆಗಳು ನಮಗೆ ಬೇಡ. ಭಾರತದಂತಹ ಪ್ರಾಚೀನ ನಾಗರಿಕತೆಯ ದೇಶಕ್ಕೆ ಪರಕೀಯ ಅಭಿವೃದ್ಧಿ ಮಾರ್ಗಸೂಚಿಗಳು ಬೇಡವೆನಿಸುತ್ತವೆ. ಗಾಂಧೀಜಿಯವರ ದೇಶೀ ಚಿಂತನೆಗಳ ಮೂಲಕ ಬಂಡವಾಳಶಾಹಿ ಹಾಗೂ ಸಾಮ್ರಾಜ್ಯಶಾಹಿ ವ್ಯವಸ್ಥೆಯ ಹೊಸ ಅವತಾರವಾದ ಜಾಗತೀಕರಣಕ್ಕೆ ಪರ್ಯಾಯವನ್ನು ಒದಗಿಸಿಕೊಡಬಹುದಾಗಿದೆ.

ಬಿ. ಆರ್. ಶಶಿಧರ
ಇತಿಹಾಸ ಉಪನ್ಯಾಸಕ, ಸರ್ಕಾರಿ ಕಾಲೇಜು–ಆಲೂರು, ಹಾಸನ ಜಿಲ್ಲೆ

# ಎರಡು ಚಿಕ್ಕ ಕತೆಗಳು



# ದಾವಣಿ ಹುಡುಗಿಯೂ ಆಗಂತುಕ ಹುಚ್ಚನೂ

ಸೂರ್ಯ ಮುಳುಗುವ ಹೊತ್ತು.

ಆ ಊರಿನಲ್ಲಿ ಬೃಹತ್ ಸಮಾವೇಶ ನಡೆದಿತ್ತು. ಮತಾಂಧ. ಮುಖಂಡನೊಬ್ಬ ಬೆಂಕಿ ಕಿಡಿಗಳನ್ನು ಉಗುಳತೊಡಗಿದ್ದ. ಸಭಿಕರ ಮೈಮನಸ್ಸುಗಳಲ್ಲಿ ಆವೇಶ ತುಂಬತೊಡಗಿತ್ತು. ಅದೇ ವೇಳೆಗೆ ದೂರದಿಂದ ತೂರಿಬಂದಿದ್ದವು ಒಂದೆರಡು ಕಲ್ಲುಗಳು. ಕೋಲಾಹಲ ಉದ್ಭವಿಸಿತು. ವೈರಿಗಳನ್ನು ಸದೆಬಡಿಯಲು ಇದು ತಕ್ಕ ಸಮಯ ಎಂಬ ಮತಾಂಧ ನಾಯಕನ ಪ್ರಚೋದನಾತ್ಮಕ ರಕ್ಕಸ ಕೂಗು ಧ್ವನಿವರ್ಧಕದಲ್ಲಿ ಕೇಳಿಸಿತು. ಹುಟ್ಟು ತೂರೆದ ಜೇನುಹುಳಗಳಂತೆ ಸಭೆ ಬಿಟ್ಟೆದ್ದ ಜನರು ಆಕ್ರೋಶದಿಂದ ದಾಳಿಗೆ ಸಜ್ಜಾಗಿದ್ದರು. ಏಕಾಏಕಿ ಮಾರಕಾಸ್ತ್ರಗಳು ಝಳಪಿಸಿದವು. ನೂಕುನುಗ್ಗಾಟ, ಜಗ್ಗಾಟ, ತುಳಿದಾಟ, ಧಿಕ್ಕಾರದ ಧ್ವನಿ, ಧರ್ಮ, ದೇವರುಗಳ ಜಯಕಾರ. ಹಿಂಸೆಯನ್ನು ನಿಯಂತ್ರಿಸುವುದಕ್ಕಾಗಿ ಜನರನ್ನು ಚದುರಿಸಲು ಪೊಲೀಸರು ಲಾಟಿ ಬೀಸಿದರು. ಸತ್ತೆಯೋ ಬದುಕಿದೆಯೋ ಎನ್ನುವಂತೆ ಅರ್ಧ ಗಂಟೆಯಲ್ಲಿ ಜನ ಜಾಗ ಖಾಲಿ ಮಾಡಿದ್ದರು. ರಸ್ತೆಗಳೆಲ್ಲ ಬಿಕೋ ಎನ್ನತೊಡಗಿದವು. ವ್ಯಾಪಾರಸ್ಥರು ಸರಸರನೆ ಅಂಗಡಿ ಬಾಗಿಲು ಮುಚ್ಚಿ ಒಳಗೆ ಉಳಿದರು. ನಿಷೇಧಾಜ್ಞೆ ಜಾರಿಯಾದ ಬಗ್ಗೆ ಪೊಲೀಸರು ಮೈಕ್‌ನಲ್ಲಿ ಸಾರಿದರು.

ಸೂರ್ಯ ಕೂಡಲೇ ಹೆದರಿಕೆಯಿಂದ ಮೋಡದೊಳಗೆ ಬಚ್ಚಿಟ್ಟುಕೊಂಡ.

ಕತ್ತಲೆಂಬೊ ಕತ್ತಲೆ. ದಾವಣಿ ಹುಡುಗಿಯೊಬ್ಬಳು ಹೆಣದಂತೆ ಮಲಗಿದ್ದ ರಸ್ತೆ ತುಳಿಯುತ್ತ ಮನೆ ತಲುಪುವ ಧಾವಂತದಲ್ಲಿದ್ದಳು.

ಬಟ್ಟೆ ಅಂಗಡಿಯಲ್ಲಿ ಕೆಲಸ ಮಾಡುವ ಹುಡುಗಿ ಆಕೆ. ಅಂಗಡಿ ಮಾಲೀಕರು ಹೋಗಬೇಡವೆಂದರೂ, ಮುಚ್ಚಿದ ಅಂಗಡಿಯಲ್ಲಿ ಇರಲು ಹಿಂಜರಿದು ಆಕೆ ಅವಸರದಿಂದ ಮಾರ್ಕೆಟ್ಟಿನ ರಸ್ತೆಗಳನ್ನು ದಾಟಿ ಬಂದಿದ್ದಳು. ಇನ್ನು ಅರ್ಧ ಗಂಟೆಯ ದಾರಿ ತುಳಿದರೆ ಆಕೆಯ ಮನೆ. ವಿಶಾಲ ರಸ್ತೆಗಳನ್ನು ಬಿಟ್ಟು ಇಕ್ಕಟ್ಟಾದ ಸಂದಿಗಳಲ್ಲಿ ಆಕೆಯ ಹೆಜ್ಜೆಗಳು ಅವಸರವಾಗಿದ್ದವು.

"ಹರ ಹರ ಮಹಾದೇವ..." ಹತ್ತಿರದಿಂದಲೇ ಕೇಳಿಸಿತು ಧ್ವನಿ. ಒಂದು ಕ್ಷಣ ಯುವತಿಯ ಮೈ ಕಂಪಿಸಿತ್ತು. ಆದರೆ ಹೆಜ್ಜೆಗಳಲ್ಲಿ ಬೀಸುತನವಿತ್ತು. ರಸ್ತೆಯ ಒಂದು ತಿರುವಿನಲ್ಲಿ ಇಬ್ಬರು ಯುವಕರು ಪ್ರತ್ಯಕ್ಷರಾದರು. ಅವರ ಹಣೆಯಲ್ಲಿ ಕುಂಕುಮದ ನಾಮವಿತ್ತು. ಆಕೆ ಗಾಳಿಗೆ ಹಾರಾಡುತ್ತಿದ್ದ ತನ್ನ ದಾವಣಿಯನ್ನು ಮೈತುಂಬ ಹೊದ್ದುಕೊಂಡಳು. ಯುವಕರ ಹಸಿದ ಕಣ್ಣು ಅವಳೆದೆಯ ಮೇಲೆ ಹರಿದಾಡಿದವು. "ಏನು ನಿನ್ನ ಹೆಸರು?" ಬೆದರಿಸುವಂತೆ ಕೇಳಿದ್ದರವರು.

"ಶಾರದಾ" ಆಕೆ ಉಲಿದಿದ್ದಳು.

"ಹಣೆಯಲ್ಲಿ ಕುಂಕುಮವಿಲ್ಲ"

"ಟಿಕಳಿ ಎಲ್ಲೋ ಬಿದ್ದುಹೋಯಿತು."

"ನೀನು ಶಾರದಾ ಅಲ್ಲ; ಶಾಹೀರಾ ಇರಬೇಕು" ಹೀಗೆಂದು ಒಬ್ಬ ಯುವಕ ಅವಳ ದಾವಣಿ ಜಗ್ಗಿದ. ಮತ್ತೊಬ್ಬ ಅವಳ ಕೈ ಹಿಡಿದ. "ಅಣ್ಣ ನಾನು ಶಾರದಾ; ಶಾಹೀರಾ ಅಲ್ಲ" ಹೆದರುತ್ತಲೇ ಹೇಳಿದಳು ಹುಡುಗಿ. ಅವಳ ತುಂಬಿದೆದೆಗಳು ಯುವಕರ ಪ್ರಜ್ಞೆಗೆ ಮಂಕು ಕವಿಸಿದ್ದವು. ಉದ್ರೇಕದಲ್ಲಿ ಅವರಿಬ್ಬರೂ ಅವಳ ಮೇಲೆ ಬಿದ್ದರು. ಆಕೆ ಚೀತ್ಕರಿಸಿದಳು. ಒಬ್ಬ ಅವಳ ಬಾಯಿ ಮುಚ್ಚಿದ. ಆಮೇಲೆ ಮತ್ತೊಬ್ಬ. ಅವಳು ನರಳುತ್ತಿದ್ದಂತೆ ಇಬ್ಬರು ಯುವಕರೂ ಪರಾರಿಯಾದರು. ನಾಯಿಗಳು ಎಲ್ಲೋ ಬೊಗಳುತ್ತಿದ್ದವು. ಆಕೆ ಎದ್ದು ದಾವಣಿಗಾಗಿ ತಡಕಾಡಿದಳು. ಯುವಕನೊಬ್ಬ ಅದನ್ನು ತನ್ನ ಸೊಂಟಕ್ಕೆ ಬಿಗಿದುಕೊಂಡು ಹೋಗಿದ್ದು ಅವಳಿಗೆ ಗೊತ್ತಿರಲಿಲ್ಲ.

ತೆವಳುತ್ತ ನಡೆದ ಆಕೆಗೆ ದಾರಿ ರಕ್ಕಸವಾಗಿದೆ ಅನಿಸಿತು. ತಾನು ಅಂಗಡಿಯಲ್ಲಿ ಉಳಿದಿದ್ದರೆ ಚೆನ್ನಾಗಿತ್ತು ಎಂದುಕೊಂಡಳು. ಕೆದರಿದ ಕೂದಲನ್ನು ತೀಡಿಕೊಳ್ಳುವಾಗ ಫಕ್ಕನೆ ನೆನಪಾಗಿತ್ತು. ಕೈಯಲ್ಲಿದ್ದ ಪರ್ಸ್ ತೆರೆದು ಅದರಲ್ಲಿದ್ದ ಟಿಕಳಿಯೊಂದನ್ನು ತೆಗೆದು ಹಣೆಗೆ ಅಂಟಿಸಿಕೊಂಡಳು.

"ನಾರಾ-ಏ-ತಕಬೀರ್, ಅಲ್ಲಾ ಹೋ ಅಕ್ಬರ್!" ಎಂಬ ಧ್ವನಿ ಕೇಳಿ ಅವಳೆದೆ ಥರಗುಟ್ಟಿತು. ನಿಂತಲ್ಲಿಯೇ ನಿಂತಳಾಕೆ. ಈಗವಳೆದುರು ಮತ್ತಿಬ್ಬರು ಯುವಕರು ರಾಕ್ಷಸರಂತೆ ನಿಂತಿದ್ದರು. ಅವರ ತಲೆಯ ಮೇಲೆ ಟೋಪಿ ಇದ್ದವು.

ಯುವತಿ ಚಿಕ್ಕ ಪರ್ಸ್‌ನ್ನು ತನ್ನೆದೆಗೆ ಅಡ್ಡಹಿಡಿದಳು.

"ಏ - ಪ್ಯಾರಿ ಬುಲ್ ಬುಲ್, ಏನು ಕಮಾಯಿಸಲು ಬಂದಿ ಇಲ್ಲಿ" ಎಂದೊಬ್ಬ ಅವಳ ಪರ್ಸು ಕಿತ್ತುಕೊಂಡ.

"ತೇರಾ ನಾಮ್ ಕ್ಯಾ?" ಕೀರಲಾಗಿ ಕೇಳಿದ್ದ ಮತ್ತೊಬ್ಬ.

"ಭಯ್ಯಾ, ಮೇರಾ ನಾಮ್ ಶಾಹೀರಾ ಹೈ" ಎಂದಳು ಹುಡುಗಿ.

ಅವಳ ಹಣೆಯ ಮೇಲಿನ ಟಿಕಳಿ ನೋಡುತ್ತ "ಅರೆ ಬುಲ್ ಬುಲ್, ನಮ್ಮನ್ನು ಬಕರಾ ಮಾಡುತ್ತಿ ನೀನು" ಎಂದವರೆ ಅವಳನ್ನು ನೆಲದ ಮೇಲೆ ಮಲಗಿಸಿದ್ದರು. ಹುಡುಗಿ ಜೋರಾಗಿ ಕೂಗಿದಳು. ಕೋಮುಗಲಭೆಯಲ್ಲಿ ಇಂಥ ಕೂಗಾಟ ಮಾಮೂಲಿಯೇ ಎಂಬಂತೆ ಸುತ್ತಲಿನ ಮನೆಗಳು ಕಿವಿ ಮುಚ್ಚಿಕೊಂಡೇ ಇದ್ದವು. ಆ ಯುವಕರು ಕತ್ತಲಲ್ಲಿ ಪರಾರಿಯಾಗಿದ್ದರು.

ಎದ್ದು ಕುಳಿತುಕೊಳ್ಳಲಾಗಲಿಲ್ಲ ಯುವತಿಗೆ. ಪರಕಾರು ಅಸ್ತವ್ಯಸ್ತವಾಗಿತ್ತು. ಮಲಗಿದಲ್ಲಿಯೇ ಬಿಕ್ಕತೊಡಗಿದಳಾಕೆ.

ಅವರ ಜಾಡು ಹಿಡಿದು ಬಂದ ಆಗಂತುಕ. ಹತ್ತಿರ

**ಅಬ್ಬಾಸ್ ಮೇಲಿನಮನಿ**

ಬಂದು ನಿಂತವನ ನೋಟ ನಿರ್ವಿಕಾರವಾಗಿತ್ತು. ಹೆದರಿಕೆಯಿಂದ ಅವಳ ಮೈಯೆಂಬೊ ಮೈ ಭೂಮಿಯಂತೆ ಕಂಪಿಸತೊಡಗಿತು.

ಒತ್ತೊತ್ತಾಗಿ ಬೆಳೆದ, ಗಂಟುಗಂಟು ಕೂದಲ ನಡುವೆ ಅವನ ಮೂಗು ಕಂಡಿತ್ತು. ಮೈಮೇಲೆ ಚಿಂದಿ ಬಟ್ಟೆ, ಬಗಲಿಗೊಂದು ದೊಡ್ಡ ಚೀಲ, ಕಾಗದ, ರಟ್ಟು, ಅರಿವೆ ತುಂಡು ಮತ್ತಿನ್ನೇನೋ ಸಾಮಗ್ರಿಗಳು ಅದರಲ್ಲಿ, ಅವನು ಹುಚ್ಚ! ಒಮ್ಮೆಯೂ ನೋಡಿದ್ದಿಲ್ಲ ಈ ಶಹರದಲ್ಲಿ. ಅವನ ಮೈಯೊಳಗಿನದೇ ಇರಬೇಕು ಗಬ್ಬೆಂಬೊ ವಾಸನೆ. ಗಾಳಿಯೊಂದಿಗೆ ಸೇರಿ ಬಂದು ಅವಳ ಮೂಗು ಅಡರಿತ್ತು. ಅವಳನ್ನು ನೋಡಿ ನಕ್ಕಿದ್ದ ಅವನು. ಇನ್ನು ಇವನ ಸರದಿಯೋ ಎಂದು ತಹತಹಿಸಿದಳಾಕೆ.

ಹುಚ್ಚ ತನ್ನ ಹೆಗಲಿಗೆ ತೂಗುಹಾಕಿದ್ದ ಚೀಲ ಇಳಿಸಿದ. ಅವಳು ಅರೆಬೆತ್ತಲೆ ದೇಹವನ್ನು ಮುಚ್ಚಿಕೊಳ್ಳಲು ಯತ್ನಿಸಿದಳು.

ಆಗಂತುಕ ಲಗುಬಗೆಯಿಂದ ತನ್ನ ಚೀಲ ಬಿಚ್ಚಿದ. ಅದರಲ್ಲಿನ ಹಾಳೆ, ರಟ್ಟುಗಳನ್ನು ಭರಭರನೆ ಬೀಸಾಡಿ ದಾವಣಿಯೊಂದನ್ನು ಹುಡುಕಿ ತೆಗೆದು ನಕ್ಕ. ಅವನ ಕಣ್ಣು ಸಂತೋಷದಿಂದ ಅರಳಿಕೊಂಡಿದ್ದವು. ಅವಳ ಕಣ್ಣಲ್ಲಿ ನರಕದ ಭೀತಿ, ನಗುತ್ತಿದ್ದ ಹುಚ್ಚ ಇದ್ದಕ್ಕಿದ್ದಂತೆ ದಾವಣಿಯನ್ನು ನೋಡುತ್ತ ಅಳತೊಡಗಿದ. ಅವನ ಅಳು ನಿರ್ಜನ ಪ್ರದೇಶದ ಕರುಳು ಹಿಂಡುವಂತಿತ್ತು.

ಇಂಥದೇ ಕೋಮುಗಲಭೆಯೊಂದು ನಡೆದಿತ್ತು ಬಹಳ ದಿನಗಳ ಹಿಂದೆ. ಅವನ ಹೆಂಡತಿ, ಚಿಕ್ಕ ಮಗನನ್ನು ಚೂರಿ ಹಾಕಿ ಕೊಲ್ಲಲಾಗಿತ್ತು. ಅವನ ಕಣ್ಣೆದುರೆ ಓಡಾಡಿಸಿ ಬೆಳೆದ ಮಗಳನ್ನು ಮತಾಂಧ ಕಾಮುಕರು ಪೈಶಾಚಿಕವಾಗಿ ಬಲಾತ್ಕರಿಸಿ, ಬಾಯಲ್ಲಿ ಅವಳ ದಾವಣಿ ತುರುಕಿ ಉಸಿರುಗಟ್ಟಿಸಿ ಕೊಂದಿದ್ದರು. ಅವತ್ತಿನಿಂದ ಅವನು ಹುಚ್ಚನಾಗಿದ್ದ. ಮಗಳು ಹೊದ್ದುಕೊಳ್ಳುವ ದಾವಣಿ ಅವನ ಚೀಲದಲ್ಲಿ ಭದ್ರವಾಗಿ ಉಳಿದಿತ್ತು.

ಹುಚ್ಚ ಈಗದನ್ನು ಆ ಹುಡುಗಿಯ ದೇಹದ ಮೇಲೆ ಹೊದಿಸಿ ನಕ್ಕ.

ದಾವಣಿ ಮಾಸಿತ್ತಾದರೂ ಹುಡುಗಿಯ ಮಾನ ಮುಚ್ಚಿತ್ತು. ಆಗಂತುಕ ಹುಚ್ಚ ಅವಳನ್ನು ಅನಾಮತ್ತಾಗಿ ಎತ್ತಿಕೊಂಡು ಆಸ್ಪತ್ರೆಯತ್ತ ದಾಪುಗಾಲು ಹಾಕಿದ.

# ಪಾರಿವಾಳ ಮತ್ತು ಮನುಷ್ಯ

ಆ ಊರು ಪ್ರಕ್ಷುಬ್ಧವಾಗಿತ್ತು. ಅಲ್ಲಿನ ಜನರಿಗೆ ಬದುಕು ಎನ್ನುವುದು ದುಸ್ತರವೆನಿಸಿತ್ತು. ಆಗಾಗ ಹಲವಾರು ಕೋಮುಗಳ ನಡುವೆ ಕಲಹ ಉದ್ಭವಿಸುತ್ತಿದ್ದವು. ಕ್ಷುಲ್ಲಕ ಕಾರಣಗಳು ಮನುಷ್ಯರಲ್ಲಿ ಹಿಂಸಾ ಪ್ರವೃತ್ತಿ ಹುಟ್ಟುಹಾಕಿ ಊರೆಂಬೋ ಊರನ್ನು ಸ್ಮಶಾನಮಾಡುತ್ತಿದ್ದವು. ಒಂದಿಷ್ಟು ದಿನ ಶಾಂತ ವಾತಾವರಣ ನೆಲೆಸಿದ್ದರೆ ಧರ್ಮಾಂಧ ಮನಸ್ಸುಗಳಿಗೆ ಕಸಿವಿಸಿಯಾಗುವುದು. ಮೈಗಳ್ಳರು, ಪುಂಡ ಪೋಕರಿಗಳು, ಹರಾಮಿ ಗಬ್ಬು ಗೌಲಿನ ಆಸೆಬುರುಕರು ಆಯಾ ಧರ್ಮಗಳ ಲಾಂಛನ ಧರಿಸಿ ಭಯೋತ್ಪಾದಕ ತಲ್ಲಣ ಹುಟ್ಟಿಸುವುದರಿಂದ ದೇವರು, ಧರ್ಮಗಳೇ ನಡುಗತೊಡಗಿದ್ದರಿಂದ ಅಮಾಯಕರ ಆರ್ತತೆಯನ್ನು ಕೇಳುವವರೆ ಇರಲಿಲ್ಲ.

ಉರಿಯುವ ಮನೆಯ ಗಳ ಹಿರಿದಕೊಳ್ಳುವ ಕ್ಷುದ್ರ ಚಾಳಿಯ ರಾಜಕಾರಣಿಗಳಿಂದ ಸೈತಾನರ ಅಟ್ಟಹಾಸ ಹಗಲೆಂಬೊ ಹಗಲನ್ನು, ರಾತ್ರಿಯೆಂಬೊ ರಾತ್ರಿಯನ್ನು ಭಯಾನಕಗೊಳಿಸಿದ್ದವು. ಇವರೊಂದಿಗೆ ಕೈಜೋಡಿಸಿದಂತೆ ವದಂತಿ ಎಂಬ ಖೋಜಾ ಮಿಥ್ಯದ ಸಂಗತಿಗಳಿಗೆ ಜೀವದುಂಬಿ, ಬಣ್ಣತುಂಬಿ ಮನುಷ್ಯ ಸಂಬಂಧಗಳ ಮೇಲೆ, ಮಾನವೀಯತೆಯ ಮೇಲೆ ಗದಾ ಪ್ರಹಾರ ಮಾಡುತ್ತಲೇ ಚಾಕು ಚೂರಿ, ಹತ್ಯಾರ-ತ್ರಿಶೂಲ, ಬಂದೂಕು-ಬಾಂಬು, ಆಸಿಡ್ಡು-ಚೈನು, ಹಿಂದೂ-ಮುಸ್ಲಿಮ, ಜೈನ-ಬೌದ್ಧ, ಕ್ರೈಸ್ತ-ಸೀಖ್, ಪಾರಸಿಗಳನ್ನು ಬಲಿ ತೆಗೆದುಕೊಳ್ಳುತ್ತಲೇ ಇದ್ದವು. ಧರ್ಮಗಳ ಗುತ್ತಿಗೆದಾರರು ಸತ್ತವರಲ್ಲಿ ಯಾರು ಹೆಚ್ಚು ಎಂದು ಲೆಕ್ಕವಿಡುತ್ತಲೇ ಮತ್ಸರದ ಕೊಳ್ಳಿ ಉರಿಸುತ್ತಿದ್ದರು.

ಈ ಸಲದ ಗಲಭೆ ಭೀಕರವಾಗಿತ್ತು. ಊರಿನ ಬೀದಿ ಬೀದಿಗಳಲ್ಲಿ ಪೊಲೀಸರ ಬೂಟುಗಾಲಿನ ಸದ್ದು ಕೇಳಿಸುತ್ತಿತ್ತು. ಜನರು ಮುಚ್ಚಿಕೊಂಡ ಬಾಗಿಲು ತೆರೆದು ಹೊರಬರುವ ಧೈರ್ಯ ತೋರಿರಲಿಲ್ಲ. ಯಾರದೋ ಸ್ವಾರ್ಥಕ್ಕೆ ಅವರ ಬದುಕು ಹಿಂಸೆ ಅನುಭವಿಸತೊಡಗಿತ್ತು. ಆದರೆ ಅವರೊಂದಿಗೆ ಗೂಡುಗಳಲ್ಲಿ ಬೆಚ್ಚಗಿರುತ್ತಿದ್ದ ಸುಂದರ ಪಾರಿವಾಳಗಳು ಮಾತ್ರ ಪ್ರಳಯಾಂತಕರ ಕ್ರೌರ್ಯ ಲೆಕ್ಕಿಸದೆ, ಪೊಲೀಸರ ಗುಂಡಿನ ಸದ್ದಿಗೆ ಧೈರ್ಯಗೆಡದೆ, ಕರ್ಫ್ಯೂವನ್ನು ಉಲ್ಲಂಘಿಸಿ ನೆಲದಿಂದ ಆಕಾಶಕ್ಕೆ, ಆಕಾಶದಿಂದ ನೆಲಕ್ಕೆ ಸ್ವಚ್ಛಂದವಾಗಿ ಹಾರಾಡಿಕೊಳ್ಳುತ್ತಿದ್ದವು.



ಪಾರಿವಾಳ ಸಾಕಿದ ಮನುಷ್ಯ ಕಿಟಕಿಯೊಳಗಿಂದಲೇ ಕಾಳು ತೂರಿ,

"ಪಾರಿವಾಳಗಳೇ, ಊರಲ್ಲಿ ಕರ್ಫ್ಯೂ ಇದೆ. ನೀವು ಗೂಡು ಬಿಟ್ಟು ಹೋಗಬೇಡಿರಿ" ಎಂದಿದ್ದ.

"ನಮಗೆ ಬಂಧನ ಹಿಡಿಸುವುದಿಲ್ಲ, ಹಾರುವುದು ನಮ್ಮ ಸಹಜ ಸ್ವಭಾವ."

"ಜನರ ಗಲಭೆ, ಗುಂಡಿನ ಸದ್ದು ನಿಮಗೆ ಭಯ ತರುವುದಿಲ್ಲವೇ ?"

"ನಾವು ಮನುಷ್ಯರಂತಲ್ಲ."

"ಅಂದರೆ ?"

"ಮನುಷ್ಯರು ಅತೃಪ್ತರು. ಅವರಿಗೆ ಗಲಭೆ ಮುಖ್ಯ. ನಮಗೆ ಶಾಂತಿ ಮುಖ್ಯ."

"ಊರು ಆತಂಕದಲ್ಲಿರುವಾಗ ನೀವು ಶಾಂತಿಯಿಂದ ಇರಲು ಹೇಗೆ ಸಾಧ್ಯ ?"

"ನಮ್ಮಲ್ಲಿ ಮತೀಯ ಭಾವನೆ ಇಲ್ಲ ಅದಕ್ಕೆ."

"ನಾವೂ ನಿಮ್ಮಂತೆ ಇರಲು ಏಕೆ ಸಾಧ್ಯವಾಗುವುದಿಲ್ಲ ?"

"ನಮಗೆ ಈ ಜಗತ್ತು ಒಂದೇ. ಇಲ್ಲಿನ ಗಾಳಿ, ನೀರು, ಬೆಳಕು ಒಂದೆ. ನಾವು ಅನೇಕ ಸಲ ಮಸೀದೆಯ ಮಿನಾರುಗಳಲ್ಲಿ ಕುಳಿತು ಇಮಾಮನ ಕುರ್‌ಆನ್ ಉಕ್ತಿ ಕೇಳುತ್ತೇವೆ. ಮತ್ತೆ ಕೆಲವು ಸಲ ಮಂದಿರದ ಗೋಪುರದ ಮೇಲೆ ಕುಳಿತು ವೇದ ಉಪನಿಷತ್ತುಗಳ ಸಾರ ಅರಿಯುತ್ತೇವೆ. ಇನ್ನೊಮ್ಮೆ ಚರ್ಚಿನ ಗಂಟೆಯ ಬಳಿ ಕುಳಿತು ಫಾದರನ ಪ್ರೀತಿಯ ಸ್ತುತಿ ಆಲಿಸುತ್ತೇವೆ. ದೇವರು ದಯಾಮಯ, ನಮಗೆ ಅಂಥ ಭಾಗ್ಯವನ್ನು ಕರುಣಿಸಿದ್ದಾನೆ" ಎಂದು ಪುರ್ರನೆ ಆಕಾಶದತ್ತ ಪಾರಿವಾಳಗಳು ಹಾರಿಹೋದವು.

ಕಿಟಕಿಯ ಸರಳುಗಳ ಹಿಂದೆ ನಿಂತ ಮನುಷ್ಯ ಮುಖ ತಗ್ಗಿಸಿದ್ದ.

ಅಬ್ಬಾಸ್ ಮೇಲಿನಮನಿ
ಹುಸೇನಪೇಟ, ಗುಳೇದಗುಡ್ಡ - ೫೮೭ ೨೦೩

**ಡಾ|| ಪ್ರೀತಿ ಶ್ರೀಮಂಧರ್ ಕುಮಾರ್**

# ಬಂಡಾಯದ ಬಹುಮುಖೀ ಸಾಧ್ಯತೆಗಳು

**ಬಂ**ಡಾಯದ ತಾತ್ತ್ವಿಕತೆಗೆ ಕರ್ನಾಟಕವನ್ನು ಪ್ರಯೋಗಭೂಮಿಯನ್ನಾಗಿಸಿದ ಮುಂಚೂಣಿಯ ನಾಯಕರಲ್ಲಿ ಪ್ರೊ|| ಕಾಳೇಗೌಡ ನಾಗವಾರರು ವಿಶಿಷ್ಟರು.
ಗಾಂಧಿ, ಅಂಬೇಡ್ಕರ್, ಲೋಹಿಯಾ, ಮಾರ್ಕ್ಸ್, ಕನ್ನಡ ಸಾಹಿತ್ಯ, ಜಾನಪದಗಳನ್ನು ನಾಗವಾರರ ಗ್ರಾಮೀಣ ಪ್ರತಿಭೆ ವಿಮರ್ಶಾತ್ಮಕ ಎಚ್ಚರವುಳ್ಳ ಸೃಜನಶೀಲ ನೆಲೆಯಲ್ಲಿ ಸಂಯೋಜನೆಗೊಳಿಸಿತು. ನವ್ಯರ ಗರಡಿಮನೆಯಲ್ಲಿ ತಯಾರಾದ ಈ ಪಟು ಸ್ವಶೋಧದ ಮಾಯೆಯಲ್ಲಿ ಕಳೆದುಹೋಗಲಿಲ್ಲ. ಅಡಿಗರು ಕಟ್ಟಬಯಸಿದ ಹೊಸನಾಡು ರಸದ ಬೀಡಾಗದೆ ಬಂಜೆನೆಲವಾಗಿ ನವ್ಯರನ್ನು ಕಂಗೆಡಿಸತೊಡಗಿತ್ತು. ಸಾಮಾಜಿಕವಾಗಿ ನಗಣ್ಯರಾಗುಳಿವ ಭಯ, ಆತಂಕ, ನಿರಾಶೆ, ಹತಾಶೆಗಳು, ಸೃಜನಶೀಲತೆಯ ಮೂಲಸೆಲೆಯಾಗಿ ಸಾಕ್ಷಿಪ್ರಜ್ಞೆಯನ್ನು ನವ್ಯರು ಕಟ್ಟಿಕೊಳ್ಳುವಂತೆ ಮಾಡಿದವು. ಸಾಕ್ಷಿಪ್ರಜ್ಞೆಯುಳ್ಳ ಅಸ್ತಿತ್ವವಾದೀ ಶೋಧದ ಅಭಿವ್ಯಕ್ತಿಗೆ ಅನುಭವ ಪ್ರಾಮಾಣ್ಯ, ಅಧಿಕೃತತೆ ಒದಗಿಬಂದರೂ ಹೆಚ್ಚಿನ ವಿಸ್ತಾರ ಹೊಂದಲಿಲ್ಲ. ಇತಿಹಾಸದ ಅರ್ಥವನ್ನು ಅಸ್ತಿತ್ವವಾದೀ ತೀವ್ರತೆಯಲ್ಲಿ ನವ್ಯರು 'ಬಗೆವ' ಪ್ರಕ್ರಿಯೆ ರಾಜಕೀಯಾತ್ಮಕ ವಿಸ್ತರಣೆ ಪಡೆಯಬಹುದಿತ್ತು. ನವ್ಯದ ಮುಖ್ಯ ಲೇಖಕರು ಈ ಚಾರಿತ್ರಿಕ ಅವಕಾಶದಿಂದ ದೂರವೇ ಉಳಿದರು.

ಆದರೆ, ನಗರದ ಸೌಲಭ್ಯ ಸಂಪನ್ನ ವರ್ಗಗಳಿಗೆ ಅಮೂರ್ತವಾಗೇ ತೋರಿದ 'ವರ್ಗ-ವರ್ಣ ಸಂಘರ್ಷ'ದ ನೆಲೆಗಳು ದಲಿತ ಬಂಡಾಯ ಸಂಘಟನೆಯ ಮನಸ್ಸುಗಳಿಗೆ ವಾಸ್ತವಾನುಭವವಾಗಿ, ನಿಚ್ಚಳಗೊಂಡವು. ಹಾಗಾಗಿ, ಮಧ್ಯಮ ವರ್ಗೀಯ ಸೌಲಭ್ಯಸಂಪನ್ನ ನೆಲೆಯಿಂದ ಹೊರಡುವ ಇತಿಹಾಸದ ವ್ಯಾಖ್ಯಾನಗಳನ್ನು ಕಾಳೇಗೌಡ ನಾಗವಾರರ ಕಾವ್ಯ ಹಾಗೂ ಕಥಾಸಾಹಿತ್ಯ ನೇರವಾಗಿ ತಿರಸ್ಕರಿಸುತ್ತವೆ. ಅಂಚಿಗೆ ಸರಿಸಲ್ಪಟ್ಟ ಶೋಷಿತರನ್ನು ಮುಂಚೂಣಿಯಲ್ಲಿಟ್ಟುಕೊಂಡು, ಹೊಸ ಇತಿಹಾಸವನ್ನು ಸೃಷ್ಟಿಸುವ ಕಾಯಕದ ಸೃಜನಶೀಲರೂಪವಾಗಿ ನಾಗವಾರರ ಸಾಹಿತ್ಯವಿದೆ. ಇತಿಹಾಸದ ಅರ್ಥವನ್ನು ಗ್ರಹಿಸುವ ಬಗೆಗಳು ಬದಲಾದಾಗ ಮಾತ್ರವೇ ಜನ ಬದುಕಿನ ಚರಿತ್ರೆಗೆ ಹೊಸ ತಿರುವು ಬರುತ್ತದೆ. ಪರಿಣಾಮವಾಗಿ, ರಾಜಕಾರಣ ಮತ್ತು ಸಾಂಸ್ಕೃತಿಕ ಅಭಿವ್ಯಕ್ತಿಯಾದ ಸಾಹಿತ್ಯಗಳ ನಡುವೆ ಕ್ರಿಯಾತ್ಮಕ ಸಂವಾದ ಏರ್ಪಡುತ್ತದೆ. ನಾಗವಾರರ ಕಾವ್ಯದಲ್ಲಿ ಹುಟ್ಟುವ ಇಂಥ ಸಂವಾದದ ಭಾವತರಂಗಗಳು ಮಾನವಪ್ರೇಮದ ಹೊಳೆಯನ್ನು ಗತಿಶೀಲವಾಗಿಸಿ, ಸುಂದರಗೊಳಿಸಿವೆ. ಬಂಡಾಯದ ಬಹುಮುಖೀ ಸಾಧ್ಯತೆಗಳ ಬಗೆಗೆ ನಾಗವಾರರು ನಡೆಸಿದ ಪ್ರಯೋಗಶೀಲತೆಯ ಅಧಿಕೃತ ದಾಖಲೆಯಾಗಿ ಅವರ ಕಾವ್ಯ ನಮಗೆ ಮುಖ್ಯವಾಗುತ್ತದೆ.

ವ್ಯವಸ್ಥೆಯೊಳಗಿದ್ದುಕೊಂಡೇ ಬಂಡಾಯವನ್ನು ಹೂಡುವವರಿಗೆ ಕಾಮ್ರೇಡನ ವರ್ಗಸಮರದ ಲಗ್ಗೆ ತಂತ್ರ ಪ್ರಯೋಜನಕ್ಕೆ ಬರದು. ವರ್ಗಪ್ರಜ್ಞೆ ಇನ್ನೂ ಹರಳುಗಟ್ಟದಿರುವ ಭಾರತದ ಸಾಮಾಜಿಕ ಸಂದರ್ಭದಲ್ಲಿ ಕ್ರಾಂತಿ ತನ್ನಿಂದ ತಾನೆ ಸಹಜವಾಗಿ ಆಗುವಂಥದಲ್ಲ. ಆದ್ದರಿಂದ ಕ್ರಾಂತಿಯ ಸ್ಫೋಟಕ್ಕೆ ತಾನು ವೇಗವರ್ಧಕವೆನ್ನುವ ಕಾಮ್ರೇಡನ ಮಿತಿಯನ್ನು ಕವಿ ಕರಾರುವಾಕ್ಕಾಗಿ ಗುರುತಿಸುತ್ತಾರೆ. ವೇಗವರ್ಧಕತ್ವವನ್ನು ಕ್ರಾಂತಿಯ ಸಿದ್ಧತೆ ಎನ್ನುವುದಾದರೆ ಈ ಸಿದ್ಧತೆಯ ಸಿದ್ಧತೆ ಅತ್ಯಗತ್ಯವಾಗಿ ಆಗಬೇಕಾದುದರೆಡೆ ಕವಿ ಜಾಗ್ರತರಾಗಿದ್ದಾರೆ. ವ್ಯಕ್ತಿ , ಜಾತಿ, ರಾಷ್ಟ್ರ, ಜನಾಂಗಗಳ ನೆಲೆಯಲ್ಲಿ ನಡೆದ, ನಡೆಯಬೇಕಾಗಿರುವ ಆಂತರಿಕ ಸಮೀಪೀಕರಣವನ್ನು ಲೋಹಿಯಾ ಸಾಮಾಜಿಕ ತತ್ತ್ವವಾಗಿ ನಮ್ಮ ಮುಂದಿಟ್ಟಿದ್ದಾರೆ. ಈ ತತ್ತ್ವಕ್ಕೆ ಏಕಕಾಲದಲ್ಲಿ ವೈಚಾರಿಕ, ರಾಜಕೀಯ, ಆಧ್ಯಾತ್ಮಿಕ ಆಯಾಮಗಳಿವೆ. ನಾಗವಾರರ ಕಾವ್ಯ ಲೋಹಿಯಾ ಚಿಂತನೆಗೆ ಸೌಂದರ್ಯಾತ್ಮಕ ಆಯಾಮವನ್ನು ಕಲ್ಪಿಸಿದೆ. ದಲಿತ ಬಂಡಾಯದ ಪ್ರಣಾಳಿಕೆ ಎಂದೇ ಖ್ಯಾತಿ ಹೊಂದಿದ ಸಿದ್ಧಲಿಂಗಯ್ಯನವರ 'ಹೊಲೆಮಾದಿಗರ ಹಾಡು' ಶೋಷಿತರ ಮಾನಸಿಕ ಹಾಗೂ ದೈಹಿಕ ಶ್ರಮವನ್ನು ಕೇಂದ್ರವಾಗಿಟ್ಟುಕೊಂಡಿದೆ. ಈ ಶ್ರಮಸಂಪನ್ಮೂಲವನ್ನು ಪೂರ್ಣವಾಗಿ ತನ್ನ ಲಾಭಕ್ಕೆ ಪರಿವರ್ತಿಸಿಕೊಳ್ಳುವ ಭರದಲ್ಲಿ, ಆಪ್ತಕೌಟುಂಬಿಕ ಸಂಬಂಧಗಳ ಭಾವದ್ರವ್ಯವನ್ನು ಅಧಿಕಾರ ವ್ಯವಸ್ಥೆ ನಾಶಮಾಡುತ್ತದೆ. ನಾಶಗೊಂಡ ಮಾನವತೆಯನ್ನು ಮರಳಿ ಪಡೆಯುವ ಶ್ರಮ ಕಡಿಮೆಯೇನೂ ಅಲ್ಲ. ತಮ್ಮ ಕವನಗಳಲ್ಲಿ ನಾಗವಾರರು ಆಶಿಸುವ ಆಂತರಿಕ ಸಮೀಪೀಕರಣವು ಇಂಥ ಶ್ರಮದ ತಳಹದಿಯನ್ನು ಹೊಂದಿದೆ. ರಮ್ಯತಾರುಣ್ಯಾವಸ್ಥೆಯಲ್ಲಿ ಯಾವುದೇ ಪೂರ್ವಗ್ರಹವಿಲ್ಲದೆ ನಿರ್ಭೀತವಾಗಿ ಹರಿಯುವ ಪ್ರೇಮದ ಹೊಳೆಯು ಒಣ ವೈಚಾರಿಕ ವ್ಯಾವಹಾರಿಕ ಉಪ್ಪು ಸಮುದ್ರದಲ್ಲಿ ಸೇರಿ ಕರಗುವುದು ಕವಿಗೆ ಇಷ್ಟವಿಲ್ಲ. ಬೆಟ್ಟಸಾಲು ದಡಗಳ ಮಧ್ಯೆ ಅಂಕುಡೊಂಕಿನ ಮಾರ್ಗದಲ್ಲಿ ಹರಿವ ಪ್ರೇಮದ ಹೊಳೆಯ ನಿನಾದ ನಾಗವಾರರ ಕವಿತೆಗಳಲ್ಲಿ ಪ್ರತಿಧ್ವನಿಸುತ್ತದೆ. ಚರಿತ್ರೆಯಲ್ಲಿ ಉಂಟಾಗುವ ಭಾರೀ ಸಂಚಲನ; ಅಂದರೆ, ಸಾಮಾಜಿಕ ವರ್ಗ-ವರ್ಣಗಳ ಪುನರ್‌ವ್ಯವಸ್ಥೀಕರಣವು ವ್ಯಕ್ತಿಯ ಅಂತರಂಗವನ್ನು ಹಿಡಿದು ಅಲ್ಲಾಡಿಸಿಬಿಡುತ್ತದೆ. ಅಂಥ ಸಂದರ್ಭದಲ್ಲಿ ಮಾನವಪ್ರೇಮವೊಂದೇ ಕಾಯಬಲ್ಲುದೆಂಬ ದೃಢನಂಬಿಕೆ ನಾಗವಾರರ ಕಾವ್ಯದಲ್ಲಿದೆ. ಈ ನಂಬಿಕೆಯ ಬೆನ್ನೆಲುಬಾದ ಸಾಮಾಜಿಕ ವಾಸ್ತವತೆಯ ಜ್ಞಾನದೊಡನೆ ಹಾಸುಹೊಕ್ಕಾಗಿ ಬದುಕಿನ ನಡೆ ಇರಬೇಕು. ಈ ನಡೆಯನ್ನು ನುಡಿಯಲ್ಲಿ ಆಕಾರಗೊಳಿಸುವ ಕಾಯಕವೇ ನಾಗವಾರರಲ್ಲಿ ಕಾವ್ಯವಾಗಿ ಅಭಿವ್ಯಕ್ತಗೊಂಡಿದೆ.

ವ್ಯಕ್ತಿತ್ವದ ಉನ್ನತೀಕರಣಕ್ಕಾಗಿ, ನಿರ್ಬಂಧಗಳುಳ್ಳ ವ್ಯವಸ್ಥೆಯನ್ನು ಮೀರಿ ಹೋಗಲು ರಮ್ಯರು ಯತ್ನಿಸಿದರು. ಅದಕ್ಕೆ ಮೀಟುಗೋಲಾಗಿಸಿಕೊಂಡ 'ಪ್ರೇಮ'ವು ಅಮೂರ್ತ ನೆಲೆಯಲ್ಲಿ ಉಳಿಯಿತು. ಮಾನವ ಸಂಬಂಧಗಳ ಅನಿಶ್ಚಿತತೆ, ಅನೂಹ್ಯತೆಗಳ ಶೋಧದಲ್ಲಿ ನವ್ಯರು ಆಸಕ್ತರು. ರಮ್ಯರ ಅಮೂರ್ತ ಹಾಗೂ ನವ್ಯರ ಅತಿ-ವಾಸ್ತವಗಳ ನಡುವಿನ ಮಾರ್ಗವನ್ನು ನಾಗವಾರರ ಕವಿಪ್ರಜ್ಞೆ ಆಯ್ಕೆ ಮಾಡಿಕೊಂಡಿದೆ. ಗಂಗೆಯೊಡನೆ ಕದ್ದು ಮದುವೆಗೆ ನಿಲ್ಲುವ ಶಿವ, ಸಾರ್ಥಕ ಪ್ರಣಯಕ್ಕೆ ತಹತಹಿಸುವ ಅನೂ-ಕುಮೀಬಾ.

ವ್ಯವಸ್ಥೆಯೊಳಗಿದ್ದುಕೊಂಡೇ ಬಂಡಾಯವನ್ನು ಹೂಡುವವರಿಗೆ ಕಾಮ್ರೇಡನ ವರ್ಗಸಮರದ ಲಗ್ಗೆ ತಂತ್ರ ಪ್ರಯೋಜನಕ್ಕೆ ಬರದು. ವರ್ಗಪ್ರಜ್ಞೆ ಇನ್ನೂ ಹರಳುಗಟ್ಟದಿರುವ ಭಾರತದ ಸಾಮಾಜಿಕ ಸಂದರ್ಭದಲ್ಲಿ ಕ್ರಾಂತಿ ತನ್ನಿಂದ ತಾನೇ ಸಹಜವಾಗಿ ಆಗುವಂಥದಲ್ಲ. ಆದ್ದರಿಂದ ಕ್ರಾಂತಿಯ ಸ್ಫೋಟಕ್ಕೆ ತಾನು ವೇಗವರ್ಧಕವೆನ್ನುವ ಕಾಮ್ರೇಡನ ಮಿತಿಯನ್ನು ಕವಿ ಕರಾರುವಾಕ್ಕಾಗಿ ಗುರುತಿಸುತ್ತಾರೆ. ವೇಗವರ್ಧಕತ್ವವನ್ನು ಕ್ರಾಂತಿಯ ಸಿದ್ಧತೆ ಎನ್ನುವುದಾದರೆ ಈ ಸಿದ್ಧತೆಯ ಸಿದ್ಧತೆ ಅತ್ಯಗತ್ಯವಾಗಿ ಆಗಬೇಕಾದುದರೆಡೆ ಕವಿ ಜಾಗ್ರತರಾಗಿದ್ದಾರೆ. ವ್ಯಕ್ತಿ , ಜಾತಿ, ರಾಷ್ಟ್ರ, ಜನಾಂಗಗಳ ನೆಲೆಯಲ್ಲಿ ನಡೆದ, ನಡೆಯ ಬೇಕಾಗಿರುವ ಆಂತರಿಕ ಸಮೀಪೀಕರಣವನ್ನು ಲೋಹಿಯಾ ಸಾಮಾಜಿಕ ತತ್ತ್ವವಾಗಿ ನಮ್ಮ ಮುಂದಿಟ್ಟಿದ್ದಾರೆ.

ದ್ರೌಪದಿಯ ಒಳಗುದಿಗೆ ಸ್ಪಂದಿಸುತ್ತ ಸತ್ಯಭಾಮೆಯಲ್ಲಿ ಹೊಸ ಪ್ರಣಯವನ್ನುಕ್ಕಿಸುವ ಕೃಷ್ಣ, ಅಗ್ನಿಕನ್ಯೆಯ ಮಡಿಲ ಬೆಣ್ಣೆಯಾಗಿ ಕರಗಿ ಹೋಗುವ ಭೀಮ, ಪತ್ರಲೇಖೆಯನ್ನು ತನ್ನಂತರಾಳದ ಬಿಡುಗಣ್ಣಾಗಿ ಪರಿಭಾವಿಸುವ ಚಂದ್ರಾಪೀಡ, ಕಾಮ್ರೇಡನ ಅಪೂರ್ಣತೆಯನ್ನು ತನ್ನ ನಿತ್ಯಜೀವಂತಿಕೆಯಲ್ಲಿ ಮನದಟ್ಟುಮಾಡಿಸುವ ಪೂರ್ಣ – ಇವರೆಲ್ಲ ಈ ಬದುಕು ಬದುಕಲು ಯೋಗ್ಯ ಎಂಬ ಭರವಸೆಯ ಪ್ರೇರಕ ಪ್ರತೀಕಗಳಾಗಿದ್ದಾರೆ. ಈ ಭರವಸೆಯಿಂದ ಆಧರಿತವಾಗಿ ಈ ಬದುಕಿನ ಅರ್ಥಶೋಧವಿದೆ. ಬೆಟ್ಟಕಾಡುಗಳ ಮೈತೊಳೆವ ಹೊಳೆ, ಚುಕ್ಕಿ ಚಂದ್ರಮರ ಪ್ರತಿಬಿಂಬಿಸುವ ಕಡಲು; ಕಡಲ ತೀರಗಳು ಏಕಕಾಲಕ್ಕೆ ತುಂಬು ಮಾನವ ಚಟುವಟಿಕೆಯ ಬೀಡಾಗಿಯೂ ಮೌನಬನದ ಬಳ್ಳಿಹೂವನ್ನು ಕೂಡ ಅರಳಿಸಬಲ್ಲವು. ನಿಸರ್ಗದ ಮಡಿಲಲ್ಲಿ ನಿರಾಳವಾಗಿ, ಪರಸ್ಪರ ಪಿಸುಗುಟ್ಟುತ್ತಾ ಹಾಡುತ್ತಾ ಕರಗಿಹೋಗುವ ಪ್ರೇಮಿಗಳು, ಮೊಗೆದಷ್ಟೂ ಉಕ್ಕುವ ಜೀವಜಲ ಕೇಂದ್ರವಾಗಿದ್ದಾರೆ. ಕಾಳೇಗೌಡ ನಾಗವಾರರ ಕಾವ್ಯದ ಮೂಲ ಈ ಜಲತತ್ತ್ವವೇ. ಪ್ರೇಮದಲ್ಲಿ ಹುಟ್ಟುವ ವಿಸ್ಮಯ, ಆಹ್ಲಾದ, ರಹಸ್ಯಾನುಭೂತಿಗಳಿಲ್ಲದಿದ್ದರೆ ಅಸ್ತಿತ್ವವು ನೀರಸವೂ ನಿರುಪಯುಕ್ತವೂ ವ್ಯಾವಹಾರಿಕವಾದುದೂ ಹಾಗೂ ವಿಕೃತ ಕ್ರೌರ್ಯವುಳ್ಳದ್ದಾಗಬಲ್ಲದು. ಬೌದ್ಧಿಕ ಜ್ಞಾನವೇ ಶಕ್ತಿ ಎಂದೆನಿಸಿಕೊಳ್ಳುತ್ತಿರುವ ಹೊತ್ತಿನಲ್ಲಿ ಒಳ ಯಾನದ ಮೂಲಕ ಅಂತಃಚೇತನದ ಮೂಲಕ್ಕೇ ಬಂದು ನಿಲ್ಲುವ ಕ್ಷಣಗಳಿಗೆ ಚಾರಿತ್ರಿಕ ಮಹತ್ವವನ್ನು ಕವಿ ಕಲ್ಪಿಸಿಬಿಡುತ್ತಾರೆ. ಹಾಗಾಗಿ ವ್ಯಕ್ತಿ ಮತ್ತು ಸಮಾಜದ ಜೀವಿತವನ್ನು ಅಮೀಬಾದಂತಹ ಸ್ವವಿಘಟನೆಯ ಮೂಲಕ ವಿಕಾಸಗೊಳ್ಳುವ ಜೀವಿಯಾಗಿ ಮಾತ್ರ ಕವಿ ಪರಿಭಾವಿಸಿಲ್ಲ; ಗಂಡುಹೆಣ್ಣೆಂಬ ಎರಡು ಪ್ರಜ್ಞಾಶೀಲ ಚೇತನಗಳ ಸಂಯೋಗದಲ್ಲಿ ಫಲಿಸುವ ಹೊಸಹುಟ್ಟಿನಲ್ಲಿ ಸಾಮಾಜಿಕ ಬದುಕಿನ ದರ್ಶನವನ್ನು ಕವಿ ನೀಡುತ್ತಾರೆ. ಈ ದರ್ಶನವಿಲ್ಲದಿದ್ದರೆ, ನಾಗವಾರರ ಕವಿತೆಗಳಲ್ಲಿನ ಮನೋಲೈಂಗಿಕತೆಗೆ ಸುಲಭವಾಗಿ ಲಂಪಟತ್ವದ ಆರೋಪ ಒದಗಿಬಿಡುತ್ತಿತ್ತು. ಅದಕ್ಕೆ ಬದಲಾಗಿ, ಸಾಮಾಜೀಕೃತ ವ್ಯಕ್ತಿತ್ವದ ಅಹಂನ ಆವರಣಗಳನ್ನೆಲ್ಲ ಕಳಚುತ್ತ ಕೊನೆಯಲ್ಲಿ ಏನೂ ಇಲ್ಲ ಎಂದೆನಿಸುವ ನಿರಾಕುಲ ಮೂಕವಿಸ್ಮಯದಲ್ಲಿ ಮೊಳೆಯುವ 'ಕನ್ನೆಯ ಸ್ನೇಹ'ವಿದೆ. ಈ 'ಕನ್ನೆಯ ಸ್ನೇಹ'ವು ಅಧ್ಯಾತ್ಮ, ಕಾವ್ಯ ಹಾಗೂ ಸಮಾಜದ ಸೃಷ್ಟಿತತ್ತ್ವವಾಗಿ ಪರಿಣಮಿಸುತ್ತದೆ. ತನ್ನನ್ನು ತಾನು ಪ್ರೇಮಿಸಿಕೊಳ್ಳಲಸಮರ್ಥವಾದ ಅಮೀಬಾ ಮಾನವತೆಯ ವಿಕಾಸಕ್ಕೆ ಬದಲಾಗಿ ವಿಘಟನೆ, ವಿನಾಶದ ಪ್ರತೀಕವಾಗುತ್ತದೆ. ಎಲ್ಲ ನಾಗರಿಕ ವಿಕೃತಿಗಳ ಮೂಲವಾಗುತ್ತದೆ. ವಿಕಸನವನ್ನು ಸ್ಥಗಿತಗೊಳಿಸಿ ವಿಘಟನೆಯಲ್ಲಿ ಆಸಕ್ತವಾದ ಅದು ಅಪೂರ್ಣ. ಹಿಂಸೆ ಹಾಗೂ ಪ್ರೇಮಗಳನ್ನು ಬಂಡಾಯದ ಎರಡು ಸಾಧ್ಯತೆಯಾಗಿ ಪರಿಭಾವಿಸಿದಾಗ, ನಾಗವಾರರು ಆಯ್ಕೆ ಮಾಡಿಕೊಳ್ಳುವುದು ಪ್ರೇಮವನ್ನೇ. ಹಿಂಸೆಗೆ ಹಳೆಯ ವ್ಯವಸ್ಥೆಯನ್ನು ನಾಶಮಾಡಬಲ್ಲ ಸಾಧ್ಯತೆಯಿರುವುದು ನಿಜವಾದರೂ ಅಲ್ಲಿ ಅಸಂಖ್ಯಾತ ಹೂ ಹಣ್ಣುಗಳುಳ್ಳ ಮರಗಳನ್ನು ತನ್ನೊಡಲಲ್ಲಿ ಅಡಗಿಸಿಕೊಂಡ ಬೀಜತತ್ತ್ವವಿಲ್ಲ. ತಾಯ್ತನವು ಸೂಲಗಿತ್ತಿತನಕ್ಕಿಂತ ಮೂಲಭೂತವಾದುದು. ಅಸ್ತಿತ್ವದ ಅರ್ಥಪೂರ್ಣತೆಯನ್ನು ಪ್ರೇಮದ ದಿವ್ಯದಲ್ಲಿ ಪಡೆಯಲಾರದ ಶೂನ್ಯದಲ್ಲಿ ಈ ಕಾಮ್ರೇಡ್ ಕರಗಿಹೋಗುತ್ತಾನೆ. ಪೂರ್ಣಳ ಪ್ರಣಯಕ್ಕೆ ಮುಕ್ತವಾಗಿ ಸ್ಪಂದಿಸಲಾರದಷ್ಟು ಜಡನಾದವನು ವೇಗವರ್ಧಕವೂ ಆಗಲಾರ. ಇಂಥವನಲ್ಲಿ ಕ್ರಾಂತಿಯ ಗಡಿರೇಖೆಗಳನ್ನು ವಿಸ್ತರಿಸುವ ಸಾಮರ್ಥ್ಯವೂ ಇಲ್ಲ. ಮಧ್ಯಮವರ್ಗೀಯ ಹಿಂಜರಿತಗಳುಳ್ಳ ಆತನ ಅನ್ಯಮನಸ್ಕತೆ, ಗಾಬರಿ, ನಿರಾಶೆಗಳು ಸಾಮಾಜಿಕ ಪ್ರಗತಿಗೆ ಪ್ರತಿಕೂಲವೇ. ಈತ ಮಾತು ಕಂಡವ. ಆದರೆ ಅನುಭವವೆಂಬ ಕಾಡನ್ನು ಹೊಗಲಾರ. ಪ್ರೇಮದ ಹೊಳೆಯಲ್ಲಿ ಮೀಯಲಾರ. ಗೆಳತಿ ಪೂರ್ಣಳ ಮಾತಿಗೆ ಅಷ್ಟಾಗಿ ಗಿವಿಗೊಡದ ಗಂಡು ಮೂಕನಿವ.

ಕಾಮ್ರೇಡನ ಇಂಥ ಸ್ಥಗಿತತೆ ಶಿವನಿಗಿಲ್ಲ. ಲೋಹಿಯಾ ವ್ಯಾಖ್ಯಾನಿಸಿದಂತೆ ಶಿವ ಎಲ್ಲ ಬಗೆಯ ವ್ಯವಸ್ಥೆಗೆ ಅತೀತನಾದವ. ಗೌರಿಯ ಗಂಡನಾಗಿ ವ್ಯವಸ್ಥೆಯ ನಿಯಂತ್ರಣಕ್ಕಧೀನನಾದರೂ ಅದರಿಂದ ಆಚೆ ಹೊರಬರಬಲ್ಲ ಚೈತನ್ಯಸತ್ವನೀತ. ಸಾಮಾಜಿಕ ಸಂಚಲನಕ್ಕೆ ಅನುವಾಗುವಂತೆ ವರ್ಣ-ಸಂಕರವನ್ನು ಈತ ಉಂಟುಮಾಡಬಲ್ಲ. ಕೆಳಜಾತಿಗೆ ಸೇರಿದ ಗಂಗೆಯೊಡನೆ ಕದ್ದು ಮದುವೆಗೆ ನಿಲ್ಲಬಲ್ಲ ಧೀರನೀತ. ಇಡೀ ಗಂಗಾಕುಲವೇ ಅವನನ್ನು ಅಳಿಯನೆಂದು ಸಂಭ್ರಮಿಸುತ್ತದೆ. ಹೀಗಾಗಿ ಜನಮಾನಸದಲ್ಲಿ ಜೀವಂತವ್ಯಕ್ತಿಚರಿತನಾಗಿ ಆತ ಸ್ಥಾನ ಪಡೆಯುತ್ತಾನೆ. ವ್ಯವಸ್ಥೆಯೊಳಗಿನ ಸಕ್ರಿಯ ಸಾಮಾಜಿಕ ಸದಸ್ಯತ್ವ ಪಡೆದ ಗೌರಿಯ ಗಂಡ ಶಿವ ಅದನ್ನುಳಿಸಿಕೊಂಡೇ ಗಂಗೆಯ ಹಂಬಲದಲ್ಲಿ ಮುಗ್ಧ ಮೈ ಚೈತನ್ಯವನ್ನು ಮರೆಯದವ. ಈ ಕಲ್ಲಿನ ದೃಢತ್ವಕ್ಕೆ ಪ್ರಾಣವನ್ನು ಪ್ರತಿಷ್ಠಾಪಿಸಿದ್ದು 'ಎರಡು ಹೊಳೆ'ಗಳು. ಸಮಾಜದ ಮೂಲಘಟಕವಾದ ಕುಟುಂಬ ಕೇಂದ್ರಕ್ಕೆ ಚೈತನ್ಯವನ್ನು ಒಳಪಡಿಸಲೆತ್ನಿಸುವ ಗೌರಿಯ ಕೃಷಿಕಾಯಕಕ್ಕೆ ಜೀವಾಧಾರವಾದದ್ದು ಶ್ರಮಜೀವಿವರ್ಗದ ಬೆವರ ಹೊಳೆ ಮಗಳು ಗಂಗೆ. ಗೌರಿಯ ಕೃಷಿಗೆ ಬೆಂಬಲವಾಗಿ ನಿಂತ ಗಂಗೆಯನ್ನೂ ಸಮಾಜದ ಪ್ರಧಾನವಾಹಿನಿಗೆ ಕರೆದೊಯ್ಯುವ ಕ್ರಿಯೆಗೆ ಅಧಿಕೃತ ಒಪ್ಪಿಗೆಯ ಅಗತ್ಯವಿದೆ. ಉರಿಗಣ್ಣನನ್ನು ತನ್ನ ಸಮತೂಕಕ್ಕೆ ತರಲು ತೂಗಿ ಎಳೆಯುವ ಗಂಗೆಯ ಹಂಬಲ ಪೂರ್ಣಳ ಹಂಬಲವೂ ಆಗಿದೆ. ಜನಸಾಗರದ ಕನಸಿನಾಳದ ಸುಪ್ತಬಯಕೆಗಳೇ ಗಂಗಾಲಗ್ನದಂಥ ಸಂಭ್ರಮಾಚರಣೆಯಾಗಿ ಪ್ರಕಟಗೊಂಡರೆ ಸಾಲದು; ವಾಸ್ತವದಲ್ಲಿ ಸಾಕಾರಗೊಳ್ಳಬೇಕೆಂಬ ಆಶಯ ಪೂರ್ಣಳದು. ಪುರಾಣ ಪರಂಪರೆಯೊಳಗಿನ ಗಂಗಾಲಗ್ನದ ಕಥನವು ಕಾಮ್ರೇಡನಿಗೆ ಕ್ರಾಂತಿಕಾರಕ ಸ್ಫೋಟಕ ಐಡಿಯಾ ಮಾತ್ರವಾಗಿ ಕಾಣುತ್ತದೆ. ತನ್ನಲ್ಲಿ ತಾನು ಸ್ವಯಂಪೂರ್ಣನಲ್ಲದ ವ್ಯಕ್ತಿ ಯಾವುದೇ ರೀತಿಯಲ್ಲಿ ಸಾಮಾಜಿಕವಾಗಿ ಉಪಯುಕ್ತನಾಗಲಾರ. 'ಹೊಳೆ'ಯನ್ನು ಚಲನಶೀಲ ಅರಿವಿನ ಪ್ರಕ್ರಿಯೆಯಾಗಿ ಪರಿಭಾವಿಸಿದಾಗ ಮಾತ್ರವೇ ಬಹುಪತ್ನಿತ್ವದ ರಿಯಾಯತಿಯುಳ್ಳ ಪಿತೃಪ್ರಾಧಾನ್ಯತೆಯ ಕಳಂಕದಿಂದ 'ಶಿವ' ತಪ್ಪಿಸಿಕೊಳ್ಳಬಲ್ಲ. ಬಹುಪತ್ನಿತ್ವವನ್ನು ತನ್ನ ವ್ಯಕ್ತಿತ್ವದ ವಿಸ್ತರಣೆಯಾಗಿ ಸಮರ್ಥಿಸಿಕೊಳ್ಳುವವರನ್ನು ಯಾವುದೇ ರೀತಿಯಲ್ಲಿ ಒಪ್ಪಿಕೊಳ್ಳ ಲಾಗುವುದಿಲ್ಲ. ಹಾಗಾಗಿ ವರ್ತಮಾನದ ಸಾಮಾಜಿಕ ವಾಸ್ತವದ ಎಲ್ಲ ವಿವರಗಳನ್ನು ಲಗತ್ತಿಸಿಕೊಂಡ ಪಾತ್ರವನ್ನಿಟ್ಟುಕೊಂಡೇ ಕಾಲಾತೀತ, ಅಪ್ರಜ್ಞಾವಲಯದ ಆದಿಪ್ರತಿಮೆ ಗಳನ್ನು ವಾಸ್ತವಕ್ಕೆಳೆದುಕೊಂಡು ಬರುವುದು ಸವಾಲಿನ ಸಂಗತಿಯೇ ಸರಿ. ಪುರಾಣ ಪ್ರತೀಕಗಳಿಗೆ ವರ್ತಮಾನದ ಸಾಮಾಜಿಕ ಅರ್ಥವ್ಯಾಖ್ಯಾನವನ್ನು ನೀಡುವಾಗ ಕೂದಲೆಳೆಯ, ಅಂತರದಲ್ಲಿ ಪಿತೃಪ್ರಾಧಾನ್ಯ ಚಿಂತನೆಯ ಕಮರಿಗೆ ಬೀಳಬಲ್ಲ ಅಪಾಯವಿದೆ. ಹಾಗೆ ಓದುಗರನ್ನು ಬೀಳಿಸದಂತೆ ರಕ್ಷಣಾ ಸಾಧನವಾಗಿ ಅನೂ-ಕುಮೀಬಾ ಇದ್ದಾರೆ.

ಏಕಾಂತದ ನೆಲೆಗಾಗಿ ಪರಿತಪಿಸುವ ಜೋಡಿ ಝೂ ಮೂಲಕ ಪಡೆದ ಅರಿವು ಮೌಲಿಕವಾದುದು. ಜೀವವಿಕಾಸದ ಪ್ರಕ್ರಿಯೆಯಲ್ಲಿ ಕಾಯ ಹಾಗೂ ಪ್ರಜ್ಞೆ ವಹಿಸುವ ಪಾತ್ರವನ್ನು ಝೂನ ರೂಪಕದಲ್ಲಿ ಕವಿ ಹಿಡಿದಿಡುತ್ತಾರೆ. ಅನಿರ್ಬಂಧಿತ ಸ್ವಚ್ಛಂದ ನೆಲೆಯಲ್ಲಿರುವ ಹಿಂಸ್ರಕತೆಯನ್ನು ದುಸ್ವಪ್ನದಂತೆ ಕಂಡು ಕುಮೀಬಾ ತಲ್ಲಣಗೊಳ್ಳುತ್ತಾನೆ. ಬೆದೆಯ ಹದದಲ್ಲೇ ತನ್ನ ಹಂಬಲಿಕೆ ಹಣ್ಣಾಗಬೇಕೆಂಬ ಅನುಭವಜನ್ಯ ತಿಳುವಳಿಕೆ ಇದ್ದಾಗ ಮಾತ್ರ 'ಅಮಿತೋಲ್ಲಾಸದುನ್ಮಾದದೇಳುಬೀಳಲ್ಲಿ' ಕರಗಿ ಪ್ರೇಮಿಗಳಾಗಿ ಹೊಸ ಜನ್ಮಧಾರಣೆ ಮಾಡಲು ಸಾಧ್ಯ. ಇಷ್ಟಾಗಿ ಅಸ್ತಿತ್ವದ ಹೋರಾಟದಲ್ಲಿ ಬದುಕುಳಿಯಲು ಬಾಹ್ಯರೂಪಾಂತರ ಹೊಂದಿದ ಬಿಳಿಯ ಕಾಕರಾಜನಿಂದ ಯುವಪ್ರೇಮಿಗಳು ಪಡೆದುಕೊಳ್ಳುವ ಸಂದೇಶ ಧ್ವನಿಪೂರ್ಣವಾದುದು. ಹೊರಗಿನ ಪರಿವರ್ತನೆಗಿಂತ ಹೆಚ್ಚು ದೃಢವಾಗಿ ನಮ್ಮನ್ನುಳಿಸುವ ಆಮೂಲಾಗ್ರ ಬದಲಾವಣೆಯೆಂದರೆ ಪರಸ್ಪರರಲ್ಲಿ ಕರಗಿ, ಪ್ರೇಮಿಗಳಾಗಿ ಪಡೆದ ಹೊಸಹುಟ್ಟು, ಸ್ಥಗಿತ, ದಮನಶೀಲ ವ್ಯವಸ್ಥೆಯನ್ನು ಕೆಡಹುವ ಮೊದಲು ಕಟ್ಟಬೇಕಾದ ಹೊಸವ್ಯವಸ್ಥೆಯ ಜ್ಞಾನವಿದ್ದರಷ್ಟೇ ಸಾಲದು, ಕಟ್ಟುವ ಮಾರ್ಗ, ಕ್ರಿಯೆ ಹೇಗಿರಬೇಕೆಂಬುದೂ ಮುಖ್ಯ. ನಾಗವಾರರ ಕಾವ್ಯ ಈ ನಿಟ್ಟಿನಲ್ಲಿ ನಮಗೆ ಮೌಲಿಕ ಮಾರ್ಗದರ್ಶನವನ್ನು ನೀಡುತ್ತದೆ. ಆಂತರಿಕ ಸಮೀಪೀಕರಣದ ಮೂಲಕ ಸಾಧ್ಯವಾಗುವ 'ಶೃಂಗ' ಸ್ಥಿತಿಯ ಅನುಭೂತಿಯೇ ಶೃಂಗಾರ. ಈ ಶಿಖರಪ್ರಜ್ಞೆಯ ಮೂಲದಿಂದ ಉದ್ಭವಿಸಿಯೇ ಸಾಮಾಜಿಕ ಬದುಕಿನ ಹೊಳೆ ಬತ್ತಿಹೋಗದೆ ಹರಿಯುತ್ತಿರಬಲ್ಲದು.

ಗುರುಗಳಾದ ಪ್ರೊ|| ಕಾಳೇಗೌಡ ನಾಗವಾರರ 'ಗಾಳಿ ಬೆಳಕಿನ ಪಯಣ' ಕವನ ಸಂಕಲನಕ್ಕೆ ಮುನ್ನುಡಿ ಬರೆಯುತ್ತಿರುವುದು – ಸರ್ ನನಗೆ ಕೊಟ್ಟ ಪ್ರಾಯೋಗಿಕ ಪರೀಕ್ಷೆ ಎಂದೇ ಅನಿಸುತ್ತಿದೆ. ಅಭ್ಯಾಸಿ ವಿದ್ಯಾರ್ಥಿಗಳಲ್ಲಿರಬಹುದಾದ ಏಕಾಗ್ರತೆ, ಶ್ರದ್ಧೆ, ಹುಮ್ಮಸ್ಸು ನನ್ನ ಲೇಖನಿಯನ್ನು ಮುನ್ನಡೆಸಿವೆ. ಜ್ಞಾನವು ಅಂತಿಮವಾಗಿ ಪ್ರೇಮಭಾವದ ನಿಯಂತ್ರಣವನ್ನು ಹೊಂದಿರಬೇಕೆಂಬ ಕವಿಯ ಆಶಯ ಸಾಮಾಜಿಕ ಚಳವಳಿಯ ಜರೂರೆಂಬುದರಲ್ಲಿ ಎರಡು ಮಾತಿಲ್ಲ. ಈ ವಿಷಯದಲ್ಲಿ ತನ್ನ ಮೂಲಕ ಹಾದುಹೋಗುವ ಶಿಷ್ಯಪರಂಪರೆಯ ಬಗ್ಗೆ ಅಪಾರ ಭರವಸೆಯನ್ನಿಟ್ಟುಕೊಳ್ಳಲು ಮಾತೃವಾತ್ಸಲ್ಯದ ಕವಿಮನಸ್ಸಿಗಲ್ಲದೆ ಮತ್ತಾರಿಗೆ ಸಾಧ್ಯ ?

(ನಾಗವಾರ ಅವರ ಸಮಗ್ರ ಕಾವ್ಯಸಂಕಲನಕ್ಕೆ ಬರೆದ ಮುನ್ನುಡಿ.)

**ಡಾ|| ಪ್ರೀತಿ ಶ್ರೀಮಂಧರ್‌ಕುಮಾರ್**
ಕನ್ನಡ ಪ್ರಾಧ್ಯಾಪಕರು, ಮಾನಸಗಂಗೋತ್ರಿ
ಮೈಸೂರು - ೫೭೦ ೦೦೬

# ಆರು ಚಿಂತನೆಗಳು




ತೆಲುಗು ಮೂಲ: **ಡಾ|| ರಾವೂರಿ ಭರದ್ವಾಜ್**

ಅನುವಾದ: **ಡಾ|| ಎಚ್. ಎಸ್. ಸುಜಾತಾ**


೧

**ನ**ಮ್ಮಲ್ಲಿ ಬಹುಮಂದಿ
ಕುರುಡರು, ಕಿವುಡರು, ಕುಂಟರು, ಮೂಗರು.

ಅವರೇನೋ ಹುಣ್ಣಿಮೆ ಬೆಳುದಿಂಗಳಲ್ಲಿ
ಸಹೃದಯನ ಹೃದಯವನ್ನು ಕಂಡರು.
ನಾನೇನೋ ಅದೇ ಬೆಳುದಿಂಗಳಲ್ಲಿ
ಹರಡಿರುವ ಹಿಟ್ಟನ್ನು ಮಾತ್ರ ಕಂಡೆ.

ಇವರೇನೋ ಚಿಗುರು ಹಸುಳೆಯು
ಹಾಕುವ ಕೇಕೆಯನ್ನು ಸಹ ಕೇಳಿದರು.
ನಾನೇನೋ ಬೀದಿಯಲ್ಲಿನ ಭಿಕ್ಷುಕನ
ಹಸಿವಿನ ಆಕ್ರಂದನವನ್ನು ಸಹ ಕೇಳಲಾಗದ ಕಿವುಡ.

ನೀವೇನೋ ದೂರಾತಿದೂರದಲ್ಲಿ ಇರುವ ಜನರ
ಹೃದಯಗಳೊಳಗೆ ನುಗ್ಗಿ ಹೋದಿರಿ.
ನಾನೇನೋ ನೆರೆಮನೆಯ ಹೊಸಿಲನ್ನು ಸಹ
ಏರಲಾಗದ ಕುಂಟ.

ಆ ಪಕ್ಕ ಈ ಪಕ್ಕ ಇರುವವರೆಲ್ಲ
ತಮ್ಮ ಅನುಭವಗಳನ್ನು ಅಕ್ಷರರೂಪದಲ್ಲಿ
ಅಂದವಾಗಿ ಹುದುಗಿಸಿಟ್ಟು ಆತ್ಮೀಯವಾಗಿ ಮಾತನಾಡುತ್ತಾರೆ.
ನನಗೆ ಅಂಥ ಅದ್ಭುತವಾದ ಅನುಭವಗಳು ಇಲ್ಲ.
ಇದ್ದರೂ ಅವುಗಳನ್ನು ಅಕ್ಷರಗಳಲ್ಲಿ ಹುದುಗಿಸಿ
ಆತ್ಮೀಯವಾಗಿ ಮಾತನಾಡಲು ಕೈಲಾಗದ ಮೂಗ ನಾನು.

೨

ಬಹಳ ಮಂದಿ ಭಕ್ತರನ್ನು ನೋಡುತ್ತಿದ್ದೇನೆ. ಬಹಳ ಮಂದಿ ಸ್ವಾಮೀಜಿಗಳನ್ನು ಕುರಿತು ಅವರು ಇವರು ಹೇಳುವುದನ್ನು ಕೇಳುತ್ತಿದ್ದೇನೆ. ಈ ಸ್ವಾಮಿಗಳ ಬೋಧನೆಗಳನ್ನು ಸಹ ಸ್ವಲ್ಪ ಮಟ್ಟಿಗೆ ಆಲಿಸಿದ್ದೇನೆ.



"ಹಾಗೆ ಧ್ಯಾನಿಸಿರಿ, ನಿಮ್ಮ ಕೋರಿಕೆಗಳು ನೆರವೇರುತ್ತವೆ. ಹೀಗೆ ಪೂಜಿಸಿರಿ, ನಿಮ್ಮ ಸಂಕಲ್ಪಗಳು ಈಡೇರುತ್ತವೆ. ಹೀಗೆ ಅರ್ಚಿಸಿರಿ, ನಿಮಗೆ ಅಖಂಡ ವಿಜಯ ಲಭಿಸುತ್ತದೆ" ಎಂಬ ಅಂಶಗಳೇ ಇವರ ಬೋಧನೆಗಳ ತುಂಬ ಕಿಕ್ಕಿರಿದಿರುತ್ತವೆ.

ಎಲ್ಲ ವಿಧಗಳ ಕೋರಿಕೆಗಳನ್ನು ತೀರಿಸಿಕೊಳ್ಳುವ ಉಪಾಯಗಳನ್ನು ಹೇಳುತ್ತಾರೆಯೇ ಹೊರತು ವಾಂಛೆಯಿಲ್ಲದ ಸ್ಥಿತಿಯನ್ನು ಸೇರುವ ಮಾರ್ಗವನ್ನು ಕುರಿತು ಏಕೆ ಹೇಳುವುದಿಲ್ಲ?



೩

ನನ್ನ ಬಾಲ್ಯದಲ್ಲಿ ನನಗೆ ಅನೇಕ ವಿಷಯಗಳೆಂದರೆ ಭಯ. ಹಸಿವು ಎಂದರೆ ಭಯ, ಬಡತನ ಎಂದರೆ ಭಯ, ನಿರುದ್ಯೋಗ ಎಂದರೆ ಭಯ, ಅನಾರೋಗ್ಯ ಎಂದರೆ ಭಯ, ಅವಮಾನ ಎಂದರೆ ಭಯ, ಅಜ್ಞಾನ ಎಂದರೆ ಭಯ. ಇನ್ನೂ ತುಂಬಾ ತುಂಬಾ ಸಂಗತಿಗಳನ್ನು ಕುರಿತು ಭಯಪಟ್ಟೆ.

ಈಗಲೂ ಭಯಪಡುತ್ತಿರುವೆನಾದರೂ ಇವುಗಳಲ್ಲಿ ಯಾವುದೊಂದನ್ನು ಕಂಡೂ ಅಲ್ಲ, ಇವುಗಳೆಲ್ಲವನ್ನೂ ಒಮ್ಮೆಗೇ ನೋಡಿಯೂ ಅಲ್ಲ. ಈಗ ಇವುಗಳೆಂದರೆ ನನಗೆ ಸ್ವಲ್ಪವೂ ಭಯವಿಲ್ಲ.

ಪ್ರತ್ಯಕ್ಷವಾಗಿಯೂ ಪರೋಕ್ಷವಾಗಿಯೂ ಇವುಗಳೆಲ್ಲಕ್ಕೂ ಕಾರಣ ಭೂತನಾದ ಮಾನವ ಎಂದರೆ ಭಯಪಡುತ್ತೇನೆ.

ಆತನನ್ನು ಕಂಡು ಕರುಣೆ ಸಹ ಉಂಟಾಗುತ್ತದೆ.

೪

ಕೆಲಕೆಲವು ಪದಗಳಿಗೆ ಕಾಲ ಸರಿಯುತ್ತಿದ್ದಂತೆ ಅನುಭವ ಬೆಳೆಯುತ್ತಿದ್ದಂತೆ ಅರ್ಥಗಳು ಬದಲಾಗುತ್ತಿರುತ್ತವೆ.

ಏಕಾಂತ ಎಂಬ ಪದಕ್ಕೆ ಒಂದು ಕಾಲದಲ್ಲಿ ನನ್ನವರೂ ನನ್ನ ಬಂಧುಗಳೂ ಹೊರತು ಇನ್ನು ಯಾರೂ ನನ್ನ ಬಳಿ ಇಲ್ಲದಿರುವುದು ಎಂದುಕೊಂಡೆ.

ಸ್ವಲ್ಪ ಕಾಲದ ಬಳಿಕ ನನ್ನ ಬಂಧುಗಳೂ ನನ್ನವರೂ ಸಹ ನನಗೆ ದೂರವಾಗಿ ಇರುವುದೇ ಏಕಾಂತ ಎಂದುಕೊಂಡೆ.

ಆದರೂ ನಾನು ಒಂಟಿ ಎಂಬ ನಂಬಿಕೆ ನನ್ನಲ್ಲಿ ಉಂಟಾಗಲಿಲ್ಲ.



ನನ್ನೊಡನೆ ಎಷ್ಟೋ ಆಶೆಗಳಿವೆ. ಎಷ್ಟೋ ಆಲೋಚನೆಗಳಿವೆ. ಎಷ್ಟೆಷ್ಟೋ ಕನಸುಗಳಿವೆ. ಅವುಗಳಿಗೆ ವಾಸ್ತವ ರೂಪವನ್ನು ಕೊಡಬೇಕೆಂಬ ಕಾತರವಿದೆ. ಬಗೆಬಗೆಯ ನೆನಪುಗಳಿವೆ. ಇನ್ನೂ ಇನ್ನೂ ಬಹಳ ಬಹಳ ಇದೆ. ನನಗೆ ಇವುಗಳೆಲ್ಲ ನನ್ನೊಡನೆಯೂ ನನ್ನೊಳಗೂ ಇರುವಾಗ ನಾನು ಏಕಾಂತದಲ್ಲಿ ಇದ್ದಂತೆ ಹೇಗೆ ಆಗುತ್ತದೆ?



೫

ನಿಜವಾಗಿ ನಾನು ಸಂತೋಷವಾಗಿ ಸಂತೃಪ್ತಿಯಿಂದ ಬದುಕುತ್ತಿದ್ದೇನೋ ಅಥವಾ ಹಾಗೆ ಬದುಕುತ್ತಿರುವಂತೆ ನಟಿಸುತ್ತಿದ್ದೇನೋ ನನಗೆ ತಿಳಿಯದು.

ನನ್ನ ನಿಜಜೀವನಕ್ಕೂ ನಟನೆಯ ಬದುಕಿಗೂ ಮಧ್ಯೆ ಇರುವ ಗಡಿರೇಖೆ ಕೆಲವೆಡೆ ಸ್ಪಷ್ಟವಾಗಿಯೂ ಮತ್ತೆ ಕೆಲವೆಡೆ ಅಸ್ಪಷ್ಟವಾಗಿಯೂ ಇನ್ನು ಕೆಲವು ಕಡೆ ಸ್ಪಷ್ಟಾಸ್ಪಷ್ಟವಾಗಿಯೂ ಇರುವಂತೆ ಅನ್ನಿಸುತ್ತಿದೆ.

ಒಂದು ವಾಸ್ತವದ ಸುತ್ತ ಒಂದು ಸುಂದರ ಕಲ್ಪನೆ, ಒಂದು ಕೋಮಲ ಕಲ್ಪನೆಯ ಅಂಶದ ಪಾತಿಯಲ್ಲಿ ಕಠಿಣಾತಿಕಠಿಣವಾದ ಒಂದು ವಾಸ್ತವತೆಯ ಬೀಜ ಕಂಡುಬರುವ ಕಾರಣದಿಂದ ನಾನು ಆ ಎರಡನ್ನೂ ಖಚಿತವಾಗಿ ಬೇರ್ಪಡಿಸಲಾರದೆ ಇದ್ದೇನೆ.

೬

ಅವರು ಯಾರೋ ಬಂದು ನನ್ನನ್ನು ಕವಿತೆ ರಚಿಸಲು ಹೇಳಿದರು. "ಕವಿತೆ ಬರೆಯಲು ನನ್ನಿಂದ ಸಾಧ್ಯವಿಲ್ಲ" ಎಂದೆ. "ಹೋಗಲಿ, ನಿಮಗಿಷ್ಟ ಬಂದದ್ದು ಬರೆಯಿರಿ, ಅದನ್ನೇ ನಾವು ಪತ್ರಿಕೆಯಲ್ಲಿ ಪ್ರಕಟಿಸುತ್ತೇವೆ" ಎಂದರು. "ಪ್ರಯತ್ನಿಸುತ್ತೇನೆ" ಎಂದು ಅವರನ್ನು ಕಳಿಸಿಕೊಟ್ಟೆ.

ಇಷ್ಟು ವರ್ಷಗಳಿಂದ ಬರೆಯುತ್ತಿದ್ದರೂ ಬರೆಯುವುದರ ಬಳಿ ಸಾರಿದಾಗ ನನಗೂ ನನ್ನ ಪಾಲಿನ ಇಕ್ಕಟ್ಟುಗಳು ಇರುತ್ತವೆ. ಏನನ್ನು ಕುರಿತು ಬರೆಯಬೇಕು ಎಂಬುದು ಒಂದು ಸಮಸ್ಯೆ. ಆ ಅಂಶವನ್ನು ಕುರಿತು ಹೇಗೆ ಬರೆಯಬೇಕು ಎಂಬುದು ಮತ್ತೊಂದು ಸಮಸ್ಯೆ. ವಸ್ತುವಿನ ನಿರ್ಧಾರ ಆದ ಮೇಲೆ ಹೇಗೆ ಬರೆಯುವುದು ಎಂಬುದು ದೊಡ್ಡ ಸಮಸ್ಯೆ ಆಗದು.

ಅವರು ಕೇಳಿದ ಏನೋ ಒಂದನ್ನು ಗೀಚೋಣ ಎಂದು ಮೇಜಿನ ಮುಂದೆ ಕುಳಿತೆ. ಒಂದು ಅಕ್ಷರವನ್ನಾದರೂ ಬರೆಯುವ ಮೊದಲೇ ಬೀದಿಯಿಂದ ಒಂದು ಎಳೆಯ ರೋದನ ನನ್ನ ಲೇಖನಿಯನ್ನು ಪಕ್ಕಕ್ಕೆ ಜಾರಿಸಿತು. ಎದ್ದು ಬಂದು ನೋಡಿದೆ.

ಬೀದಿಯ ಮೂಲೆಯಲ್ಲಿ ಕಸದ ತೊಟ್ಟಿ. ಅದರ ತುಂಬ ಇರುವ ಒಣಗಿದ ಎಂಜಲೆಲೆಗಳಿಂದ ಅಗುಳನ್ನು ಆರಿಸಿಕೊಳ್ಳುತ್ತಿರುವ ಒಬ್ಬ ಕೃಶಕಾಯದ ತಾಯಿ, ಆ ತಾಯಿಯ ಒಂದು ಭುಜದ ಮೇಲಿಂದ ಜಾರುತ್ತಿರುವ ಕೊಳೆಯಾದ ಚೀಲ, ಎರಡನೆಯ ಭುಜಕ್ಕೆ ಅಂಟಿಕೊಂಡಿದ್ದ ಮತ್ತೊಂದು ಸಣಕಲಾದ ಎಳೆತನ, ಆ ಎಳೆಯ ತುಟಿಗಳ ಮೇಲೆ ಕಾಣುವ ಆಯಾಸ ಸೂಸುವ ಅಳು, ತನ್ನ ನಿಸ್ಸಹಾಯಕತೆಯನ್ನು ಕೋಪವಾಗಿ ಮಾರ್ಪಡಿಸಿಕೊಂಡು ಆ ಕೋಪವನ್ನು ಏಟನ್ನಾಗಿಸಿ ಮಗುವಿಗೆ ತಿನ್ನಿಸಿದ ತಾಯಿ –

ನಾನೇ ಆ ಮಗುವಾಗಿದ್ದರೆ ಸಾಂತ್ವನ ಮಾಡುವವರಿಗಾಗಿ ಕಣ್ಣಾಡಿಸುತ್ತಿರಲಿಲ್ಲವಾ ?

ಆ ಹಸುಕಂದನನ್ನು ನಾನು ಎತ್ತಿಕೊಂಡೆ. ನನ್ನ ಎಳೆತನವನ್ನು ನಾನೇ ಎತ್ತಿಕೊಂಡಂತೆ ಅನ್ನಿಸಿತು. ಆ ತಾಯಿಗೆ ನನ್ನ ಜೇಬಿನಲ್ಲಿ ಇದ್ದವೆಲ್ಲವನ್ನೂ ಕೊಟ್ಟುಬಿಟ್ಟೆ. ನನ್ನ ತಾಯಿಗೆ ನಾನು ನೀಡಿದಂತೆ ಅನ್ನಿಸಿತು.

ಆಕೆಯ ಕಣ್ಣತುಂಬ ದಿವ್ಯಕಾಂತಿ.

ಆ ಎಳೆ ತುಟಿಗಳ ಮೇಲೆ ದಿವ್ಯಹಾಸ.

ಈಗ ನನ್ನ ಸುತ್ತ ಕಾವ್ಯ ಹಬ್ಬಿಕೊಂಡಿದೆ.

ನನ್ನ ತುಂಬ ಕವಿತ್ವವೇ ಹೊರಹೊಮ್ಮುತ್ತಿದೆ.

ಆದರೆ ಈ ಮಧುರ ಅನುಭೂತಿಯನ್ನು ಅಕ್ಷರಗಳಲ್ಲಿ ಹುದುಗಿಸಲು ನನ್ನ ಕೈಲಾಗುತ್ತಿಲ್ಲ.



ಇಷ್ಟು ಕಾಲವೂ ವಸ್ತು ಸಿಗುವುದು ಕಷ್ಟ, ಅದು ಸಿಕ್ಕರೆ ಬರೆಯುವುದು ಸುಲಭ ಎಂದುಕೊಂಡೆ. ಈಗ ನನಗೆ ಶ್ರೇಷ್ಠವಸ್ತು ದೊರಕಿದೆ. ಆದರೆ ಅದನ್ನು ನಾನು ಅನುಭವಿಸಿದಷ್ಟು ಆತ್ಮೀಯವಾಗಿ, ಓದುವವರು ಕೂಡ ಅನುಭವಿಸಬಲ್ಲ ಸ್ಥಾಯಿಯಲ್ಲಿ ಬರೆಯುವುದು ಬಹಳ ಕಷ್ಟವೆನಿಸುತ್ತಿದೆ.

ತೆಲುಗು ಮೂಲ : **ಡಾ|| ರಾವೂರಿ ಭರದ್ವಾಜ್**
ಅನುವಾದ : **ಡಾ|| ಎಚ್. ಎಸ್. ಸುಜಾತಾ**
೫೩, 'ಸುಹಾಸ', ೪ನೇ ಮುಖ್ಯರಸ್ತೆ, ಮಾರುತಿ ದೇವಸ್ಥಾನದ ಬೀದಿ
ಕುವೆಂಪುನಗರ, ಮೈಸೂರು - ೫೭೦ ೦೦೯


ಚಿತ್ರ : ಅಮರನಾರಾಯಣ ನಂಗಲಿ

# ಸಾಹಿತ್ಯ ಮತ್ತು ಪರಿಸರ ಚಳುವಳಿ

ವಿ. ಚಂದ್ರಶೇಖರ ನಂಗಲಿ

"ಗಂಡ ಮಾದೇವರಾಯ ಏರಿದ ಬತ್ತಲು ಗುದರಿ" – ಕೆರೆಗೆ ಹಾರವಾದ ಭಾಗೀರಥಿಗೆ ಸಂಬಂಧಿಸಿದಂತೆ ಕೆಟ್ಟ ಕನಸು ಕಾಣುವ ಗಂಡ ಮಾದೇವರಾಯ ಹೌಹಾರಿ, ಸಂಕಟ-ಉದ್ವೇಗ-ತಲ್ಲಣಗಳಿಂದ ಕೂಡಿ, ತನ್ನ ನೆಚ್ಚಿನ ಕುದುರೆಗೆ ಹಲ್ಲಣವನ್ನು ಕೂಡ ಹೊದಿಸದೆ ಮನೆಗೆ ಹೊರಟುಬಂದುದನ್ನು ಹೇಳುವಾಗ 'ಬತ್ತಲು ಗುದರಿ' ಎಂಬ ಮಾತು ಬರುತ್ತದೆ. ನನ್ನ ದೃಷ್ಟಿಯಲ್ಲಿ ಸಾಹಿತ್ಯವು ಬತ್ತಲು ಗುದರಿಯಿದ್ದಂತೆ; ಎಲ್ಲ ಚಳುವಳಿಗಳು ಹಲ್ಲಣಕ್ಕೆ ಸಮಾನ. ಸಾಹಿತ್ಯವೆಂಬ ಬತ್ತಲು ಗುದರಿಗೆ ಯಾಜಮಾನ್ಯದ ನೆಲೆಗಳು (= ಚಳುವಳಿ – ವಿಮರ್ಶಾ ಪದ್ಧತಿ – ಜ್ಞಾನಶಾಖೆ ಇತ್ಯಾದಿ) ಹಲ್ಲಣ-ಕಡಿವಾಣ-ಕಣ್ಣಪಟ್ಟಿಗಳನ್ನು ತೊಡಿಸಿ ಜಟಕಾ ಕುದುರೆ ಮಾಡಿಕೊಂಡು ಸಾಹಿತ್ಯಸೃಷ್ಟಿಯ ಸವಾರಿ ನಡೆಸುತ್ತಿರುವ ಬಗೆಯೇ ನಮ್ಮ ಕಣ್ಣೆದುರಿಗಿದೆ.

ಉದ್ಘಾಟನಾ ಭಾಷಣ ಮಾಡಿದ ಪ್ರೊ॥ ಎಸ್. ಜಿ. ಸಿದ್ಧರಾಮಯ್ಯ ಮತ್ತು ಡಾ॥ ಹಿ. ಶಿ. ರಾಮಚಂದ್ರೇಗೌಡ – ಇವರಿಬ್ಬರು ಇಂದು ನಮ್ಮ ಸಾಹಿತ್ಯ ಕ್ಷೇತ್ರದಲ್ಲಿ ಎಲ್ಲ ಚಳುವಳಿಗಳು ಹೇಗೆ ಸ್ಥಗಿತಗೊಂಡಿವೆಯೆಂಬುದನ್ನು ಬಗೆಬಗೆಯಾಗಿ ವರ್ಣಿಸಿದ್ದಾರೆ. ಜಾಗತೀಕರಣದ ಪರ್ವದಿನಗಳಲ್ಲಿ ಚಳುವಳಿಗಳಿಗುಂಟಾದ ಸ್ಥಗಿತತೆ ಅಪಾಯಕಾರಿಯೆಂದು ಅಭಿಪ್ರಾಯ ಪಟ್ಟಿದ್ದಾರೆ. ಈ ಸ್ಥಗಿತತೆಯನ್ನು ಆಯಾಸ ಅಥವಾ ಬಳಲಿಕೆ ಎಂಬ ಮಾತಿನಿಂದಲೂ ವಿವರಿಸ ಬಹುದು. ಸಾಹಿತ್ಯವೆಂಬ ಬತ್ತಲು ಗುದರಿಯನ್ನು ಚಳುವಳಿಗಳು ಜಟಕಾ ಕುದುರೆ ಮಾಡಿಕೊಂಡಿದ್ದರಿಂದಲೇ ಈ ಸ್ಥಗಿತತೆ ಅಥವಾ ಬಳಲಿಕೆ ಉಂಟಾಗಿದೆ. "ಇದು ಕಾರಣ ನೆರೆ ಮೂರು ಲೋಕವೆಲ್ಲವು ಹಲ್ಲಣವ ಹೊತ್ತು ಬಳಲುತ್ತೈದಾರೆ" – ಎಂಬ ಅಲ್ಲಮಪ್ರಭುವಿನ ವಚನ ನಮ್ಮ ಸಾಹಿತ್ಯಕ್ಷೇತ್ರಕ್ಕೆ ಬಹು ಚೆನ್ನಾಗಿ ಒಪ್ಪುತ್ತದೆ. "ನೀರನೀಸುವ ದೇಹ ಬಳಲುವುದಲ್ಲದೆ ನೀರು ಬಳಲುವುದೆ ?" – ಎಂಬ ಅಲ್ಲಮನ ಮತ್ತೊಂದು ನುಡಿಯನ್ನಿಲ್ಲಿಯೇ ಸ್ಮರಿಸಿಕೊಳ್ಳಬೇಕು. 'ಸಾಹಿತ್ಯ'ವೆಂದರೆ ಜಲ; 'ಜಲ'ವೆಂದರೆ 'ಜೀವನ'. ಆದ್ದರಿಂದ ಸಾಹಿತ್ಯ- ಜಲ- ಜೀವನಗಳ ಮುಪ್ಪುರಿ ಬಂಧವನ್ನಿಲ್ಲಿ ಲಕ್ಷಿಸಬೇಕು. ಸಾಹಿತ್ಯವೆಂಬ ಜಲಕ್ಕೆ ಯಾವುದೇ ಬಗೆಯ ಸ್ಥಗಿತತೆ ಅಥವಾ ಬಳಲಿಕೆ ಇರುವುದಿಲ್ಲ. "ಇದು ನಿಚ್ಚಂ ಪೊಸತು ಅರ್ಣವಂಬೊಲ್ ಅತಿಗಂಭೀರಂ ಕವಿತ್ವಂ" – ಎಂಬ ಆದಿಕವಿ ಪಂಪನ ಮಾತು ಚಿರಾಯುವಾದುದು.

ಕನ್ನಡದ ಸಾರಸ್ವತಲೋಕದಲ್ಲಿಂದು ಎರಡು ಬಗೆಯ ವಿಮರ್ಶಾತ್ಮಕ ಅಧ್ಯಯನಗಳನ್ನು ಗುರುತಿಸಬಹುದು :

(i) ಸಂದರ್ಭಮೂಲ ಅಧ್ಯಯನ (= ಸಂದರ್ಭದಲ್ಲಿದ್ದು ಮೂಲಗಳನ್ನು ಹುಡುಕುವ ಅಧ್ಯಯನ)

(ii) ಸಂದರ್ಭ ಮುಕ್ತ ಅಧ್ಯಯನ (= ಸಂದರ್ಭದಲ್ಲಿದ್ದು ಮುಕ್ತವಾಗಿರುವ ಅಧ್ಯಯನ)

ಈ ಪರಿಭಾಷೆಗಳನ್ನು ಬಹು ಎಚ್ಚರದಿಂದ ಪರಿಭಾವಿಸಿ, ಗ್ರಹಿಸಬೇಕೆಂದು ಬಿನ್ನೈಸಿಕೊಳ್ಳಲಿಚ್ಛಿಸುತ್ತೇನೆ. ಸಾಹಿತ್ಯಕೃತಿಯನ್ನು ನಿರ್ದಿಷ್ಟ ಲೇಖಕ-ಜೀವನ-ಸಂದರ್ಭಗಳಲ್ಲಿಟ್ಟು ಮೂಲ ಅಧ್ಯಯನ ನಡೆಸುವ ವಿಧಾನವೇ ಸಂದರ್ಭಮೂಲ ಅಧ್ಯಯನ. ಸಂದರ್ಭ ಮೂಲ ಅಧ್ಯಯನದಲ್ಲಿ ಕೃತಿಕಾರನ ಆಶಯಗಳು, ಜೀವನ ಚರಿತ್ರೆಗೆ ಅನುಗುಣವಾದ ವ್ಯಕ್ತಿತ್ವದ ವಿವಿಧ ಹಂತಗಳು ಹಾಗೂ ನಿರ್ದಿಷ್ಟ ಸಾಮಾಜಿಕ/ಚಾರಿತ್ರಿಕ ಸಂದರ್ಭಗಳೆಂಬ ಸವಿವರ ದಾಖಲಾತಿಗಳು ಪ್ರಾಧಾನ್ಯತೆಯನ್ನು ಪಡೆಯುತ್ತವೆ. ಇದರ ಪರಿಣಾಮವಾಗಿ, ಸಾಹಿತ್ಯದ ಅಧ್ಯಯನದಲ್ಲಿ (೧) ಕೃತಿ ಮತ್ತು ಕೃತಿಕಾರರ ನಡುವೆ ಅಭೇದ ಕಲ್ಪನೆ, (೨) ಕೃತಿ ಮತ್ತು ಕೃತಿಕಾರರ ಜೀವನ ಚರಿತ್ರೆಗಳ ಅಭೇದ ಕಲ್ಪನೆ, (೩) ಕೃತಿ ಮತ್ತು ಕೃತಿಕಾರರು ಬದುಕಿದ ಸಾಮಾಜಿಕ/ಚಾರಿತ್ರಿಕ ಸಂದರ್ಭಗಳ ಅಭೇದ ಕಲ್ಪನೆ ಇನ್ನಿಲ್ಲದಂತೆ ಮುನ್ನುಗ್ಗಿ ಬರುತ್ತದೆ. ಇಂಥ ವಿಮರ್ಶಾಪದ್ಧತಿಯಲ್ಲಿ 'ವಸ್ತು'ವಿಗೆ ಸ್ಥಗಿತತೆ ಪ್ರಾಪ್ತಿಯಾಗುವುದಲ್ಲದೆ, 'ಸಾಹಿತ್ಯಕೃತಿ' ಆಟಕ್ಕುಂಟು ಲೆಕ್ಕಕ್ಕಿಲ್ಲವೆಂಬಂತೆ, ಮೂಲೆಗುಂಪಾಗಿಬಿಡುತ್ತದೆ. ಇತಿಹಾಸವನ್ನು ರೇಖಾತ್ಮಕ ಚಲನೆಯಂತೆ 'ಅನುಕ್ರಮಣಿಕೆ'ಯನ್ನಾಗಿ ನೋಡುವ ದೃಷ್ಟಿಗೆ 'ಚಾರಿತ್ರಿಕ ವಿಧಾನ'ವೆಂಬ ವಿಮರ್ಶಾ ಪದ್ಧತಿಯ ಸಮೃದ್ಧ ನಿದರ್ಶನ ಕನ್ನಡದ ಸಾರಸ್ವತ ಲೋಕದಲ್ಲಿದೆ. 'ಸಾಹಿತ್ಯ' ಮತ್ತು 'ಚಳುವಳಿ'ಗಳನ್ನು ಜನ್ಯ-ಜನಕ ಸಂಬಂಧದಲ್ಲಿ ಗುರುತಿಸಿಕೊಳ್ಳುವ ಎಲ್ಲ ಬಗೆಯ ಅಧ್ಯಯನಗಳು ಸಂದರ್ಭಮೂಲ ಅಧ್ಯಯನಗಳೇ ಸರಿ !

ಆದರೆ, ಸಂದರ್ಭಮುಕ್ತ ಅಧ್ಯಯನಗಳು ಯಾವುದೇ ಕಟ್ಟುಪಾಡುಗಳಿಗೆ ಒಳಗಾಗುವುದಿಲ್ಲ. 'ಸಂದರ್ಭಮುಕ್ತ' ಎಂಬುದನ್ನು 'ಸಂದರ್ಭಾತೀತ' (= ಸಂದರ್ಭದಿಂದ ಹೊರಗಾದ) – ಎಂದು ತಿಳಿಯಬಾರದು. ಸಂದರ್ಭದಲ್ಲಿದ್ದು ಮುಕ್ತವಾಗಿರುವ ಅಧ್ಯಯನವೆಂದು ಗ್ರಹಿಸಬೇಕು. ಇಲ್ಲಿ ಇತಿಹಾಸವನ್ನು ರೇಖಾತ್ಮಕ ಚಲನೆಯಂತೆ ಪರಿಭಾವಿಸದೆ, ಹಿಂದು-ಮುಂದುಗಳನ್ನು 'ಇಂದು' ಸಂಧಿಸಿ ನೋಡುವ ಐತಿಹಾಸಿಕ ಪ್ರಜ್ಞೆ ಬಹುಮುಖ್ಯವಾಗುತ್ತದೆ. ಅಲ್ಲಮನು ಹೇಳುವ "ಒಂದು ದಿನ ಒಳಕೊಂಡಿತ್ತು ನೋಡ!" ಎಂಬ ದೃಷ್ಟಿ ವಿಶೇಷವೇ ಸಂದರ್ಭಮುಕ್ತ ಅಧ್ಯಯನಗಳ ತಿರುಳಾಗಿದೆ. ಸಂದರ್ಭಮೂಲ ಅಧ್ಯಯನಗಳಲ್ಲಿ ಕಂಡುಬರುವ ಅಭೇದ ಕಲ್ಪನೆಯ ತ್ರಿವಿಧ ಮಾದರಿಗಳು ಇಲ್ಲಿ ನೇಪಥ್ಯಕ್ಕೆ ಸರಿಯುತ್ತವೆ : (೧) ಕೃತಿಕಾರನ ಆಶಯಕ್ಕೆ ಬದಲಾಗಿ ಕೃತಿಯ ಆಶಯಗಳು, (೨) ಜೀವನ ಚರಿತ್ರೆಗೆ ಬದಲಾಗಿ ದಟ್ಟವಾದ ಜೀವನಾನುಭವಗಳು, (೩) ನಿರ್ದಿಷ್ಟ ಸಂದರ್ಭಗಳಿಗೆ

> ನನ್ನ ಬಗೆಗಣ್ಣಿಗೆ ಪರಿಸರ ಚಳುವಳಿಗಳ ಕ್ರಾಂತಿಕಾರಿ ಕ್ರಿಯೆಗಿಂತಲೂ, ರಾಮಾಯಣ-ಮಹಾಭಾರತಗಳು ನಿರೂಪಿಸಿರುವ ಅರಣ್ಯಕಾಂಡ ಮತ್ತು ಅರಣ್ಯಪರ್ವಗಳು ಕ್ರಾಂತಿಕಾರಿ ತತ್ವಜ್ಞಾನದ ಪ್ರತಿಪಾದನೆಗಳಾಗಿವೆ. ಅಯೋಧ್ಯೆ ಮತ್ತು ಹಸ್ತಿನಾವತಿಗಳೆಂಬ ನಗರನಿಕೇತನಗಳಿಂದ ಹೊರಬಂದು ಅನಿಕೇತನರಾಗುತ್ತಲೇ ಶಕ್ತಿಸಂಪನ್ನರಾಗುವ ರಾಮಾದಿಗಳು ಮತ್ತು ಪಾಂಡವರ ನಿಸರ್ಗ ಸಾನ್ನಿಧ್ಯವೇ ಒಂದು ಮಹಾನ್ ಸ್ಫೂರ್ತಿಯಾಗಿದೆ. ಇಂಥದೊಂದು ಚೈತನ್ಯಶೀಲತೆ ಮತ್ತು ಸ್ಥಿತ್ಯಂತರಗಳನ್ನು ಆಧುನಿಕ ಕನ್ನಡ ಸಾಹಿತ್ಯದ ನೆಲೆಯಲ್ಲಿ ಸ್ವಾಮಿಯವರ ಹಸುರುಹೊನ್ನು, ಕುವೆಂಪು ಕಾದಂಬರಿಗಳು ಮತ್ತು ಕೃತಿಶ್ರೇಣಿ, ತೇಜಸ್ವಿಯವರ ಕರ್ವಾಲೋ ಮತ್ತು ಕರ್ವಾಲೋತ್ತರ ಕೃತಿಗಳು ಪರಿಣಾಮ ರಮಣೀಯವಾಗಿ ನಿರ್ವಹಣೆ ಮಾಡಿರುವುದು ಕಂಡುಬರುತ್ತದೆ.

ಬದಲಾಗಿ ನಿರಂತರ ಚಲನೆಯುಳ್ಳ ಸಂಸ್ಕೃತಿ ವಿಶಿಷ್ಟ ಕಾಣ್ಕೆಗಳು, ಸಂದರ್ಭಮುಕ್ತ ಅಧ್ಯಯನಗಳ ಗುರಿಯಾಗಿರುತ್ತವೆ. 'ಸಾಹಿತ್ಯ' ಮತ್ತು 'ಚಳುವಳಿ'ಗಳನ್ನು ವ್ಯಂಗ-ವ್ಯಂಜಕ ಸಂಬಂಧದಲ್ಲಿ ಕಂಡುಕೊಳ್ಳುವ ಬಗೆಯನ್ನು ಸಂದರ್ಭಮುಕ್ತ ಅಧ್ಯಯನದಲ್ಲಿ ಮನಗಾಣಬಹುದು.

-೨-

ಕನ್ನಡ ಸಂಸ್ಕೃತಿಯ ಇತಿಹಾಸದಲ್ಲಿ ಹನ್ನೆರಡನೇ ಶತಮಾನ ಮತ್ತು ಇಪ್ಪತ್ತನೇ ಶತಮಾನಗಳನ್ನು 'ಚಳುವಳಿಗಳ ಯುಗ'ವೆಂದು ಈಗಾಗಲೇ ವ್ಯಾಖ್ಯಾನಿಸಿರುವುದುಂಟು. ಹನ್ನೆರಡನೇ ಶತಮಾನದ ವಚನ ಚಳುವಳಿಯು ಇಡಿಯಾದ ಚಳುವಳಿಯಾಗಿದ್ದು, ಇಂದಿನ ವಿಚಾರ ಸಂಕಿರಣದ ಆಹ್ವಾನ ಪತ್ರಿಕೆಯಲ್ಲಿ ಮುದ್ರಿಸಿರುವ ಎಲ್ಲ ಚಳುವಳಿಗಳನ್ನು ಗರ್ಭೀಕರಿಸಿಕೊಂಡಿರುವ ಸಮಗ್ರ ಹೋರಾಟವಾಗಿದೆ. ದಲಿತ-ಬಂಡಾಯ-ಮಹಿಳೆ-ಭಾಷೆ-ರೈತ-ಪರಿಸರ ಸಂಬಂಧಿಯಾದ ಎಲ್ಲ ಚಳುವಳಿಗಳ ದೃಷ್ಟಿಯಿಂದ 'ವಚನ ಚಳುವಳಿ'ಯನ್ನು ಅರ್ಥೈಸಲು ಸಾಧ್ಯವಿದೆ. ಆದರೆ, ಇಪ್ಪತ್ತನೇ ಶತಮಾನದ ಚಳುವಳಿಗಳು ಬಿಡಿಬಿಡಿಯಾದ ಚಳುವಳಿಗಳಾಗಿದ್ದು, ಜಾತಿಪದ್ಧತಿಯ ತದ್ರೂಪು ಚಳುವಳಿಗಳೆಂದೇ ಕರೆಯಬೇಕಾಗಿದೆ. ಆದ್ದರಿಂದಲೇ ಇಂದಿನ ಚಳುವಳಿಗಳಿಗೆ ಒಗ್ಗಟ್ಟಿನ ಶಕ್ತಿ ಇಲ್ಲವಾಗಿದೆ. ಚಳುವಳಿಗಳು ಕೂಡ ಒಂದು ಸಂಸ್ಥೆಯಾಗಿ ಮಾರ್ಪಟ್ಟು, ಜಾತಿ ಸಂಸ್ಥೆಗಳಂತೆ, ಧಾರ್ಮಿಕ ಸಂಸ್ಥೆಗಳಂತೆ ಅನೇಕ ಕವಲುಗಳಾಗಿ ಸೀಳಿಹೋಗುತ್ತಿದೆ. ವಚನ ಚಳುವಳಿಯು ಬಹುರೂಪಿ ಮತ್ತು ಬಹು ಆಯಾಮಗಳನ್ನು ಹೊಂದಿದ್ದರೆ, ಸಮಕಾಲೀನ ಚಳುವಳಿಗಳು ಏಕರೂಪಿ ಮತ್ತು ಏಕ ಆಯಾಮದ ನೆಲೆಯಿಂದಾಗಿ ಸ್ಥಗಿತತೆ ಮತ್ತು ಬಳಲಿಕೆಯ ನಿದರ್ಶನವಾಗುಳಿದಿವೆ.

ಸಾಹಿತ್ಯ – ಚಳುವಳಿ
ಐಡಿಯ – ಆ್ಯಕ್ಷನ್
ಐಡಿಯಾಲಜಿಸ್ಟರು – ಆ್ಯಕ್ಟಿವಿಸ್ಟರು

ಮೇಲಿನ ತ್ರಿಮುಖ ಸಂಬಂಧವನ್ನು ಒಳಹೊಕ್ಕು ಆಳವಾಗಿ ಪರಿಶೀಲಿಸಿ ಅರ್ಥಮಾಡಿಕೊಳ್ಳಬೇಕು. ಇಲ್ಲಿ 'ನಾನು' (= ಅಹಂಕಾರ) ಮತ್ತು 'ನನ್ನದು' (= ಮಮಕಾರ) ಎಂಬ ಖಾಸಗಿ ಆಸ್ತಿಯ ದೃಷ್ಟಿ ಧೋರಣೆಗಳಿಗೆ ಅವಕಾಶವಿಲ್ಲ. ಬಸವ ಸಂಘಟನೆಯೆಂಬ ವಾಹನದ ಚಾಲಕ ಶಕ್ತಿಯಾಗಿರುವ ಅಲ್ಲಮಪ್ರಭುವಿನ ವಚನ ಈ ದೃಷ್ಟಿಯಿಂದ ಗಮನಾರ್ಹವಾಗಿದೆ:

*ನಾನೆಂಬಹಂಕಾರ ತಲೆದೋರಿದಲ್ಲಿ*
*ಅಟಮಟ ಕುಟಿಲ ಕುಹಕವೆಂಬ ಬಿರುಗಾಳಿ ಹುಟ್ಟಿತ್ತು.*
*ಆ ಬಿರುಗಾಳಿ ಹುಟ್ಟಲೊಡನೆ ಜ್ಞಾನಜ್ಯೋತಿ ಕೆಟ್ಟಿತ್ತು.*
*ಜ್ಞಾನಜ್ಯೋತಿ ಕೆಡಲೊಡನೆ*
*ನಾ ಬಲ್ಲೆ ಬಲ್ಲಿದರೆಂಬ ಅರುಹಿರಿಯರೆಲ್ಲರು*
*ತಾಮಸಕ್ಕೊಳಗಾಗಿ ಸೀಮೆದಪ್ಪಿ ಕೆಟ್ಟರು ಕಾಣಾ ಗುಹೇಶ್ವರ*

*– ಅಲ್ಲಮನ ವಚನಗಳು, ಡಾ|| ಎಲ್. ಬಸವರಾಜು, ೩೫೧*

ಸಕಲ ಜ್ಞಾನಗಳ ತಳಹದಿಯಂತಿರುವ ಕನಕನ ಕಾಣ್ಕೆಯೆಂದರೆ, "ನಾನು ಹೋದರೆ ಹೋಗಬಹುದು": ಆದರೆ, ಕ್ರಿಯಾಧಿಕ್ಯತೆಗೆ, ಚಳುವಳಿಗಳಿಗೆ ಸಿಕ್ಕುವ ವಿಶೇಷ ಪ್ರಾತಿನಿಧ್ಯಕ್ಕೆ ಪರವಶಗೊಂಡ ಚೇತನಗಳು 'ಆಚಾರ'ಕ್ಕೆ ಮಣೆ ಹಾಕುತ್ತಾ 'ವಿಚಾರ'ಕ್ಕೆ ಎರವಾಗುತ್ತಾರೆ. ಈ ತಪ್ಪು ದೃಷ್ಟಿಯನ್ನು ಬಹು ಹಿಂದೆಯೇ ಲೆನಿನ್ ಮತ್ತು ಮಾವೋ ಗುರುತಿಸಿದ್ದು ಹೀಗೆ ಎಚ್ಚರಿಸಿದ್ದಾರೆ:

(i) "ಕ್ರಾಂತಿಕಾರಿ ತತ್ವಜ್ಞಾನದ ಹೊರತು ಕ್ರಾಂತಿಕಾರಿ ಕ್ರಿಯೆ ಇಲ್ಲ" – ಲೆನಿನ್, ಅನು: ಎಸ್. ಜಿ. ಸರದೇಸಾಯಿ, ಭಾರತೀಯ ತತ್ವಜ್ಞಾನ ಪು. ೨೫, ನವಕರ್ನಾಟಕ ಪಬ್ಲಿಕೇಷನ್ಸ್.
(ii) "ನಮ್ಮ ಕೆಲಸದಲ್ಲಿ ಅದ್ಭುತ ಜಯಗಳಿಸಿದರೂ ಸಹ ನಾವು ಅಹಂಕಾರ ಮತ್ತು ಸೊಕ್ಕನ್ನು ಪ್ರಕಟಪಡಿಸಲು ಯಾವ ಕಾರಣವೂ ಇಲ್ಲ" – ಮಾವೋ ಸೂಕ್ತಿಗಳು, ಪು. ೧೪೮, ಮುದ್ರಣ ಜಿ. ಹೆಚ್. ರಾಮರಾವ್, ೧೯೭೪.

ಲೆನಿನ್ ಮತ್ತು ಮಾವೋ ಸೂಕ್ತಿಯನ್ನು ಪ್ರತಿಯೊಬ್ಬ ಆ್ಯಕ್ಟಿವಿಸ್ಟರು ಸದಾ ನೆನಪಿಸಿಕೊಳ್ಳುತ್ತಿರಬೇಕು; ಗರ್ವಕ್ಷಾಳನ ಮಾಡಿಕೊಳ್ಳುತ್ತಿರಬೇಕು.

-೩-

ಕನ್ನಡದ ಸಾರಸ್ವತ ಲೋಕದಲ್ಲಿ ಪರಿಸರ ಕಾಳಜಿಯ ಚಿಂತನೆಗಳಾಗಲಿ ಅಥವಾ ಪರಿಸರ ಚಳುವಳಿಯಾಗಲಿ ಎಂದಿನಿಂದ ಆರಂಭಗೊಂಡಿತೆಂದು ವಿಚಾರಮಾಡುವುದು ಸಂದರ್ಭಮೂಲ ಅಧ್ಯಯನವಾಗುವುದರಿಂದ ಈ ಬಗೆಯ ಚಾರಿತ್ರಿಕ ವಿಧಾನಕ್ಕೆ ವಿದಾಯ ಹೇಳುತ್ತಾ 'ಆಧುನಿಕ ಸಾಹಿತ್ಯ'ಕ್ಕಷ್ಟೇ ಪರಿಮಿತಗೊಳಿಸಿ ವಿಚಾರ ವಿನಿಮಯ ಮಾಡಲಿಚ್ಛಿಸುತ್ತೇನೆ. ಹಸಿರು ಕಾಳಜಿಯ ಚಿಂತನೆಗೆ ಸಂಬಂಧಿಸಿದಂತೆ, ಕನ್ನಡದ ಕಥನ-ಮಥನಗಳಲ್ಲಿ 'ವಂಶಾವಳಿ'ಯೊಂದನ್ನು ಗುರುತಿಸಬಹುದು:

(i) ಹಸುರುಹೊನ್ನು: ನಿರೂಪಕ ಮತ್ತು ವೆಲ್ತ ಪಿಳ್ಳೆ
(ii) ಮಲೆಗಳಲ್ಲಿ ಮದುಮಗಳು: ಮುಕುಂದಯ್ಯ ಮತ್ತು ನಾಯಿಗುತ್ತಿ
(iii) ಕರ್ವಾಲೋ: ಕರ್ವಾಲೋ ಮತ್ತು ಮಂದಣ್ಣ

ಆಧುನಿಕ ಸಾಹಿತ್ಯ ಪ್ರಕಾರಗಳೆನ್ನಬಹುದಾದ ಪ್ರಬಂಧ ಸಾಹಿತ್ಯ – ಪ್ರವಾಸ ಸಾಹಿತ್ಯ – ಶಿಕಾರಿ ಸಾಹಿತ್ಯಗಳಿಗಿಂತ ಬೇರೆಯಾದ 'ಚಾರಣ ಸಾಹಿತ್ಯ'ದ ಅತ್ಯುತ್ತಮ ಪ್ರತಿನಿಧಿ ಎನ್ನಬಹುದಾದ 'ಹಸುರುಹೊನ್ನು' (ಬಿ. ಜಿ. ಎಲ್. ಸ್ವಾಮಿ) ಉತ್ಕೃಷ್ಟ ಸಾಹಿತ್ಯ ಕೃತಿಯಾಗಿದೆ. ಆದರೆ, ಈ ಕೃತಿಗೆ ಸಂಬಂಧಪಟ್ಟ ವಿಶ್ಲೇಷಣೆ ಮತ್ತು ಒಳನೋಟಗಳನ್ನು ಅನಾವರಣಗೊಳಿಸುವ ನೈಜ ವಿಮರ್ಶೆ ಇದುವರೆಗೆ ಬಂದಿಲ್ಲ. ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆಯ ಅಧ್ಯಯನಕ್ಕೆ ಸಂಬಂಧಪಟ್ಟ ಯಾವ ಕೃತಿಯಲ್ಲೂ 'ಹಸುರುಹೊನ್ನು' ಕೃತಿಗೆ ಮನ್ನಣೆಯಿಲ್ಲ. ಕನ್ನಡ ವಿಮರ್ಶಾಪದ್ಧತಿಯ ಯಾಂತ್ರಿಕ ವಿಧಾನಗಳು ಮತ್ತು ಜಡ ವಿದ್ವಾಂಸರ ಸ್ಥಗಿತ ದೃಷ್ಟಿಕೋನಗಳಿಂದಾಗಿ 'ಹಸುರುಹೊನ್ನು' ಕೃತಿಗೆ ಸಲ್ಲಬೇಕಾದ ಸೂಕ್ತ ಗೌರವ ಸಿಕ್ಕಲಿಲ್ಲ. ವಾಸ್ತವವಾಗಿ, ಈ ಕೃತಿ ಪ್ರಕಟವಾದಾಗ ಯಾವ ಪ್ರಕಾರಕ್ಕೆ ಸೇರಿಸಬೇಕೆಂಬ ತರ್ಕಜಿಜ್ಞಾಸೆಯಲ್ಲಿ ಪ್ರವಾಸ ಸಾಹಿತ್ಯ – ವಿನೋದ ಸಾಹಿತ್ಯ – ವಿಜ್ಞಾನ ಸಾಹಿತ್ಯ – ಸಂಕೀರ್ಣ ಪ್ರಕಾರ ಇತ್ಯಾದಿಯಾಗಿ ಎಳೆದಾಡಿದ್ದುಂಟು. ಯಾವುದೇ ಒಂದು ನಿರ್ದಿಷ್ಟ ಪ್ರಕಾರಕ್ಕೆ ಸೇರದ ಮತ್ತು ಪ್ರಕಾರಾತ್ಮಕ ಅಧ್ಯಯನಗಳಿಗೆ ಸವಾಲೆಸೆದ 'ಹಸುರುಹೊನ್ನು' ಕೃತಿಯ ಸ್ವರೂಪದರ್ಶನವನ್ನು ಒಂದು ಮಾತಿನಲ್ಲಿ ಹೇಳುವುದಾದರೆ, ನಿಕೇತನ ನೆಲೆಗಳಿಂದ ಅನಿಕೇತನದೆಡೆಗೆ – ಎಂದು ವಿವರಿಸಬಹುದು. 'ನಿಕೇತನ ನೆಲೆ'ಗಳೆಂದರೆ ಬದುಕಿನ ವಿವಿಧಕ್ಷೇತ್ರಗಳಲ್ಲಿ ಮಾನವ ನಿರ್ಮಿತವಾದ ಕರ್ಮಠ ವ್ಯವಸ್ಥೆಗಳೆಂದು ತಿಳಿಯಬೇಕು. ಸಾಹಿತ್ಯ-ಶಿಕ್ಷಣ-ಪ್ರವಾಸ-ರಾಜಕೀಯ-ಅರಣ್ಯ ಇಲಾಖೆ-ವಿಜ್ಞಾನ-ಔದ್ಯಮಿಕ-ಔಷಧ-ತೋಟಗಾರಿಕೆ ಮುಂತಾದ ಕ್ಷೇತ್ರಗಳಲ್ಲಿರುವ 'ನಿಕೇತನ ನೆಲೆ'ಗಳಿಂದ ಬಿಡಿಸಿಕೊಂಡು ಅನಿಕೇತನವಾಗಿಬಿಡುವ ಹೊಸತನದ ಅರಿವು-ಅನುಭವಗಳು 'ಹಸುರುಹೊನ್ನು' ಕೃತಿಯಲ್ಲಿವೆ. ಅಧಿಕಾರಶಾಹಿಯ ವಿಡಂಬನೆಯನ್ನು ಗಾರ್ದಭ ಪುರಾಣದ ಕಾಮಿಕ್ ಶೈಲಿಯಲ್ಲಿ ನಿರ್ವಹಿಸಿರುವುದು ಕನ್ನಡ ಸಾಹಿತ್ಯಕ್ಕೆ 'ವಿನೂತನ ಕಥನ'ವಾಗಿದೆ. ಸ್ವಾಮಿಯವರು ಪರಿಚಯಿಸಿದ ವೆಲ್ತ ಪಿಳ್ಳೆ, ಕುವೆಂಪು ನಿರೂಪಿಸಿರುವ ನಾಯಿಗುತ್ತಿ ಮತ್ತು ತೇಜಸ್ವಿ ಕಾಣಿಸಿರುವ ಮಂದಣ್ಣ – ಇವರನ್ನು ತಾತ-ಮಗ-ಮೊಮ್ಮಗ ಸಾಲಿನಲ್ಲಿ ನೋಡಬೇಕು. ಇಂದು ಗಂಭೀರವಾಗಿ ನಡೆಯುತ್ತಿರುವ ಆದಿವಾಸಿ ಮತ್ತು ಬುಡಕಟ್ಟು ಅಧ್ಯಯನಗಳ ಧಾತು ಮತ್ತು ಧೋರಣೆಗಳನ್ನು ಮೇಲೆ ಹೇಳಿದ ಸಾಲಾವಳಿಯಲ್ಲೇ ಗುರುತಿಸಬೇಕು. ವೆಲ್ತ ಪಿಳ್ಳೆ ಮತ್ತು ನಾಯಿಗುತ್ತಿಯ ಜ್ಞಾನವನ್ನು ತಮಗಾಗಿ ಬಳಸಿಕೊಳ್ಳುವ ಬಗೆಯಿದ್ದರೆ, ಕರ್ವಾಲೋ ಮತ್ತು ಮಂದಣ್ಣರ ಸ್ನೇಹ-ಸಾಮರಸ್ಯ- ಸಂಘರ್ಷಗಳಲ್ಲಿ ಕೊಟ್ಟು ತೆಗೆದುಕೊಳ್ಳುವ ಒಲವು ನಿಲುವುಗಳಿವೆ. ಕಾಲಾನುಕ್ರಮಣಿಕೆಯ ಜ್ಞಾನವಾಗಲಿ ಅಥವಾ ಕರೆನ್ಸಿಯ ಪರಿಕಲ್ಪನೆಯಾಗಲಿ ಇಲ್ಲದ ವೆಲ್ತ ಪಿಳ್ಳೆ ಪಕ್ಕಾ **ಆದಿವಾಸಿ**ಯಂತೆ ಕಾಣುತ್ತಾನೆ. ಗೌಡರುಗಳ ಯಾಜಮಾನ್ಯದ ನೆಲೆಗೆ ತೆರೆದುಕೊಳ್ಳುವ ನಾಯಿಗುತ್ತಿ ಆರಣ್ಯಕ ಜಗತ್ತಿನಿಂದ ಮಲೆನಾಡಿನ ನಾಗರಿಕ ಜಗತ್ತಿಗೆ ಸ್ಥಿತ್ಯಂತರಗೊಳ್ಳುತ್ತಿರುವ **ಗಿರಿಜನರ ಪ್ರತೀಕ**ವಾಗಿ ಕಾಣುತ್ತಾನೆ. ಮಂದಣ್ಣನ ಹೆಗಲ ಮೇಲೆ ಕೈಹಾಕಿಕೊಂಡು ನಡೆಯುವ/ಕರ್ವಾಲೊತನವು ಉನ್ನತ ಶಿಕ್ಷಣಕ್ಕೆ ಅಗತ್ಯವಾದ ಡೌನ್ ಟು ಅರ್ತ್ ದೃಷ್ಟಿಯ ಪ್ರತಿಪಾದನೆಯಾಗಿರುವಂತೆಯೇ, ಕರ್ವಾಲೊಗೆ/ಕಣ್ಣು ತೆರೆಸುವ ಮಂದಣ್ಣನ ಮನಸ್ತಾಪವು ಸಾಮರಸ್ಯಕ್ಕಿಂತ ಭಿನ್ನವಾದ ಸಂಘರ್ಷವೂ ಆಗಿದೆ. ಎಲ್ಲಕ್ಕಿಂತ ಮುಖ್ಯವಾಗಿ ಆಧುನಿಕತೆಗೆ ತೆರೆದುಕೊಳ್ಳುತ್ತಿರುವ 'ಬುಡಕಟ್ಟು ಜನರ ಪ್ರತೀಕವಾಗಿ ಮಂದಣ್ಣ ಕಾಣುತ್ತಾನೆ.

ನನ್ನ ಬಗೆಗಣ್ಣಿಗೆ ಪರಿಸರ ಚಳುವಳಿಗಳ ಕ್ರಾಂತಿಕಾರಿ ಕ್ರಿಯೆಗಿಂತಲೂ, ರಾಮಾಯಣ-ಮಹಾಭಾರತಗಳು ನಿರೂಪಿಸಿರುವ ಅರಣ್ಯಕಾಂಡ ಮತ್ತು ಅರಣ್ಯಪರ್ವಗಳು ಕ್ರಾಂತಿಕಾರಿ ತತ್ವಜ್ಞಾನದ ಪ್ರತಿಪಾದನೆಗಳಾಗಿವೆ. ಅಯೋಧ್ಯೆ ಮತ್ತು ಹಸ್ತಿನಾವತಿಗಳೆಂಬ ನಗರನಿಕೇತನಗಳಿಂದ ಹೊರಬಂದು ಅನಿಕೇತನರಾಗುತ್ತಲೇ ಶಕ್ತಿಸಂಪನ್ನರಾಗುವ ರಾಮಾದಿಗಳು ಮತ್ತು ಪಾಂಡವರ ನಿಸರ್ಗ ಸಾನ್ನಿಧ್ಯವೇ ಒಂದು ಮಹಾನ್ ಸ್ಫೂರ್ತಿಯಾಗಿದೆ. ಇಂಥದೊಂದು ಚೈತನ್ಯಶೀಲತೆ ಮತ್ತು ಸ್ಥಿತ್ಯಂತರಗಳನ್ನು ಆಧುನಿಕ ಕನ್ನಡ ಸಾಹಿತ್ಯದ ನೆಲೆಯಲ್ಲಿ ಸ್ವಾಮಿಯವರ ಹಸುರುಹೊನ್ನು, ಕುವೆಂಪು ಕಾದಂಬರಿಗಳು ಮತ್ತು ಕೃತಿಶ್ರೇಣಿ, ತೇಜಸ್ವಿಯವರ ಕರ್ವಾಲೋ ಮತ್ತು ಕರ್ವಾಲೋತ್ತರ ಕೃತಿಗಳು ಪರಿಣಾಮ ರಮಣೀಯವಾಗಿ ನಿರ್ವಹಣೆ ಮಾಡಿರುವುದು ಕಂಡುಬರುತ್ತದೆ.

'ಇದು ನಿಚ್ಚಂ ಪೊಸತು...' ಎಂಬ ವಿವರಣೆ ಸಾಹಿತ್ಯಕ್ಕೆ ಮಾತ್ರವಲ್ಲ; ಚಳುವಳಿ ಮತ್ತು ಸಾಹಿತ್ಯ ವಿಮರ್ಶೆಗಳಿಗೂ ಅನ್ವಯಿಸುತ್ತದೆ. ನೂತನ ಸಾಹಿತ್ಯ – ನೂತನ ಚಳುವಳಿ – ನೂತನ ವಿಮರ್ಶೆಗಳು ನಿರಂತರವಾಗಿ ಸಂಭವಿಸುತ್ತಲೇ ಇರಬೇಕು. ಆಗ ನಮ್ಮ ಜೀವನವೂ ನೂತನವಾಗುಳಿಯುತ್ತದೆ; ಇಲ್ಲದಿದ್ದರೆ ಯಾಂತ್ರಿಕವಾಗುತ್ತದೆ. ಪರಿಸರ ವಿಜ್ಞಾನ

ಮತ್ತು ಪರಿಸರ ಚಳುವಳಿಯ ಒಂದು ಅಧ್ಯಯನ ಮತ್ತು ಹೋರಾಟಗಳೆರಡೂ ಆಗಿರುವ 'ಕಸದ ನಿರ್ವಹಣೆ' ಅಥವಾ 'ವೇಸ್ಟ್ ಮ್ಯಾನೇಜ್‌ಮೆಂಟ್' ಬಗ್ಗೆ ವಿಚಾರ ಮಾಡೋಣ. ಕಸ ಎಂದರೇನು ? ಎಂಬುದಕ್ಕೆ ವಿಜ್ಞಾನ ಲೇಖಕರು ಕೊಡುವ ವಿವರಣೆಯೆಂದರೆ ''ಉಪಯೋಗಕ್ಕೆ ಬಾರದ ತ್ಯಾಜ್ಯ ವಸ್ತುಗಳು'' ಎಂದು. ನನ್ನ ದೃಷ್ಟಿಯಲ್ಲಿ ಉಪಯೋಗಕ್ಕೆ ಬರುವ ತ್ಯಾಜ್ಯ ವಸ್ತುಗಳೇ ಕಸ ಎನಿಸಿಕೊಳ್ಳುತ್ತದೆ. ತಿಪ್ಪೆಯಲ್ಲಿ ದೇವರನ್ನು ಕಾಣುವ ಗ್ರಾಮೀಣ ದೃಷ್ಟಿಕೋನವನ್ನು (= ತಿಪ್ಪೇಸ್ವಾಮಿ, ತಿಪ್ಪೇರುದ್ರ, ತಿಪ್ಪಯ್ಯ ಇತ್ಯಾದಿ) ಸ್ಮರಿಸಿದಲ್ಲಿ ವೈಜ್ಞಾನಿಕ ವಿವರಣೆಯ ಇತಿಮಿತಿ ಅರಿವಾಗುತ್ತದೆ. ಇಷ್ಟಕ್ಕು 'ಕಸ'ವೆಂದರೆ ತ್ಯಾಜ್ಯವಸ್ತುಗಳೆಂದೇ ಏಕೆ ತಿಳಿಯಬೇಕು ? ಜಾಗತಿಕ ಯಜಮಾನ ಸಂಸ್ಕೃತಿ ಯನ್ನು ಲಕ್ಷಿಸಿದರೆ 'ಕಸ'ದ ಅರ್ಥವ್ಯಾಪ್ತಿಯಲ್ಲಿ ದೇಶಗಳು – ಭಾಷೆಗಳು – ವ್ಯಕ್ತಿಗಳು – ಕಲಿತ ವಿದ್ಯೆಗಳು ಇತ್ಯಾದಿಗಳೆಲ್ಲ ಸೇರಿಹೋಗುತ್ತವೆ. ಆದ್ದರಿಂದ ನಾವಿಂದು ಗ್ರಾಮೀಣ ರಂತೆ ಕಸವನ್ನು ಪೂಜಿಸುವ, ಪ್ರೀತಿಸುವ ಹೊಸ ಮನೋಧರ್ಮವನ್ನು ಅಳವಡಿಸಿಕೊಳ್ಳ ಬೇಕಾಗಿದೆ. ಕಸವನ್ನು ರಸವನ್ನಾಗಿ ಪರಿವರ್ತಿಸುವ ನೆಲೆಗಳನ್ನು ಹೊಸದಾಗಿ ಅರ್ಥೈಸಿ ಕೊಳ್ಳಬೇಕು. ಕುವೆಂಪು ಅವರ 'ಗೊಬ್ಬರ' ಎಂಬ ಕವಿತೆ ಈ ದೃಷ್ಟಿಯಿಂದ ಗಮನಾರ್ಹ ! ಮರದ ತುದಿಹೂವು ಮತ್ತು ಗೊಬ್ಬರಗಳ ಸಂವಾದದಲ್ಲಿ ಕುವೆಂಪು ಸೃಷ್ಟಿಸಿರುವ ಸಂಘರ್ಷ – ಪರಿವರ್ತನೆಗಳು ಕಸದ ನಿರ್ವಹಣೆಯ ಸ್ವರೂಪದರ್ಶನವಾಗಿದೆ. ಗೊಬ್ಬರವನ್ನು ದೇವರನ್ನಾಗಿ ಕಾಣುವ ಜನಪದ ದೃಷ್ಟಿಯೇ ಕುವೆಂಪು ಅವರಲ್ಲಿ ವಿಸ್ತರಣೆಗೊಳಗಾಗಿ 'ಶ್ರೀಸಾಮಾನ್ಯನೆ ಭಗವನ್ ಮಾನ್ಯಂ' – ಎಂಬ ಪರಿವರ್ತನೆಯಾಗಿದೆ. ಕುವೆಂಪು ಸಾಹಿತ್ಯದ 'ಕಸದ ನಿರ್ವಹಣೆ'ಯನ್ನು ಹೀಗೆ ವಿವರಿಸಬಹುದು : ಕಸವೆಂದು ತಿಳಿದ ಮಲೆನಾಡಿನಲ್ಲಿ ಬದುಕುತ್ತಾ, ಕಸವೆಂದು ತಿಳಿದ ಕನ್ನಡನುಡಿಯಲ್ಲಿ ಬರೆಯುತ್ತಾ, ಕಸವೆಂದು ತಿಳಿದ ಅಲಕ್ಷಿತ ಜನರು – ಅಲಕ್ಷಿತ ಬದುಕುಗಳನ್ನು ಸಾಹಿತ್ಯದ ವಸ್ತುವನ್ನಾಗಿ ಮಾಡಿಕೊಂಡ ಕುವೆಂಪು ಅವರ 'ವೇಸ್ಟ್ ಮ್ಯಾನೇಜ್‌ಮೆಂಟ್' ಇಂದಿನ ಪ್ರತಿಷ್ಠಿತ ಬ್ಯುಸಿನೆಸ್ ಮ್ಯಾನೇಜ್‌ಮೆಂಟ್ ಮತ್ತು ಹೋಟೆಲ್ ಮ್ಯಾನೇಜ್‌ಮೆಂಟ್‌ಗಿಂತಲೂ ಅತ್ಯುನ್ನತ ಗ್ರಹಿಕೆಯಾಗಿದೆ. ಕಸವನ್ನು ರಸವನ್ನಾಗಿ ಪರಿವರ್ತಿಸುವ ಜನಪದರ ಜೀವನ ಮೀಮಾಂಸೆಯೇ ಕುವೆಂಪು ಅವರಲ್ಲಿ ಸಾಹಿತ್ಯಮೀಮಾಂಸೆಯಾಗಿ ವಿಸ್ತರಿಸಿಕೊಂಡಿದೆ.

'ಜೀವವೈವಿಧ್ಯ ದಾಖಲಾತಿ'ಯನ್ನೇ ತೆಗೆದುಕೊಳ್ಳಿ. ಇದರಲ್ಲಿ ಸೃಜನಶೀಲತೆ ಮತ್ತು ಯಾಂತ್ರಿಕ ವಿಧಾನಗಳೆರಡೂ ಇವೆ. ವೈಜ್ಞಾನಿಕ ದೃಷ್ಟಿಯಿಂದ ನಡೆಸುವ ಜೀವವೈವಿಧ್ಯ ದಾಖಲಾತಿಗಳಿಗೂ ಕುವೆಂಪು ತಮ್ಮ ಸಾಹಿತ್ಯದಲ್ಲಿ ಚಿತ್ರಿಸಿರುವ ಜೀವವೈವಿಧ್ಯ ದಾಖಲಾತಿಗೂ ಗುಣಾತ್ಮಕ ಅಂತರವಿದೆ. ವಿಜ್ಞಾನಿಗಳ ದಾಖಲಾತಿಗಳು ಯಾಂತ್ರಿಕ ವಿಧಾನಗಳಿಗೆ ಉದಾಹರಣೆಯಾದರೆ, ಕುವೆಂಪು ಅವರ ದಾಖಲಾತಿಗಳು ಸೃಜನಶೀಲತೆ ಯಿಂದ ಕಂಗೊಳಿಸುತ್ತವೆ. ಇಂದು ಬಹುವ್ಯಾಪಿಯಾಗಿ ನಡೆಯುತ್ತಿರುವ ಜೀವವೈವಿಧ್ಯ ದಾಖಲಾತಿಗಳು ಬಗೆಬಗೆಯ ಪರಿಸರ ಸಂಘಟನೆಗಳ ಪರಿಣಾಮ ಫಲಗಳೆನ್ನಬಹುದು. ಆದರೆ, ಕುವೆಂಪು ಯಾವುದೇ ಕೊಂಬು ಕಹಳೆಗಳಿಲ್ಲದೆ ನಿಃಶಬ್ದವಾಗಿ ಸಾಧಿಸಿದ ಕಾದಂಬರಿ ಗಳಲ್ಲಿರುವ ಜೀವವೈವಿಧ್ಯ ದಾಖಲಾತಿಗಳು ಅತ್ಯಪೂರ್ವವಾಗಿವೆ. ತೀರ್ಥಹಳ್ಳಿಯ ಪರಿಸರದಲ್ಲಿ ಮಾಧವ ಗಾಡ್ಗೀಳರು ನಡೆಸಿದ ಜೀವವೈವಿಧ್ಯ ದಾಖಲಾತಿಗಳಿಗಿಂತಲೂ ತಮ್ಮ ಸಮಗ್ರ ಸಾಹಿತ್ಯದಲ್ಲಿ ಕುವೆಂಪು ಸೃಷ್ಟಿಸಿರುವ ಜೀವವೈವಿಧ್ಯ ದಾಖಲಾತಿಗಳು ಸಹ್ಯಾದ್ರಿಯಂತೆ ಉತ್ತುಂಗವಾಗಿವೆ.

ಕರ್ನಾಟಕದಲ್ಲಿಂದು ಎಲ್ಲೆಡೆ ಪರಿಸರ ಸಂಘಟನೆಗಳು, ಪರಿಸರವಾದಿಗಳು, ಪರಿಸರ ಚಳುವಳಿಗಳು ಪ್ರಕಟವಾಗುತ್ತಿವೆ. 'ಪಶ್ಚಿಮ ಘಟ್ಟ ಉಳಿಸಿ' – 'ಗಣಿಗಾರಿಕೆ ನಿಲ್ಲಿಸಿ' ಮುಂತಾದ ಚಳುವಳಿ ಗಳಲ್ಲಿ ಭಾಗವಹಿಸಿದವರ ಸಾಕ್ಷ್ಯಚಿತ್ರಗಳೂ, ಪ್ಲೆಕಾರ್ಡುಗಳೂ ಭಿತ್ತಿಪತ್ರಗಳೂ ಕರಪತ್ರಗಳೂ ಹರಿದುಬರುತ್ತಲೇ ಇವೆ. ಇವಕ್ಕೆ ಇತಿ ಏನಿದೆ ? ಮಿತಿ ಏನಿದೆ ? ಇವುಗಳ ಶುಷ್ಕ ದಾಖಲಾತಿಗಳು ಮತ್ತು ಸಮೀಕ್ಷೆಯ ಕಾರ್ಯಕ್ಕೆ ನಾನಿಲ್ಲಿ ಕೈಹಾಕಿಲ್ಲವೆಂಬುದನ್ನು ಸಹೃದಯರು ಗಮನಿಸುತ್ತಾರೆಂದು ನಂಬಿದ್ದೇನೆ. ಇಲ್ಲಿಗೆ ಬರೆಹವನ್ನು ನಿಲ್ಲಿಸಬಹು ದಾದರೂ, ಒಂದು ಮಾತು ಹೇಳಬೇಕೆನಿಸುತ್ತಿದೆ : ಚಳುವಳಿಗಳನ್ನು ಕುರಿತ ಗಂಭೀರ ಅಧ್ಯಯನಗಳು ಮತ್ತು ಸಂಬಂಧಪಟ್ಟ ಜ್ಞಾನಶಿಸ್ತುಗಳು ನಿರ್ಮಿಸುವ ಗಗನಚುಂಬಿ ಜ್ಞಾನಗೋಪುರಗಳನ್ನು ಸೃಜನಶೀಲ ಕೃತಿಗಳೆಂಬ ಬತ್ತಲು ಗುದರಿಗಳು ಸೆಪ್ಟೆಂಬರ್-೧೧ರ ಘಟನೆಯಂತೆ ಹೊಡೆದುರುಳಿಸುತ್ತವೆ. ಈ ಹೋಲಿಕೆಯನ್ನು ಎಳೆದಾಡದೆ, ಕಲಾತ್ಮಕ ವಿಧ್ವಂಸಕ ಕೃತ್ಯಕ್ಕಷ್ಟೆ ಪರಿಮಿತಗೊಳಿಸಿ ಗ್ರಹಿಸಬೇಕೆಂದು ವಿನಂತಿ.

(ದಿನಾಂಕ ೨೯-೦೬-೨೦೦೫ರಂದು ದಾವಣಗೆರೆಯಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಸಂಘಟಿಸಿದ್ದ 'ಕನ್ನಡ ಸಾಹಿತ್ಯ ಮತ್ತು ಜನಪರ ಚಳುವಳಿಗಳು' ವಿಚಾರ ಸಂಕಿರಣದಲ್ಲಿ ಮಾಡಿದ ಭಾಷಣವನ್ನಾಧರಿಸಿದ ಲೇಖನ.)

ಪಿ. ಚಂದ್ರಶೇಖರ ನಂಗಲಿ
೧೬, ಶ್ರೀಗೌರಿ, ಕನಕನಗರ, ಸರ್ ಎಂ. ವಿ. ಬಡಾವಣೆ
ಹೊಸಕೋಟೆ - ೫೬೨ ೧೧೪, ಬೆಂಗಳೂರು ಗ್ರಾಮಾಂತರ ಜಿಲ್ಲೆ

## ಎಲ್. ಬಸವರಾಜು

ಬುದ್ಧ ಪಂಪ ಅಲ್ಲಮ ಬಸವ ಅಕ್ಕ ನಿಜಗುಣರ
ಭಾವ ಸೆಲೆಯಲ್ಲಿ ಮಿಂದು ಹೋಂಪುಳಿ ಹೋದ ಮನ
ಸಾವು ನೋವು ಸುಖದ ಸವಿಗೆ ಸಮಚಿತ್ತದಲಿ
ನಕ್ಕುನಲಿವ ಬಸವರಾಜಗುಣ
ಋತುಮಾನದ ಎಲ್ಲ ವಿಪರೀತಕ್ಕೂ
ಎದೆಗುಂದದೆ ಹಾರುವ ಹಕ್ಕಿ ಪ್ರೀತಿಯ-ಸ್ವರವೆ
ಕಾಲತಟಾಯ್ಸಿ ಗಟ್ಟಿಯಾಗುವ ಬೀಟೆ ಮರವೆ

ಸ್ವಾಭಿಮಾನದ ಮುದ ಜೀವ ಹದ
ಎಂಥ ಚೇಗು ಎಂಥ ಬನಿ ಸಂತ ದನಿ
ತಳ ಶೋಧಿಸಿ ರಸ ಹೀರುವ ಬೇರು
ವಿಶಾಲ ಅವಕಾಶದಿ ತಳಿರ ತಲೆಮಾರು
ನೀಲ ಬಾನಂಗಳದಿ ಬೆಳಗುತ್ತಿವೆ ಏಸೊಂದು ಸೊಡರು
ಒಳಮನದ ಪದರಗಳ ತೆರೆದುತೋರುವ ಚದುರು

ವೃಷಭ ಗುರುವೆ ಕಲ್ಲಿದ್ದಲ ಕಾವು
ಠಾಣಾಂತರದಲ್ಲಿ ಬೆಳಕಿನ ಠರಾವು.

ಕೆ. ಎನ್. ಶಿವತೀರ್ಥನ್, ೪೩, ಎಂ. ಬ್ಲಾಕ್, ಎರಡನೇ ಹಂತ, ಕುವೆಂಪುನಗರ, ಮೈಸೂರು - ೫೭೦ ೦೨೩





# ಏಕಾಂಗಿ ಗ್ರಹ ಗುರು

ಡಾ|| ಬಿ. ಎಸ್. ಶೈಲಜಾ

**ಕ**ಳೆದ ತಿಂಗಳವರೆವಿಗೂ ಸಂಜೆಯ ಆಕಾಶದಲ್ಲಿ ರಾರಾಜಿಸುತ್ತಿದ್ದ ಮೂರು ಗ್ರಹಗಳಲ್ಲೀಗ ಉಳಿಯುವುದು ಗುರುಗ್ರಹ ಮಾತ್ರ. ಮಂಗಳ ಗ್ರಹವೂ ಇದೆ; ಆದರೆ ದಿಗಂತದ ಅಂಚಿನಲ್ಲಿ ಸಂಧ್ಯಾಪ್ರಕಾಶದಲ್ಲಿ ಅದನ್ನು ಪತ್ತೆ ಮಾಡುವುದೇ ಕಷ್ಟ. ಹಾಗಾಗಿ ಅದನ್ನು ಗಣನೆಗೆ ತೆಗೆದುಕೊಳ್ಳುವಂತೆಯೇ ಇಲ್ಲ. ಬರಿಗಣ್ಣಿಗೆ ಕಾಣುವ ಉಳಿದ ಮೂರು ಗ್ರಹಗಳು ಬೆಳಗಿನ ಜಾವ ಪೂರ್ವದಲ್ಲಿ ಕಾಣುತ್ತವೆ. ಆದ್ದರಿಂದ ಈ ತಿಂಗಳಲ್ಲಿ ಬೆಳಗಿನ ನೋಟ ಸ್ವಾರಸ್ಯಪೂರ್ಣವಾಗಿರುತ್ತದೆ. ಮೊದಲನೆಯ ತಾರೀಖಿನ ಸಂಜೆ ಚಿತ್ರಾ ನಕ್ಷತ್ರದ ಪಕ್ಕ ಚಂದ್ರನನ್ನು ನೋಡಬಹುದು. ಮರುದಿನ ಈ ಮಾರ್ಗದರ್ಶಿ ಗುರುಗ್ರಹದ ಜೊತೆಗೂಡುವುದು. ಬೆಳಗಿನ ಜಾವ ಪೂರ್ವ ದಿಕ್ಕಿನತ್ತ ದೃಷ್ಟಿಹರಿಸಿದರೆ ಶುಕ್ರಗ್ರಹವನ್ನು ಸುಲಭವಾಗಿ ಗುರುತಿಸಬಹುದು. ಸ್ವಲ್ಪ ಗಮನವಿಟ್ಟು ನೋಡಿದಿರಾದರೆ ಬುಧಗ್ರಹವೂ ಕಾಣುವುದು. ಆ ವಾರದುದ್ದಕ್ಕೂ ಶುಕ್ರ-ಬುಧಗಳು ಪರಸ್ಪರ 'ಸಮೀಪ'ವಾಗುವುದನ್ನು ಕಾಣಬಹುದು. ದಿನೇ ದಿನೇ ಈ 'ಸಾಮೀಪ್ಯ' ವ್ಯತ್ಯಾಸವಾಗುವುದನ್ನೂ ಸ್ಫುಟವಾಗಿ ಕಾಣಬಹುದು. ಹದಿನೈದರ ನಂತರ ಶುಕ್ರದಿಂದ ದೂರ ಸರಿಯುವ ಬುಧ ದಿಗಂತದ ಅಂಚಿನತ್ತ ಚಲಿಸುವುದು. ೨೦ರಂದು ಶನಿಗ್ರಹದ ಜೊತೆಯಾಗುವುದು. ೨೨ರಂದು ಬಾಲಚಂದ್ರ ಈ ಮೂರು ಗ್ರಹಗಳ ಜೊತೆಗೂಡುವ ಸಂದರ್ಭ ಛಾಯಾಗ್ರಹಣಕ್ಕೆ ಒಳ್ಳೆಯ ಅವಕಾಶ.

ಬುಧ ದಿನೇ ದಿನೇ ದಿಗಂತದ ಅಂಚಿಗೆ ಸರಿದಂತೆ, ಶನಿಗ್ರಹ ದಿನೇ ದಿನೇ ಮೇಲೇರುವುದು. ೨೦ರಂದು ಬುಧದ ಜೊತೆಯಾಗುವ ಶನಿ, ೨೬ರಂದು ಶುಕ್ರಗ್ರಹದ ಜೊತೆಯಾಗುವುದು. ಆ ಮುಂದೆ ಶುಕ್ರವನ್ನೂ ದಾಟಿ ಮೇಲೇರತೊಡಗುವುದು. ತಿಂಗಳ ಕೊನೆಗೆ ಶುಕ್ರ ಮಘ ನಕ್ಷತ್ರವನ್ನು ಸಮೀಪಿಸುವುದು.

ಮಾರ್ಗದರ್ಶಿ ಚಂದ್ರ ಈ ತಿಂಗಳಲ್ಲಿ ಅನೇಕ ಕಣ್ಣುಮುಚ್ಚಾಲೆ ಆಟ ನಡೆಸಲಿದೆ. ಮೊದಲನೆಯ ತಾರೀಖು ಮತ್ತು ೨೮ನೆಯ ತಾರೀಖು ಚಿತ್ರಾ ನಕ್ಷತ್ರ, ೪ರಂದು ಮತ್ತು ೩೧ರಂದು ಜ್ಯೇಷ್ಠಾ ನಕ್ಷತ್ರ, ಅಲ್ಲದೆ ೨೫ರಂದು ಮಂಗಳಗ್ರಹ, ೧೧ರಂದು ಯುರೇನಸ್‌ಗ್ರಹ – ಇವುಗಳನ್ನೆಲ್ಲಾ ಮರೆಮಾಡಲಿದೆ. ಆದರೆ ಈ ಯಾವ ಆಟವೂ ನಮ್ಮ ನೋಟವಲ್ಲ. ಅವು ಚಂದ್ರನ 'ಸಮೀಪ' ಇರುವುದನ್ನು ಮಾತ್ರ ನಾವು ನೋಡುವೆವು ೧೧ರಂದು ಯುರೇನಸ್ ಗ್ರಹವನ್ನು ಗುರುತಿಸಿಕೊಳ್ಳಿ. ಮುಂದಿನ ತಿಂಗಳು ೭ರಂದು ಹುಣ್ಣಿಮೆಯ ಚಂದ್ರನನ್ನು ನೋಡಲು ದೂರದರ್ಶಕ ಸಜ್ಜುಮಾಡಿಕೊಳ್ಳಿ. ಪಾರ್ಶ್ವಗ್ರಹಣ ಜೊತೆಗೆ ಯುರೇನಸ್ 'ಗ್ರಹಣ'ವೂ ಉಂಟು. (ಇದಕ್ಕೆ ಆಚ್ಛಾದನೆ ಎಂದು ಹೆಸರು).



ಬುಧ ಮತ್ತು ಶುಕ್ರ ಆಗಸ್ಟ್ ಮೊದಲ ವಾರದ ಬೆಳಗಿನ ಜಾವ ಹೀಗೆ ಕಾಣುವುವು

ಆಗಸ್ಟ್ ಎಂದರೆ ಅತಿ ಪ್ರಕಾಶಮಾನವಾದ ಉಲ್ಕಾವೃಷ್ಟಿಯನ್ನು ನೋಡಬಹುದಾದ ಸಮಯ. ಪರ್ಸಿಯ್ಯೆಡ್ ಎಂಬ ಹೆಸರಿನ ಈ ಉಲ್ಕೆಗಳು ೧೨ರಂದು ಗರಿಷ್ಠ ಪ್ರಮಾಣದಲ್ಲಿ ಕಾಣುತ್ತವೆ. ಮೋಡದ ಕಾಟವಿಲ್ಲದಿದ್ದಾಗ ಸುಮಾರು ೮ರಿಂದ ೧೨ನೆಯ ತಾರೀಖಿನವರೆಗೂ ಇವುಗಳ ಚಟುವಟಿಕೆ ಇದ್ದದ್ದೇ. ಬೆಳಗಿನ ಜಾವ ಹತ್ತು-ಹದಿನೈದು ನಿಮಿಷದ ಅವಧಿಯಲ್ಲಿ ಹತ್ತು ಉಲ್ಕೆಗಳಾದರೂ ಕಾಣಬಹುದು. ಈ ಉಲ್ಕೆಗಳೆಲ್ಲಾ ಪರ್ಸಿಯುಸ್ (ಪಾರ್ಥ) ಪುಂಜದಿಂದ ಹೊರಟಂತೆ ಕಾಣುವುದರಿಂದ ಈ ಹೆಸರಿದೆ. ಇದೇ ರೀತಿ ಇನ್ನೊಂದು ಅಕ್ವಾರಿಡ್ಸ್ ಎಂಬ ಉಲ್ಕಾವೃಷ್ಟಿಯೂ ಇದೇ ಅವಧಿಯಲ್ಲಿ ಕಾಣಲಿದೆ.

ಆಗಸ್ಟ್ ೧೮-೧೯ರಂದು ಮಧ್ಯಾಹ್ನ ನಿಮ್ಮ ನೆರಳಿನ ಉದ್ದವನ್ನು ಅಳೆಯುವ ಪ್ರಯತ್ನ ಮಾಡಿ, ಹೊಸ ವಿಷಯವೊಂದು ತಿಳಿದಂತಾಗುತ್ತದೆ. ಮೋಡಗಳೇನಾದರೂ ಸಂಜೆ ಬಿಡುವು ಕೊಟ್ಟರೆ ಆಕಾಶಗಂಗೆಯ ಸೌಂದರ್ಯವನ್ನು ವೀಕ್ಷಿಸಲು ಮರೆಯದಿರಿ. ವೃಶ್ಚಿಕ-ಧನುರಾಶಿಗಳ ಭಾಗದಲ್ಲಿ ಮೋಡದಂತೆ ಕಾಣುವ ಭಾಗ ನೋಡಲು ಚೆನ್ನ. ಈ ಗಂಗೆಯ ಒಂದು ಭಾಗ ಈಶಾನ್ಯದತ್ತ ಹರಿದಿದೆ. ಗರುಡ, ರಾಜಹಂಸ ಮತ್ತು ವೀಣಾ – ಈ ಮೂಲಕ ಹಾದುಹೋಗುತ್ತವೆ. ಇನ್ನೊಂದು ಭಾಗ ತೀರಾ ದಕ್ಷಿಣಕ್ಕೆ ಕಿನ್ನರ, ತ್ರಿಶಂಕುಗಳತ್ತ ಸಾಗುತ್ತದೆ. ಕನ್ಯಾ, ಸಹದೇವಗಳಿರುವ ಭಾಗಕ್ಕೂ ಈ ಆಕಾಶಗಂಗೆಯ ಭಾಗಗಳಿಗೂ ವ್ಯತ್ಯಾಸ ಬಹಳ ಸ್ಪಷ್ಟವಾಗಿ ತಿಳಿಯಬೇಕಾದರೆ ಆಕಾಶ ಶುಭ್ರವಾಗಿರಬೇಕು. ಚಂದ್ರನೂ ಇರಬಾರದು.




ಗರುಡ ಅಥವಾ ಅಕ್ವಿಲಾ ಪುಂಜದಲ್ಲಿ ಗೆರೆ ಹಾಕಿದಂತೆ ಕಾಣುವ ಮೂರು ನಕ್ಷತ್ರಗಳು ಕಾಣುತ್ತವೆ. ಅವುಗಳಲ್ಲಿ ಮಧ್ಯದ್ದು ಪ್ರಕಾಶಮಾನವಾದ ಶ್ರವಣ ನಕ್ಷತ್ರ. ಹುಣ್ಣಿಮೆಯಂದು ಚಂದ್ರ ಈ ನಕ್ಷತ್ರದ ಸಮೀಪ ಇರುತ್ತದೆಯಾದ್ದರಿಂದ ಇದು ಶ್ರಾವಣ ಮಾಸ. ೧೬ರಂದು ಚಂದ್ರ-ರೋಹಿಣಿ ನಕ್ಷತ್ರದ ಸಮೀಪ ಇರುವಾಗ ಅವುಗಳ ಉದಯ ನಡುರಾತ್ರಿಗೆ ಎಂಬುದನ್ನು ಗಮನಿಸಿ.' ಇದೇ ಜನ್ಮಾಷ್ಟಮಿಯ ಗುಟ್ಟು.

### ಖಗೋಳ ದಿನಚರಿ

ಆಗಸ್ಟ್ ೧ ಚಿತ್ರಾ-ಚಂದ್ರ ಜೋಡಿ

೨ ಚಾಂದ್ರಮಾಸದ ಪ್ರಥಮ ಪಾದ (ಚಂದ್ರಾಸ್ತ ನಡುರಾತ್ರಿಗೆ) ಗುರು-ಚಂದ್ರ ನಡುವೆ ೫ ಡಿಗ್ರಿ ಕೋನ

೪ ಜ್ಯೇಷ್ಠಾ-ಚಂದ್ರ ಜೋಡಿ

೭ ಬುಧಗ್ರಹದ ಗರಿಷ್ಠ ಕೋನೋನ್ನತಿ

೯ ಹುಣ್ಣಿಮೆ ೧೬:೨೪ಕ್ಕೆ; ಶುಕ್ರ-ಬುಧ ಜೋಡಿ

೧೦ ಚಂದ್ರ-ಭೂಮಿ ದೂರ ಕನಿಷ್ಠ

೧೧ ಯುರೇನಸ್ ಗ್ರಹ ಚಂದ್ರನ ಪಕ್ಕ

೧೨ ಉಲ್ಕಾವೃಷ್ಟಿಯ ಗರಿಷ್ಠ ಚಟುವಟಿಕೆ

೧೬ ಚಾಂದ್ರಮಾಸದ ಕೊನೆಯ ಪಾದ (ಚಂದ್ರೋದಯ ನಡುರಾತ್ರಿಗೆ)

೨೦ ಶನಿ-ಬುಧ ನಡುವೆ ಅರ್ಧ ಡಿಗ್ರಿಕೋನ

೨೨ ಬಾಲಚಂದ್ರ, ಶುಕ್ರ, ಶನಿ, ಬುಧ – ಇವುಗಳ ಗುಂಪು

೨೪ ಅಮಾವಾಸ್ಯೆ ೦೦:೪೦ಕ್ಕೆ

೨೫ ಚಂದ್ರ-ಮಂಗಳ ನಡುವೆ ಕನಿಷ್ಠ ಕೋನ

೨೬ ಶನಿಯ ಪಕ್ಕ ಶುಕ್ರ

೨೮ ಚಿತ್ರಾ-ಚಂದ್ರ ಜೋಡಿ

೩೦ ಗುರು-ಚಂದ್ರ ನಡುವೆ ೫ ಡಿಗ್ರಿ

೩೧ ಚಾಂದ್ರಮಾಸದ ಪ್ರಥಮ ಪಾದ; ಜ್ಯೇಷ್ಠಾ-ಚಂದ್ರಜೋಡಿ

ಸೆಪ್ಟೆಂಬರ್ ೧ ಶುಕ್ರ-ಮಘ ಜೋಡಿ

೭ ಚಂದ್ರಗ್ರಹಣ; ಚಂದ್ರನ ಪಕ್ಕ ಯುರೇನಸ್

ಡಾ|| ಬಿ. ಎಸ್. ಶೈಲಜಾ, ಜವಾಹರಲಾಲ್ ನೆಹರೂ ತಾರಾಲಯ, ಬೆಂಗಳೂರು - ೧

# ವಿಶ್ವಂಭರ
# ಒಂದು ಪರಿಚಯ

## ತೆಲುಗಿನ ಜ್ಞಾನಪೀಠ ಪ್ರಶಸ್ತಿ ವಿಜೇತ ಕೃತಿಯ ಪರಿಚಯ

**ಡಾ|| ಅರ್ಕಸಾಲಿ ವೃಷಭೇಂದ್ರಾಚಾರ್**

**ಡಾ||** ಸಿ. ನಾರಾಯಣ ರೆಡ್ಡಿಯವರ 'ವಿಶ್ವಂಭರ' ಕಾವ್ಯವು ಜ್ಞಾನಪೀಠ ಪ್ರಶಸ್ತಿಯನ್ನು ಪಡೆದು ಎಲ್ಲರ ಗಮನ ಸೆಳೆದಿದೆ. ಸ್ವಾತಂತ್ರ್ಯೋತ್ತರ ಕಾಲದಲ್ಲಿ ಕಾವ್ಯ ರಚನೆಯನ್ನು ಪ್ರಾರಂಭಿಸಿದ ಸಿ.ನಾ.ರೆ.ಯವರದು ಸಮೃದ್ಧ ಕಾವ್ಯಸೃಷ್ಟಿ. ನವ್ವನಿ ಪುವ್ವು, ವೆನ್ನೆಲವಾಡ, ಋತುಚಕ್ರಮು, ವಿಶ್ವನಾಥ ನಾಯಡು, ಕರ್ಪೂರ ವಸಂತರಾಯಲು, ನಾಗಾರ್ಜುನ ಸಾಗರಮು, ಅಕ್ಷರಾಲ ಗವಾಕ್ಷಾಲು, ದಿವ್ವೆಲ ಮುವ್ವಲು, ಜಾತಿ ರತ್ನಂ, ಮಧ್ಯ ತರಗತಿ ಮಂದಹಾಸ, ಮರೋ ಹರಿವಿಲ್ಲು, ಮನಿಷೀ-ಚಿಲಕ, ಭೂಮಿಕ, ಮಥನಂ, ಮಾರ್ಪು ನಾ ತೀರ್ಪು, ಉದಯಂ ನಾ ಹೃದಯಂ, ಮಂಟಲೂ ಮಾನವುಡೂ ಇತ್ಯಾದಿ ಅನೇಕ ಕವನ ಸಂಕಲನಗಳನ್ನು ಪ್ರಕಟಿಸಿದ್ದಾರೆ.

ಭಾವುಕತೆ ಮತ್ತು ಅಭ್ಯುದಯಗಳೆರಡನ್ನೂ ಸಮಾನವಾಗಿ ಪರಿಭಾವಿಸಿ ಕಾವ್ಯಾಭಿವ್ಯಕ್ತಿ ನೀಡಿದವರು ಸಿನಾರೆ. ಇವರಲ್ಲಿ ಕೃಷ್ಣಶಾಸ್ತ್ರಿಯವರ ಭಾವ ಮತ್ತು ದಾಶರಥಿಯವರ ಭಾವತೀವ್ರತೆಗಳು ಮೇಳವಿಸಿವೆ ಎಂಬುದು ವಿಮರ್ಶಕರ ಅಭಿಪ್ರಾಯ. ಇವರ ಕವನ ಗಳಲ್ಲೆಲ್ಲಾ ಕೇವಲ ಸೌಂದರ್ಯೋಪಾಸನೆಯಲ್ಲದೆ ವಾಸ್ತವಿಕತೆಯನ್ನು ಮರೆಯದ ಅನುಭೂತಿ ಇದೆ.

ಸಿನಾರೆಯವರು ತಮ್ಮ ವಿಶ್ವಂಭರ ಕಾವ್ಯದ ಮೂಲಕ ತಮ್ಮ ಸಿದ್ಧಿಯ ತುದಿಯನ್ನು ಮುಟ್ಟಿದರೆನ್ನಬಹುದು. ೧೯೮೦ರಲ್ಲಿ ಹೊರಬಂದ ಈ ಕೃತಿ ಅನೇಕ ಪ್ರಶಸ್ತಿಗಳನ್ನು ಪಡೆದು ೧೯೮೮ರಲ್ಲಿ ಭಾರತದ ಅತ್ಯುನ್ನತ 'ಜ್ಞಾನಪೀಠ ಪ್ರಶಸ್ತಿ'ಯನ್ನೂ ಪಡೆಯಿತು. ಅಲ್ಲಿಂದ ಸಿನಾರೆಯವರು ವಿಶ್ವಂಭರ ಕವಿಯೆಂದೇ ಪ್ರಸಿದ್ಧಿ ಪಡೆದರು. ಇದು ಬೇರೆ ಬೇರೆ ಭಾಷೆಗಳಿಗೂ ಅನುವಾದಗೊಂಡಿದೆ.

*　　*　　*

ವಿಶ್ವಂಭರದ ವಸ್ತು ವಿಷಯವನ್ನು ಕುರಿತು ಸಿನಾರೆ ಯವರು ಪ್ರಸ್ತಾವನೆಯಲ್ಲಿ ಹೀಗೆ ಹೇಳಿದ್ದಾರೆ – ''ಈ ಕಾವ್ಯಕ್ಕೆ ನಾಯಕ ಮಾನವ. ರಂಗಸ್ಥಳ ವಿಶಾಲ ವಿಶ್ವಂಭರ. ಇತಿ ವೃತ್ತ ತೇದಿಗಳ ಗೊಡವೆಯಿಲ್ಲದ, ಹೆಸರುಗಳ ಅಗತ್ಯವಿಲ್ಲದ ಮನುಷ್ಯನ ಕಥೆ ಇದು. ಈ ಕಥೆಗೆ ನೇಪಥ್ಯ ಪ್ರಕೃತಿ. ಮನುಷ್ಯನು ಧರಿಸುವ ವಿವಿಧ ಭೂಮಿಕೆಗಳಿಗೆ ಮೂಲಧಾತುಗಳು ಮನಶ್ಶಕ್ತಿಗಳು.

''ಅಲೆಗ್ಸಾಂಡರ್, ಕ್ರಿಸ್ತ, ಅಶೋಕ, ಸಾಕ್ರಟೀಸ್, ಬುದ್ಧ, ಲಿಂಕನ್, ಲೆನಿನ್, ಮಾರ್ಕ್ಸ್, ಗಾಂಧಿ – ಹೀಗೆ ಹೀಗೆ ಎಷ್ಟೆಷ್ಟು ರೂಪಗಳೊ ಮನುಷ್ಯನಿಗೆ.

''ಆದಿಮ ದೆಸೆಯಿಂದ ಆಧುನಿಕ ದೆಸೆಯವರೆಗೆ ಮನುಷ್ಯಮಾಡಿದ ಪ್ರಸ್ಥಾನಗಳು ಈ ಕಾವ್ಯದೊಳಗಿನ ಪ್ರಕರಣಗಳು.

''ಮನುಷ್ಯಸಾಧನೆ ತ್ರಿಮುಖಿ– ಕಲಾತ್ಮಕ, ವೈಜ್ಞಾನಿಕ, ಆಧ್ಯಾತ್ಮಿಕ. ಈ ಸಾಧನೆಯಲ್ಲಿ ಹೆಜ್ಜೆಹೆಜ್ಜೆಗೂ ಎದುರು ಹೊಡೆತಗಳು. ಹೊಡೆತ ತಿಂದರೂ ಮನುಷ್ಯ ಹಿಮ್ಮುಖಿ ನಾಗಲಿಲ್ಲ... ವಚನ ಕವಿತೆಯಲ್ಲಿ (ಕನ್ನಡದ ನವ್ಯ ಛಂದಸ್ಸಿನಂತೆ) ಒಂದು ಸಮಗ್ರ ಕಾವ್ಯ ಬರೆಯ ಬೇಕೆಂಬ ನನ್ನ ಆಕಾಂಕ್ಷೆ ಹೀಗೆ ರೂಪ ತಳೆದಿದೆ.''

ಇಡೀ ವಿಶ್ವದ ಮಾನವನ ಸಮಗ್ರ ಚರಿತ್ರೆ ಮತ್ತು ಮಾಡಿದ ಸಾಧನೆಗಳ ಏಳುಬೀಳುಗಳ ಸಿಂಧುವಿಗೆ ಕಾವ್ಯದ ಬಿಂದುರೂಪವಿದು. ಮಹಾಪರ್ವತವೊಂದನ್ನು ಅಂಗೈಯಗಲದ ಕಾವ್ಯಕನ್ನಡಿಯಲ್ಲಿ ಹಿಡಿದಿಡಲು ಮಾಡಿದ ವಿಶಿಷ್ಟ ಪ್ರಯತ್ನವಿದು. ಪ್ರತಿ ಸಾಲೂ ರೂಪಕ, ಉಪಮೆ, ಪ್ರತಿಮೆಗಳ ಮಣಿಮಾಲೆಯಂತೆ ಕಾವ್ಯ ಸಾಗುತ್ತದೆ. ಕಾವ್ಯಕಲೆಯಿಲ್ಲದ ಯಾವ ಸಾಲೂ ಇಲ್ಲಿಲ್ಲ. ಎಲ್ಲಿಯೂ ಅತಿ ನಿಗೂಢವಾಗದೆ ಸಂಕೀರ್ಣವಾಗದೆ ಧ್ವನಿಪೂರ್ಣವಾಗಿ ಹೇಳುವುದನ್ನು ಮನಮುಟ್ಟುವಂತೆ, ಪರಿಣಾಮಕಾರಿಯಾಗುವಂತೆ ಕವಿ ಹೇಳುತ್ತಾರೆ. ಅಂತ್ಯ ಪ್ರಾಸಗಳು, ಶಬ್ದ ಸೌಷ್ಠವತೆಯೂ ಕಾವ್ಯಕ್ಕೆ ನಾದ ಮಾಧುರ್ಯವನ್ನು ನೀಡಿವೆ.

ನೂರು ಪುಟಗಳುದ್ದಕ್ಕೆ ಹರಿದಿರುವ ಈ ಏಕವಸ್ತು ಚಿಂತನಧಾರೆಯಲ್ಲಿ ಐದು ಪ್ರಕರಣಗಳಿವೆ. ೧ನೇ ಪ್ರಕರಣದಲ್ಲಿ ಮಾನವನು ಭೂಮಿಯ ಮೇಲೆ ಉಗಮ ವಾಗುವ ಮುನ್ನ ಅವನ ಬರುವಿಕೆಗಾಗಿ ಪ್ರಕೃತಿಯೆಲ್ಲ ಕಾಯುತ್ತಿದೆಯೇನೋ ಎಂಬ ವರ್ಣನೆ, ಆದಮ್ ಮತ್ತು ಈವರ ಕಥನ, ನಿಷಿದ್ಧ ಫಲವನ್ನು ಅಶರೀರ ವಾಣಿಯ ಎಚ್ಚರಿಕೆಯನ್ನೂ ಧಿಕ್ಕರಿಸಿ ತಿಂದು ಮಾನವ ಸಂತಾನಕ್ಕೆ ಮತ್ತು ಸಂಸ್ಕೃತಿಗೆ ನಾಂದಿ ಹಾಡಿದ್ದು, ಪ್ರಣಯಾನಂದ, ನಿಸರ್ಗದ ಮಡಿಲಿನಲ್ಲಿ ಬೆಳೆದದ್ದು, ಪ್ರಕೃತಿಯ ಕರಾಳ ಮುಖದ ಅನುಭವ ಮತ್ತು ಜೀವ ಚೈತನ್ಯದ ಅಭಯ ಬೋಧೆ, ಮರದ ಪೊಟರೆ, ಗವಿ, ನದೀ ತೀರ, ಗುಡಿಸಲುಗಳ ವಾಸ, ಕ್ರೂರಮೃಗ ಗಳೊಡನೆ ಹೋರಾಟ, ನಾಗರಿಕತೆಯ ಕಡೆಗೆ ಸಂಕ್ರಮಣ ಇವೆಲ್ಲವುಗಳ ವರ್ಣನೆ ಮೂಡಿಬಂದಿದೆ.

ಇಷ್ಟಕ್ಕೂ ನಾನಾರು
ನಾನಾವ ಬಾನ ಮನೆಯವನು
ಯಾವ ಕಾಲದ ಕೈಗೂಸೋ
ಹುಟ್ಟಿದ್ದ ಯಾವ ಶಕ್ತಿ
ಬೀಸಿ ಒಗೆದ ಚೆಂಡು ನಾನು

ಎಂದು ಮಾನವ ತನ್ನ ಮೂಲದ ಬಗ್ಗೆ ಜಿಜ್ಞಾಸೆಗೆ ತೊಡಗುತ್ತಾನೆ.

ಹೀಗೆ ಆದಿಮಾನವ-ಮಾನವಿಯರ ಮಿಲನ ಪಾಪ ಪ್ರಜ್ಞೆಯದಾಗಬೇಕಾಗಿಲ್ಲ, ಅದು ವಿವೇಕದ ಜಾಗೃತಿ, ಸಂಸ್ಕೃತಿಯ ಪ್ರಾರಂಭ ಎಂದು ಕವಿ ಅಭಿಪ್ರಾಯ ಪಡುತ್ತಾರೆ. ಹುಟ್ಟು-ಸಾವು, ಕತ್ತಲು-ಬೆಳಕು ಮುಂತಾದ ದ್ವಂದ್ವಗಳ ಮೂಲಕವೇ ವಿಶ್ವಂಭರ ಚೈತನ್ಯ ಸಾಗುತ್ತದೆ. ನಾಗರಿಕತೆಯ ಕಡೆಗೆ ಹೆಜ್ಜೆ ಇಟ್ಟು, ''ವಿಶ್ವವನ್ನು ಆತ್ಮೀಕರಿಸಿಕೊಂಡು ಅಂಬರವನ್ನು ಮುಷ್ಟಿಯಲ್ಲಿ ಹಿಡಿದುಕೊಂಡ'' ಮನುಷ್ಯ.

*　　*　　*

'ವಿಶ್ವಂಭರ' ಮಾನವನ ಕಲಾತ್ಮಕ ಸಾಧನೆಯನ್ನು ವಿವರಿಸುತ್ತದೆ. ಮನುಷ್ಯನು ಬದುಕನ್ನು– ತನ್ನ ಸುತ್ತಲಿನ ಜಗತ್ತನ್ನು ಸುಂದರಗೊಳಿಸಿಕೊಂಡು ಬದುಕಲು ಯೋಗ್ಯ ವಾದುದಾಗಿಯೂ ಸಹ್ಯವಾದುದಾಗಿಯೂ ಮಾಡಿ ಕೊಂಡದ್ದು ಈ ಆಯಾಮದಿಂದಲೇ.

ಹೀಗೆಯೇ ಲಯತಾಳಗಳ ಅನುಭವ, ಚಿತ್ರಕಲೆ, ಶಿಲ್ಪಕಲೆ, ಕಾವ್ಯಕಲೆ ಇವೆಲ್ಲವುಗಳಿಗೂ ಪ್ರಕೃತಿಯೇ ಮೂಲಸ್ಫೂರ್ತಿ ಎಂಬುದನ್ನು ಕವಿ ಕಲಾತ್ಮಕವಾಗಿ ನಿರೂಪಿಸಿದ್ದಾರೆ.

*　　*　　*

ಈ ಕೃತಿಯಲ್ಲಿ ಮನಸ್ಸಿನ ಅದ್ಭುತ ಚಾರಿತ್ರಿಕ ಪರಿಣಾಮಗಳನ್ನು ಕುರಿತು ಚಿಂತಿಸಲಾಗಿದೆ. ಮಹಾ ಸಾಮ್ರಾಜ್ಯಗಳನ್ನು ಕಟ್ಟಿ ಆಳಿದ ರಾಜ್ಯದಾಹ ಮನಸ್ಸಿನದೇ. ಆಧ್ಯಾತ್ಮಿಕ ಸಿದ್ಧಿಪಡೆದು ಮಾನವತೆಯ ಒಳಿತಿಗಾಗಿ ಧರ್ಮಗಳನ್ನು ನೀಡಿ ಶಾಂತಿ ಸೌಹಾರ್ದತೆ ಗಳನ್ನು ಬೋಧಿಸಿದ್ದೂ ಮನಸ್ಸೇ. ಅಂಥ ಕೆಲವು ಮಹಾಪುರುಷರನ್ನು ಸೂಚ್ಯವಾಗಿ ವರ್ಣಿಸುತ್ತಾ ಅವರ ಸಾಧನೆ-ಪರಿಣಾಮಗಳನ್ನು ಸಂಕ್ಷಿಪ್ತವಾಗಿ ಕಟ್ಟಿಕೊಡುವ ಪ್ರಯತ್ನವನ್ನು ಕವಿ ಇಲ್ಲಿ ಮಾಡಿದ್ದಾರೆ.

*　　*　　*

ಇಡೀ ಕೃತಿಯಲ್ಲಿ ಕವಿ ಮನಸ್ಸಿನ ಅಂತರ್ಮಥನ ಮಾಡಿದ್ದಾರೆ. ಮಾನವನ ವಿವಿಧ ಪ್ರಸ್ಥಾನಗಳನ್ನು – ಎಂದರೆ ದೆಸೆಗಳನ್ನು ಕುರಿತು ಚಿಂತನೆ ಮಾಡುತ್ತ:

ಎಷ್ಟು ಪ್ರಸ್ಥಾನಗಳು ಮನುಷ್ಯನಿಗೆ
ಎಷ್ಟು ಪರಿಭ್ರಮಣಗಳು ಮನುಷ್ಯನಿಗೆ
ಅಷ್ಟರೊಳಗೇ ನೂರೆಗಳ ಓಟ
ಅಷ್ಟರೊಳಗೇ ಚಲಿಸದ ಹೆಜ್ಜೆ.

ಅತಿ ಸೂಕ್ಷ್ಮ ಅಣುಬೀಜದೊಳಗೆ ಎಷ್ಟೊಂದು ಜೀವ ರೇಖೆಗಳು! ಎಂಬ ಜೀವ ಉಗಮದ ಬೆರಗಿನಿಂದ ಪ್ರಾರಂಭಿಸಿ ಬಾಲ್ಯ, ಯೌವನ, ಗೃಹಸ್ಥ ದೆಸೆಗಳನ್ನು ಸೊಗಸಾಗಿ ವಿವೇಚಿಸುತ್ತ ಮರಣದ ಬಗ್ಗೆ ದೀರ್ಘವಾಗಿ ಜಿಜ್ಞಾಸೆ ಮಾಡಲಾಗಿದೆ. ಮರಣಾನಂತರ ಏನು ಎಂಬ ಅನಾದಿ ಪ್ರಶ್ನೆಗೆ ಇಲ್ಲಿ ಪ್ರಶ್ನೆಗಳೇ ಉತ್ತರಗಳಾಗುತ್ತವೆ.

*　　*　　*

ಕೊನೆಯ ಅಧ್ಯಾಯದಲ್ಲಿ ಸಮತಾವಾದದ ಆಶಾವಾದವನ್ನು ಕವಿ ಸಾರುತ್ತಾರೆ. ಸಮಸ್ತ ಮಾನವರು

ಸಮಾನತೆ, ಪ್ರೀತಿ, ಸೌಹಾರ್ದತೆಗಳೊಡನೆ ಬಾಳಲು ಅನುಕೂಲವಾಗುವಂತೆ ಶೋಷಣಾರಹಿತವಾದ ಸಮಾಜವನ್ನು ರೂಪಿಸುವ ಕ್ರಾಂತಿವಾದವನ್ನು ಸುಂದರವಾಗಿ ಚಿತ್ರಿಸಿದ್ದಾರೆ. ಇದೇ ವಿಶ್ವಂಭರ ತತ್ವ.

ಮಾನವನ ಹೆಜ್ಜೆ ಸಾಗುತ್ತಿದೆ, ಅಡ್ಡ ಬರುವ ಮುಳ್ಳು ಕಲ್ಲುಗಳನ್ನು ಸರಿಸುತ್ತಾ; ಕಪ್ಪು-ಬಿಳುಪು, ಮೇಲು-ಕೀಳುಗಳ ಭೇದಗಳನ್ನು ಬೆಳೆಸಿಕೊಂಡ ಮಾನವನ ಖಂಡಿಸುತ್ತ; ಎಷ್ಟೆಲ್ಲ ಉನ್ನತ ಸಾಧನೆಗಳನ್ನು ಮಾಡಿದ ಮನುಕುಲದಲ್ಲಿ ಈ ಸಂಕುಚಿತ ಕೊರಕಲು ದಾರಿಗಳು ಹೇಗೆ ಬಿದ್ದವೆಂದು ಕೇಳುತ್ತಾರೆ ಕವಿ. ಬಿಳಿಯರು ಕರಿಯರನ್ನು ದಾಸ್ಯದಲ್ಲಿಟ್ಟ ಅಮಾನುಷತೆಯನ್ನು ಅಲ್ಲಗಳೆದು ಸ್ವಾತಂತ್ರ್ಯ ಸಮಾನತೆಗಳನ್ನು ಉದ್ಘೋಷಿಸುತ್ತಾರೆ. ಮನುಷ್ಯ ಮನುಷ್ಯನನ್ನು ಶೋಷಿಸುತ್ತ ಕಿತ್ತು ತಿನ್ನುತ್ತಾ ಇದ್ದರೆ ಸೌಜನ್ಯ ಸಜ್ಜನಿಕೆಗಳು ನೋಡುತ್ತ ಸುಮ್ಮನೆ ಕೂಡಲು ಸಾಧ್ಯವೆ? ಪಟ್ಟಭದ್ರ ದುಷ್ಟಶಕ್ತಿಗಳನ್ನು, ಕೊಳೆತ ವ್ಯವಸ್ಥೆಯನ್ನು, ನಾಶಮಾಡಲು ತುಳಿಸಿ ಕೊಂಡವರಿಂದಲೇ ಕ್ರಾಂತಿ ಮೂಡಿಬರುತ್ತದೆ ಎಂಬ ಧ್ವನಿಯನ್ನು ಪ್ರಕಟಿಸಿದ್ದಾರೆ.

* * *

ತೆಲುಗಿನಲ್ಲಿ ಏಕವಸ್ತು ದೀರ್ಘಕಾವ್ಯಗಳು ಹಲವಾರು ಬಂದಿವೆ. ಶೇಷೇಂದ್ರ ಶರ್ಮರ 'ಗೊರಿಲ್ಲಾ', 'ನಾ ದೇಶಂ ನಾ ಪ್ರಜಲು', ನಗ್ನಮುನಿಯವರ 'ಕೊಯ್ಯ ಗುರ್‍ರಂ' ಮುಂತಾದ ಶ್ರೇಷ್ಠದರ್ಜೆಯ ಕಾವ್ಯಕೃತಿಗಳು ಬಂದಿವೆ. ಕಾವ್ಯಕಲೆ, ಭಾಷಾಸೌಂದರ್ಯ, ಪರಿಣಾಮ ತೀವ್ರತೆ ಮುಂತಾದವುಗಳ ದೃಷ್ಟಿಯಿಂದ 'ವಿಶ್ವಂಭರ'ಕ್ಕಿಂತ ಒಂದು ಕೈಮೇಲು ಎಂಬಂಥ ಕೃತಿಗಳೂ ಇವೆ ಎಂಬುದನ್ನು ಮರೆಯದಂತೆ ಸಿನಾರೆಯವರ ಕೃತಿಯನ್ನು ನೋಡಬೇಕು. ಅತ್ಯಂತ ದೊಡ್ಡ ವಸ್ತುವನ್ನು ತೆಗೆದುಕೊಂಡು ಅತ್ಯಂತ ಕಲಾತ್ಮಕವಾಗಿ ಈ ಕೃತಿಯನ್ನು ತನ್ನ ಪರಿಮಿತಿಗಳೊಳಗೇ ಬಹಳ ಕಲಾತ್ಮಕವಾಗಿ ನಿರ್ವಹಿಸಿದ್ದಾರೆ ಕವಿ. ಯಾವುದೇ ಸಿದ್ಧಾಂತಕ್ಕೆ ಅಂಟಿಕೊಳ್ಳದೆ ಸಮಗ್ರ ಎಂಬಂಥ ದೃಷ್ಟಿಕೋನವನ್ನು ಇದು ಒಳಗೊಂಡಿದೆ. ಮಾನವನ ಬದುಕಿನ ಒಂದೊಂದು ಆಯಾಮ, ಒಂದೊಂದು ಸಮಸ್ಯೆ, ಒಂದೊಂದು ಸನ್ನಿವೇಶಗಳೇ ಒಂದೊಂದು ಮಹಾಕಾವ್ಯವಾಗುವಂತಿವೆ. ಹೀಗಿರುವಾಗ ಒಟ್ಟಂದವಾಗಿ ಮಾನವನ ಉಗಮದಿಂದ ಇಲ್ಲಿಯವರೆಗಿನ ಚರಿತ್ರೆಯನ್ನು ಅದರ ಹಿಂದೆ ಕೆಲಸ ಮಾಡುತ್ತಾ ಬಂದಿರುವ ಮಾನವನ ಮನಸ್ಸನ್ನು, ಅದರ ಅನಂತ ಮುಖಗಳನ್ನು, ಅಸಂಖ್ಯ ವೈರುಧ್ಯಗಳನ್ನು ಒಂದು ಆಕೃತಿಯಲ್ಲಿ ಹಿಡಿದಿಡುವುದು ಮಹಾ ಸಾಹಸವೇ.

ವಿಶ್ವಂಭರ ಕೃತಿಯಲ್ಲಿ ಮನಸ್ಸಿನ ಅದ್ಭುತ ಚಾರಿತ್ರಿಕ ಪರಿಣಾಮಗಳನ್ನು ಕುರಿತು ಚಿಂತಿಸಲಾಗಿದೆ. ಮಹಾಸಾಮ್ರಾಜ್ಯಗಳನ್ನು ಕಟ್ಟಿ ಆಳಿದ ರಾಜ್ಯದಾಹ ಮನಸ್ಸಿನದೇ. ಆಧ್ಯಾತ್ಮಿಕ ಸಿದ್ಧಿ ಪಡೆದು ಮಾನವತೆಯ ಒಳಿತಿಗಾಗಿ ಧರ್ಮಗಳನ್ನು ನೀಡಿ ಶಾಂತಿ ಸೌಹಾರ್ದತೆಗಳನ್ನು ಬೋಧಿಸಿದ್ದೂ ಮನಸ್ಸೇ. ಅಂಥ ಕೆಲವು ಮಹಾಪುರುಷರನ್ನು ಸೂಚ್ಯವಾಗಿ ವರ್ಣಿಸುತ್ತಾ ಅವರ ಸಾಧನೆ–ಪರಿಣಾಮಗಳನ್ನು ಸಂಕ್ಷಿಪ್ತವಾಗಿ ಕಟ್ಟಿಕೊಡುವ ಪ್ರಯತ್ನವನ್ನು ಕವಿ ಇಲ್ಲಿ ಮಾಡಿದ್ದಾರೆ.

ದ್ವಂದ್ವಾತ್ಮಕವಾದ ಬದುಕಿನ ದ್ವಂದ್ವಗಳನ್ನು ಜೊತೆ ಜೊತೆಯಾಗಿಯೇ ಹಿಡಿದಿಡುತ್ತಾ ನಿರಾಶೆ ಕತ್ತಲೆಗಳಿಂದ ಆಶಾಪ್ರಕಾಶದೆಡೆಗೆ ಸಾಲುಸಾಲಿಗೂ ಕಲಾತ್ಮಕವಾಗಿ ಸಾಗುವ ಕಾವ್ಯ 'ವಿಶ್ವಂಭರ' ಮನುಕುಲದ ಒಂದು ಮಹತ್ವಾಕಾಂಕ್ಷೆಯ ಮತ್ತು ಮಹಾ ಸಂದೇಶದ ಕಾವ್ಯವಾಗಿದೆ.

**ಡಾ॥ ಅರ್ಕಸಾಲಿ ವೃಷಭೇಂದ್ರಾಚಾರ್**
ನಿವೃತ್ತ ಪ್ರಾಂಶುಪಾಲರು, ಕಾನಾ ಹೊಸಹಳ್ಳಿ - ೫೮೩ ೨೧೮
ಕೂಡ್ಲಿಗಿ ತಾಲೂಕು, ಬಳ್ಳಾರಿ ಜಿಲ್ಲೆ



## ಗುಳೆ ಹೊರಟು ನಿಂತಾಗ...

ಏಕೋ... ಏನೋ ಆ ಸಂಜೆ ಹೊತ್ತು
ಅಪ್ಪ ಸತ್ತು ತಣ್ಣಗೆ ಮಲಗಿದಂಗಿತ್ತು !
ಹೊಟ್ಟೆಗೂ ಬೆಂಕಿ, ಕನಸಿಗೂ ಬೆಂಕಿ
ನೆತ್ತಿ ನಾಲಿಗೆಯೊಳಗೆ ಕುಡಿಯೊಡೆದ ಕರಿನೆರಳು ।
ದುಡಿವ ಮಣ್ಣಿಂದ ಧೂಳೆದ್ದು ನಿಂತಾಗ
ಅಪ್ಪನಿಲ್ಲದ ಸೊತ್ತ ಹೊತ್ತೆ ಸಾಗಿಸಬೇಕು
ಇವಳಿಗೋ ವಿಪರೀತ ಕೆಮ್ಮು
ಈಗಲೋ... ಆಗಲೋ... ಹರಿವ ಜೋಕಾಲಿಯಲಿ
ಜೀಕಾಡುತಿದೆ ಮುದ್ದು ಅವ್ವನ ಪ್ರಾಣ !
ದಿಕ್ಕು ದಿಕ್ಕಿನ ಕಡೆಗೆ ಚುಕ್ಕೆ ಮಕ್ಕಳ ಹಿಂಡು
ಮಳೆರಾಯ ಮರೆತು ಕುಂತ
ಇಳೆರಾಯ ಸರಿದು ನಿಂತ
ಕಾಡು ಹೂ ತುಟಿಗಳಲಿ ಬಣ್ಣ ಬಣ್ಣದ ಮಾತು
ಗುಳೆ ಹೊರಟ ಕಣ್ಣಲ್ಲಿ ಬೆದೆಬಂದ ಬಂಗಾರ ।
ಮಣ್ಣ ಬಿಡುವಾಗ ಮನಸು ಹೊಯ್ದಾಡುತಿದೆ
ಸತ್ತು ದೇವರಾದ ಅಪ್ಪನನೆ ಬೇಡುತಿದೆ
ದೂರದೂರದ ಗಾಳಿ ದಿಕ್ಕಾಗಬಹುದೇ ?
ಜೀವ ಮುಕ್ಕಾಗದೇ ಮತ್ತೆ ಮರಳಬಹುದೇ ?
ಗೋಧೂಳಿ ಸಂಜೆಯಲಿ ಮೋಡದಂತಿಳಿದು
ಯಾರೋ ಬಂದರು ಬೆರಳಿಡಿದು ಕರೆದರು
ಯಾವುದೋ ಸೀಮೆ ಮತ್ತಾವುದೋ ಕನಸು
ಗಾವುದ ದೂರದ ಬೆಟ್ಟ ಅದರ ಸುತ್ತ ಮೋಹ !
ಒಂಟಿ ಜಲುಮಕೆ ಮತ್ತಿನ್ನೇನು ಬೇಕು ?
ತುಟಿಗಿಳಿದು ತೂಗಿತು ಸಾವಿರದ ಹಾಡು
ದಾರಿದಾರಿಗೂ ಕವಿದ ಬೇಲಿಗಳೆಲ್ಲ ಸರಿದು
ಕಲ್ಲು ಕಲ್ಲಿಗೂ ಬಂತು ತುಂಬು ಜೀವ ।

**ಶಿವಕುಮಾರ್ ಕಂಪ್ಲಿ**
ಕೇರಾಫ್ ಸಿ. ಸೋಮಶೇಖರಪ್ಪ, ನಿವೃತ್ತ ಪೋಸ್ಟ್ ಮಾಸ್ಟರ್
೧ನೇ ವಾರ್ಡ್, ಆಜಾದ್ ನಗರ, ಕೂಡ್ಲಿಗಿ ಅಂಚೆ
ಬಳ್ಳಾರಿ ಜಿಲ್ಲೆ - ೫೮೩ ೧೩೫

# ಔಷಧಿ ಕ್ಷೇತ್ರದಲ್ಲಿ ಬದಲಾವಣೆಯಾಗಬೇಕೇ ?

ಡಾ॥ ಪ್ರಕಾಶ್ ಸಿ. ರಾವ್

ಅನಾರೋಗ್ಯ ನಿವಾರಿಸುವಲ್ಲಿ ಔಷಧಿಗಳು ಪ್ರಮುಖ ಪಾತ್ರವಹಿಸಿವೆ. ವೈಜ್ಞಾನಿಕವಾಗಿ ರುಜುವಾತಾಗಿರುವ, ಚಿಕಿತ್ಸಾ ಸಾಮರ್ಥ್ಯವಿರುವ, ಕಡಿಮೆ ಅಡ್ಡಪರಿಣಾಮಗಳಿರುವ, ಕೊಂಡುಕೊಳ್ಳಲು ಸಾಧ್ಯವಾದ ಬೆಲೆಯಲ್ಲಿ ಸುಲಭವಾಗಿ ದೊರಕುವ, ಔಷಧಿಶಾಸ್ತ್ರ ಪಠ್ಯ ಪುಸ್ತಕಗಳಲ್ಲಿ ನಮೂದಿಸಲ್ಪಟ್ಟಿರುವ, ಜಾತಿ ಸೂಚಕ (generic) ಔಷಧಿಗಳನ್ನು ಅಗತ್ಯ ಔಷಧಿಗಳೆಂದು ವಿಶ್ವ ಆರೋಗ್ಯ ಸಂಸ್ಥೆ ೧೯೭೭ರಲ್ಲಿಯೇ ಪಟ್ಟಿಮಾಡಿತು. ಜಗತ್ತಿನ ಹಲವಾರು ದೇಶಗಳೂ ಈ ಔಷಧಿಗಳನ್ನು ಉಪಯೋಗಿಸಲು ಒಪ್ಪಿಕೊಂಡವು. ಭಾರತವು ಈ ಔಷಧಿಗಳು ದೊರಕುವಂತೆ ಪ್ರಯತ್ನ ಮಾಡಬೇಕಾಗಿತ್ತು. ಭಾರತದಲ್ಲಿ ಈ ಔಷಧಿಗಳು ದೊರಕುತ್ತಿಲ್ಲ. ಇದರ ಬದಲು ಔಷಧಿ ಕಂಪನಿಗಳ ಗುರುತುಸೂಚಕ (ಬ್ರ್ಯಾಂಡ್) ಔಷಧಿಗಳು ದೊರಕುತ್ತಿವೆ. ಜಾತಿಸೂಚಕ ಔಷಧಿಗಳಿಗೆ ಹೋಲಿಸಿದರೆ ಈ ಔಷಧಿಗಳು ಅನಗತ್ಯ ಹಾಗೂ ದುಬಾರಿಯೆಂದು ಕಂಡುಬಂದಿದೆ. ಸರಕಾರಕ್ಕೆ ಈ ವಿಷಯ ತಿಳಿದಿದ್ದರೂ ಅದರ ಬಗ್ಗೆ ತಟಸ್ಥ ಭಾವನೆಯಿಂದಿದ್ದು, ಜಾತಿಸೂಚಕ ಔಷಧಿಗಳನ್ನು ಜನರಿಗೆ ದೊರಕಿಸಿಕೊಡುವ ಪ್ರಯತ್ನವನ್ನು ಮಾಡಿಲ್ಲ. ಔಷಧಿ ಕಂಪನಿಗಳ ಲಾಭಕೋರ ನೀತಿಗೆ ಕಡಿವಾಣ ಹಾಕದೆ ಸುಮ್ಮನಿದೆ. ವೈದ್ಯರು ಔಷಧಿ ಕಂಪನಿಗಳಿಂದ ಪ್ರಭಾವಿತರಾಗಿ, ಈ ಅನಗತ್ಯ ಔಷಧಿಗಳನ್ನೇ ಪ್ರೋತ್ಸಾಹಿಸುತ್ತಿದ್ದಾರೆ. ೨೦೦೨ ಔಷಧಿ ನೀತಿಯೂ ಉದ್ಯಮ ಪರವಾಗಿದ್ದು, ಜಾತಿ ಸೂಚಕ (ಅಗತ್ಯ) ಔಷಧಿಗಳು ದೊರಕದಂತಾಗಿವೆ. ಈವತ್ತಿನ ಜಾಗತೀಕರಣ ನೀತಿಯೂ ಔಷಧಿ ಕಂಪನಿಗಳ ನೀತಿಗೆ ಪ್ರೋತ್ಸಾಹ ನೀಡಿದೆ. ಇದರಿಂದಾಗಿ ಔಷಧಿ ಬೆಲೆಗಳು ಹೆಚ್ಚುವುದಲ್ಲದೆ, ಅಗತ್ಯ ಔಷಧಿಗಳ ಅಭಾವವೂ ಉಂಟಾಗುತ್ತದೆ. ಔಷಧಿ ಕ್ರಿಯಾವೇದಿಕೆಗಳು ಹಲವಾರು ವರ್ಷಗಳಿಂದ ಸರಕಾರದ ಹಾಗೂ ಔಷಧಿ ಕಂಪನಿಗಳ ಈ ನೀತಿಯನ್ನು ವಿರೋಧಿಸುತ್ತಾ ಬಂದಿವೆ. ಈ ಹಿನ್ನೆಲೆಯಲ್ಲಿ ೨೦೦೫ರ ಏಪ್ರಿಲ್‌ನಲ್ಲಿ ಕೊಲ್ಕತ್ತಾದಲ್ಲಿ, ಜನಪರ ಔಷಧಿ ನೀತಿಗೆ ಪೂರಕವಾದ ಅಂಶಗಳನ್ನು ಚರ್ಚೆಮಾಡಲು 'ಜನ ಸ್ವಾಸ್ಥ್ಯ ಅಭಿಯಾನ', 'ಔಷಧಿ ಕಂಪನಿಗಳ ಪ್ರತಿನಿಧಿಗಳ ಒಕ್ಕೂಟ', 'ಅಖಿಲ ಭಾರತ ಔಷಧಿ ಕ್ರಿಯಾವೇದಿಕೆ' ಹಾಗೂ 'ವಿಶ್ವ ಆರೋಗ್ಯ ಸಂಸ್ಥೆ' ಮುಂತಾದ ಸಂಘಟನೆಗಳು ಸಭೆ ಸೇರಿ ಸರಕಾರದ ಗಮನಹರಿಸಿ ಬದಲಾವಣೆ ತರಬೇಕಾದ ಕೆಲವು ಅಂಶಗಳ ಬಗ್ಗೆ ತೀರ್ಮಾನಕ್ಕೆ ಬಂದವು. ಈ ತೀರ್ಮಾನದಂತೆ ಈ ವಿಷಯಗಳನ್ನು ಆರೋಗ್ಯ ಮತ್ತು ಕುಟುಂಬ ಇಲಾಖೆ, ಪೆಟ್ರೋಲಿಯಂ ಹಾಗೂ ರಾಸಾಯನಿಕ ಇಲಾಖೆಯೊಂದಿಗೆ ಚರ್ಚಿಸಿ, ಸೂಕ್ತ ಬದಲಾವಣೆ ತರಲು ಪ್ರಯತ್ನಿಸಲಾಗುವುದು. ಈ ಪ್ರಯತ್ನಕ್ಕೆ ಸರಕಾರ ಸ್ಪಂದಿಸಿ ಬದಲಾವಣೆ ತಂದಲ್ಲಿ ಮಾತ್ರ ಔಷಧಿ ಕ್ಷೇತ್ರ ಸುಧಾರಿಸಲು ಸಾಧ್ಯವಿದೆ.

### ಅಗತ್ಯ ಔಷಧಿ ಪಟ್ಟಿ

೧೯೯೬ರಲ್ಲಿಯೇ ಭಾರತವು ಅಗತ್ಯ ಔಷಧಿ ಪಟ್ಟಿಯನ್ನು ತಯಾರಿಸಿತ್ತು. ಆದರೆ ಅದು ಜಾರಿಗೆ ಬರಲೇ ಇಲ್ಲ. ಈಗ ಅನೇಕ ಹಂತಗಳಲ್ಲಿ ಉಪಯೋಗಿಸುವ ಅಗತ್ಯ ಔಷಧಿ ಪಟ್ಟಿಯನ್ನು ತಯಾರಿಸುವುದು ಮೊದಲ ಹಂತ. ನಂತರ ಔಷಧಿ ಕಂಪನಿಗಳು ಅಗತ್ಯ ಔಷಧಿಗಳನ್ನು ತಯಾರಿಸಿದಾಗ ಅದನ್ನು ಸರಕಾರ ತನ್ನ ಆರೋಗ್ಯ ಕೇಂದ್ರಗಳಿಗೆ ಪಡೆದುಕೊಳ್ಳಬೇಕಾಗುತ್ತದೆ. ಈ ಹಂತದಲ್ಲಿ ಅನೇಕ ಅವ್ಯವಹಾರಗಳು ನಡೆಯುತ್ತಿರುವುದು ಎಲ್ಲರಿಗೂ ತಿಳಿದ ವಿಷಯ. ಈ ಅವ್ಯವಹಾರಗಳನ್ನು ತಡೆಗಟ್ಟಲು ಭಾರತ ಸರಕಾರ ತಮಿಳುನಾಡಿನ ಮಾದರಿಯನ್ನು ಅನುಸರಿಸಬಹುದಾಗಿದೆ. ಇದರಿಂದ ಹಣ ಸೋರಿಕೆಯನ್ನು ತಡೆಗಟ್ಟಬಹುದಾಗಿದೆ. ಈ ವಿಷಯಗಳ ಬಗ್ಗೆ ಅನೇಕರಿಗೆ ಸೂಕ್ತ ತರಬೇತಿ ನೀಡಿ, ಔಷಧಿ ಪಡೆಯುವಿಕೆಯನ್ನು ಜಾರಿಗೊಳಿಸಬೇಕು.

ಈವತ್ತಿನ ಇನ್ನೊಂದು ಮುಖ್ಯ ಸಮಸ್ಯೆ ಎಂದರೆ ಅನಗತ್ಯ ಹಾಗೂ ಅಪಾಯಕಾರಿ ಔಷಧಿಗಳ ದೊರೆಯುವಿಕೆ. ಅಪಾಯಕಾರಿ ಔಷಧಿಗಳನ್ನು ನಿಷೇಧಿಸಬೇಕು ಮತ್ತು ಇನ್ನು ಮುಂದೆ ಆ ಔಷಧಿಗಳು ತಯಾರಾಗದಂತೆ ನೋಡಿಕೊಳ್ಳಬೇಕು. ಈ ಕೆಲಸವನ್ನು ಔಷಧಿ ತಾಂತ್ರಿಕತೆ ಆದೇಶ ಸಮಿತಿ ಮಾಡಬೇಕಾಗುತ್ತದೆ. ಆದರೆ ಈಗಿರುವ ಸಮಿತಿ ಸಮರ್ಪಕವಾಗಿ ಕಾರ್ಯ ನಿರ್ವಹಿಸುತ್ತಿಲ್ಲ. ಹೊಸ ಸಮಿತಿ ರಚನೆಯಾಗಬೇಕು. ಕೇವಲ ಅನಗತ್ಯ ಔಷಧಿಗಳನ್ನು ಮಾರಾಟಮಾಡದಿರಲು ಆದೇಶ ನೀಡಬೇಕು. ಈ ಸಮಿತಿ ಎಲ್ಲ ಅನಗತ್ಯ ಔಷಧಿಗಳನ್ನು ನಿಷೇಧಿಸಬೇಕು, ಅಂದರೆ ಕೇವಲ ಪಠ್ಯಪುಸ್ತಕಗಳಲ್ಲಿ ನಮೂದಿಸಿರುವ ಹಾಗೂ ವಿಶ್ವ ಆರೋಗ್ಯ ಸಂಸ್ಥೆಯ ಅಗತ್ಯ ಔಷಧಿ ಪಟ್ಟಿಯಲ್ಲಿ ಹೆಸರಿಸುವ ಔಷಧಿಗಳಿಗೆ ಮಾತ್ರ ಪರವಾನಗಿ ನೀಡಬೇಕು. ಇದೇ ಸಮಿತಿ ವರ್ಷಕ್ಕೊಂದು ಬಾರಿ ಮಾರುಕಟ್ಟೆಯಲ್ಲಿರುವ ಎಲ್ಲ ಔಷಧಿಗಳನ್ನು ಪರಿಶೀಲಿಸಿ ಅನಗತ್ಯ ಔಷಧಿಗಳನ್ನು ನಿಷೇಧಿಸುವಂತೆ ಸರಕಾರಕ್ಕೆ ಆದೇಶ ನೀಡಬೇಕು.

ಸರಕಾರ ಗರ್ಭನಿರೋಧಕ ಲಸಿಕೆ ಚುಚ್ಚುಮದ್ದು, ಚರ್ಮದ ಒಳಸೇರಿಸುವ ಔಷಧಿಗಳು, ಫಲವತ್ತತೆಯನ್ನು ಹತೋಟಿಗೆ ತರುವ ಲಸಿಕೆಗಳನ್ನು ರಾಷ್ಟ್ರೀಯ ಕುಟುಂಬ



ಈವತ್ತಿನ ಇನ್ನೊಂದು ಮುಖ್ಯ ಸಮಸ್ಯೆ ಎಂದರೆ ಅನಗತ್ಯ ಹಾಗೂ ಅಪಾಯಕಾರಿ ಔಷಧಿಗಳ ದೊರೆಯುವಿಕೆ. ಅಪಾಯಕಾರಿ ಔಷಧಿಗಳನ್ನು ನಿಷೇಧಿಸಬೇಕು ಮತ್ತು ಇನ್ನು ಮುಂದೆ ಆ ಔಷಧಿಗಳು ತಯಾರಾಗದಂತೆ ನೋಡಿಕೊಳ್ಳಬೇಕು. ಈ ಕೆಲಸವನ್ನು ಔಷಧಿ ತಾಂತ್ರಿಕತೆ ಆದೇಶ ಸಮಿತಿ ಮಾಡಬೇಕಾಗುತ್ತದೆ. ಆದರೆ ಈಗಿರುವ ಸಮಿತಿ ಸಮರ್ಪಕವಾಗಿ ಕಾರ್ಯ ನಿರ್ವಹಿಸುತ್ತಿಲ್ಲ. ಹೊಸ ಸಮಿತಿ ರಚನೆಯಾಗಬೇಕು ಹಾಗೂ ಕೇವಲ ಅನಗತ್ಯ ಔಷಧಿಗಳನ್ನು ಮಾರಾಟಮಾಡದಿರಲು ಆದೇಶ ನೀಡಬೇಕು. ಈ ಸಮಿತಿ ಎಲ್ಲ ಅನಗತ್ಯ ಔಷಧಿಗಳನ್ನು ನಿಷೇಧಿಸಬೇಕು, ಅಂದರೆ ಕೇವಲ ಪಠ್ಯಪುಸ್ತಕಗಳಲ್ಲಿ ನಮೂದಿಸಿರುವ ಹಾಗೂ ವಿಶ್ವ ಆರೋಗ್ಯ ಸಂಸ್ಥೆಯ ಅಗತ್ಯ ಔಷಧಿ ಪಟ್ಟಿಯಲ್ಲಿ ಹೆಸರಿಸುವ ಔಷಧಿಗಳಿಗೆ ಮಾತ್ರ ಪರವಾನಗಿ ನೀಡಬೇಕು. ಇದೇ ಸಮಿತಿ ವರ್ಷಕ್ಕೊಂದು ಬಾರಿ ಮಾರುಕಟ್ಟೆಯಲ್ಲಿರುವ ಎಲ್ಲ ಔಷಧಿಗಳನ್ನು ಪರಿಶೀಲಿಸಿ ಅನಗತ್ಯ ಔಷಧಿಗಳನ್ನು ನಿಷೇಧಿಸುವಂತೆ ಸರಕಾರಕ್ಕೆ ಆದೇಶ ನೀಡಬೇಕು.

ಯೋಜನೆಯ ಕಾರ್ಯಕ್ರಮದಲ್ಲಿ ನಿಷೇಧಿಸಬೇಕು.

ಔಷಧಿಯನ್ನು ಮಾರುಕಟ್ಟೆಯಲ್ಲಿ ಬಿಡುಗಡೆ ಮಾಡಿದ ಸಮಯದಲ್ಲಿ ಕೆಲವು ಪ್ರತಿಕೂಲ ಪರಿಣಾಮಗಳು ಮಾತ್ರ ವರದಿಯಾಗುತ್ತವೆ. ಆದರೆ ಔಷಧಿಯನ್ನು ಉಪಯೋಗಿಸದಂತೆ ಅನೇಕ ಹೊಸ ಪ್ರತಿಕೂಲ ಪರಿಣಾಮಗಳು ಕಂಡುಬರುತ್ತವೆ. ಈ ಪ್ರತಿಕೂಲ ಪರಿಣಾಮಗಳನ್ನು ದಾಖಲಿಸುವ ಕೇಂದ್ರಗಳನ್ನೂ ಸ್ಥಾಪಿಸಬೇಕು. ಯಾವುದೇ ಔಷಧಿಯನ್ನು ಇತರೇ ದೇಶಗಳು ನಿಷೇಧಿಸಿದ್ದಲ್ಲಿ, ಯಾವುದೇ ಔಷಧಿಗೆ ಹೆಚ್ಚು ಅಡ್ಡಪರಿಣಾಮ ಇದ್ದಲ್ಲಿ ಆ ಔಷಧಿಯನ್ನು ತಾಂತ್ರಿಕತೆ ಆದೇಶ ಸಮಿತಿ ನಿಷೇಧಿಸಬೇಕು.

**ಜಾತಿಸೂಚಕ ಔಷಧಿ ಬಳಕೆ**

ಮೊದಲೇ ಹೇಳಿದಂತೆ ಔಷಧಿಗಳಲ್ಲಿ ಜಾತಿಸೂಚಕ, ಗುರುತುಸೂಚಕ ಹಾಗೂ ಜಾತಿಸೂಚಕ ಗುರುತಿನ ಔಷಧಿಗಳು ಎಂಬ ಮೂರು ಪ್ರಕಾರದ ಔಷಧಿಗಳಿವೆ. ಸಾಮಾನ್ಯವಾಗಿ ಜಾತಿಸೂಚಕ ಔಷಧಿಗಳ ಬೆಲೆ ಕಡಿಮೆ ಹಾಗೂ ಅವುಗಳ ಉಪಯೋಗದಿಂದ ಚಿಕಿತ್ಸೆ ಸೂಕ್ತವಾಗಿರುತ್ತದೆ. ಆದರೆ ಇವು ಮಾರುಕಟ್ಟೆಯಲ್ಲಿ ಸುಲಭವಾಗಿ ದೊರಕುತ್ತಿಲ್ಲ. ಗುರುತುಸೂಚಕ ಔಷಧಿಗಳ ಬೆಲೆ ಜಾಸ್ತಿ ಮತ್ತು ಆ ಔಷಧಿಗಳಲ್ಲಿ ಹಲವಾರು ಘಟಕಗಳಿರುವುದರಿಂದ ಚಿಕಿತ್ಸೆ ಸಮಂಜಸವಾಗದೇ ಹೋಗುವ ಸಾಧ್ಯತೆಯೂ ಇದೆ. ಈ ಔಷಧಿಗಳು ಸುಲಭವಾಗಿ ದೊರಕುತ್ತವೆ. ಭಾರತದಲ್ಲಿ ವೈದ್ಯರು ಗುರುತುಸೂಚಕ ಔಷಧಿಯನ್ನೇ ಹೆಚ್ಚಾಗಿ ಬಳಸುತ್ತಾರೆ. ಜಾತಿಸೂಚಕ ಔಷಧಿಗಳನ್ನು ಬಳಸುವಂತೆ ವೈದ್ಯರಿಗೆ ತರಬೇತಿ ನೀಡಿ ಪ್ರೋತ್ಸಾಹಿಸಬೇಕು. ಜಾತಿಸೂಚಕ ಔಷಧಿಗಳ ಮೇಲೆ ಕರ ವಿಧಿಸಬಾರದು ಮತ್ತು ಈ ಔಷಧಿಗಳು ವ್ಯಾಪಕವಾಗಿ ದೊರಕುವಂತೆ ಮಾಡಬೇಕು. ಜಾತಿಸೂಚಕ ಗುರುತಿನ ಔಷಧಿಗಳನ್ನು ಕೆಲವು ಔಷಧಿ ಕಂಪನಿಗಳು ತಯಾರಿಸುತ್ತಿದ್ದು, ಆ ಔಷಧಿಗಳು ಗುರುತು ಸೂಚಕ ಔಷಧಿಗಳಂತೆಯೇ ದುಬಾರಿಯಾಗಿವೆ. ಈ ಔಷಧಿಗಳನ್ನು ನಿಷೇಧಿಸಬೇಕು. ಎಲ್ಲ ಔಷಧಿಗಳ ಮೇಲೆ ಅದರಲ್ಲಿರುವ ಜಾತಿಸೂಚಕ ಔಷಧಿಯ ಹೆಸರನ್ನು ದಪ್ಪ ಅಕ್ಷರದಲ್ಲಿ ನಮೂದಿಸಬೇಕು. ವೈದ್ಯಕೀಯ ವ್ಯಾಸಂಗದ ಸಮಯದಲ್ಲಿ ವೈದ್ಯರಿಗೆ ಸೂಕ್ತ ಚಿಕಿತ್ಸೆಯ ಬಗ್ಗೆ ತರಬೇತಿ ನೀಡಲಾಗುವುದಿಲ್ಲ. ಎಲ್ಲ ವೈದ್ಯರಿಗೆ ಅಗತ್ಯ ಔಷಧಿ ಉಪಯೋಗ ಹಾಗೂ ಸೂಕ್ತ ಔಷಧಿ ಚಿಕಿತ್ಸೆ ಬಗ್ಗೆ ಕಡ್ಡಾಯ ತರಬೇತಿ ನೀಡಬೇಕು.

**ಭಾರತೀಯ ಪೇಟೆಂಟ್ ಕಾನೂನು (೧೯೭೦)**

೧೯೭೦ರ ಭಾರತೀಯ ಪೇಟೆಂಟ್ ಕಾನೂನಿನಿಂದಾಗಿ ಭಾರತದ ಔಷಧಿ ಕ್ಷೇತ್ರದ ಬೆಳವಣಿಗೆ ಸಾಧ್ಯವಾಯಿತು. ಅಗತ್ಯ ಔಷಧಿಗಳು ಭಾರತದಲ್ಲೇ ತಯಾರಾಗುವುದಲ್ಲದೆ ಔಷಧಿ ಬೆಲೆಗಳೂ ಕಡಿಮೆಯಾದವು. ಆದರೆ ಆ ಕಾನೂನಿಗೆ ಬದಲಾವಣೆ ತರಲು ಟ್ರಿಪ್ಸ್ ಒಪ್ಪಂದಕ್ಕೆ ಸಹಿ ಹಾಕಲಾಗಿದೆ. ಟ್ರಿಪ್ಸ್ ಒಪ್ಪಂದದಲ್ಲಿ ಜನಾರೋಗ್ಯಕ್ಕೆ ಪೂರಕವಾದ ಅಂಶಗಳು ಇಲ್ಲದ್ದರಿಂದ ಅಂತರರಾಷ್ಟ್ರೀಯ ಮಟ್ಟದಲ್ಲಿ ಟ್ರಿಪ್ಸ್ ಒಪ್ಪಂದದಲ್ಲಿ ಬದಲಾವಣೆ ತರಲು ಚರ್ಚೆ ಮುಂದುವರೆದಿದೆ. ಟ್ರಿಪ್ಸ್ ಒಪ್ಪಂದವನ್ನು ಭಾರತ ಸರಕಾರ ನಿರಾಕರಿಸಬೇಕು. ಆದರೆ ಈ ಹಂತದಲ್ಲಿ ಟ್ರಿಪ್ಸ್‌ನಿಂದ ಆಗುವ ಅಪಾಯ ತಡೆಯಲು, ಕನಿಷ್ಠ ಕಡ್ಡಾಯ ಪರವಾನಗಿಯ ಸೌಲಭ್ಯವನ್ನು ಪಡೆಯಬೇಕು.

**ಔಷಧಿ ಉತ್ಪಾದನೆ ಹಾಗೂ ದೊರಕುವಿಕೆ**

ನಮ್ಮ ದೇಶದ ಅಗತ್ಯತೆಗೆ ತಕ್ಕಂತೆ ಔಷಧಿ ಉತ್ಪಾದನೆ ಆಗಬೇಕು ಎಂಬುದು ಸಾಮಾನ್ಯ ಜ್ಞಾನ. ಆದರೆ ನಮ್ಮ ದೇಶದ ಅಗತ್ಯತೆಯನ್ನು ಸರಕಾರ ಎಂದೂ ನಿರ್ಧರಿಸಿಲ್ಲ. ಔಷಧಿ ಕಂಪನಿಗಳು ತಮ್ಮ ಅನುಕೂಲಕ್ಕೆ ತಕ್ಕಂತೆ (ಅಂದರೆ ಲಾಭಗಳಿಕೆಯ ದೃಷ್ಟಿಯಿಂದ) ಔಷಧಿಗಳನ್ನು ತಯಾರಿಸುತ್ತಿವೆ. ಇದರಿಂದಾಗಿ, ಅಗತ್ಯ ಔಷಧಿಗಳು ತಯಾರಾಗುತ್ತಿಲ್ಲ. ಎಲ್ಲ ಅಗತ್ಯ ಔಷಧಿಗಳನ್ನು ಉತ್ಪಾದನೆ ಮಾಡುವ ಜವಾಬ್ದಾರಿಯನ್ನು ಸರಕಾರ ಔಷಧಿ ಕಂಪನಿಗಳಿಗೆ ವಹಿಸಬೇಕು. ಅನೇಕ ಕಂಪನಿಗಳು ಹಳೆಯ ತಂತ್ರಜ್ಞಾನ ಹೊಂದಿದ್ದು ಔಷಧಿಗಳನ್ನು ತಯಾರಿಸಲು ಹಿಂದೇಟುಹಾಕುತ್ತಿವೆ. ಅಗತ್ಯಬಿದ್ದಲ್ಲಿ ಹೊಸ ತಂತ್ರಜ್ಞಾನವನ್ನು ಅಳವಡಿಸಿ ಕಡ್ಡಾಯವಾಗಿ ಅಗತ್ಯ ಔಷಧಿಗಳನ್ನು ತಯಾರಿಸಲು ಕಂಪನಿಗಳಿಗೆ ಸರಕಾರ ಆದೇಶ ನೀಡಬೇಕು. ಔಷಧಿ ಕಂಪನಿಗಳು ಆಯಾ ದೇಶದ ಸಮಸ್ಯೆಗೆ ಸಂಬಂಧಿಸಿದ ವಿಷಯದ ಬಗ್ಗೆ ಸಂಶೋಧನೆ ಮಾಡಬೇಕಾಗುತ್ತದೆ. ತಮ್ಮ ಆದಾಯದ ಪ್ರತಿ ಶತ ಹತ್ತರಷ್ಟು ಹಣವನ್ನು ಸಂಶೋಧನೆಗೆ ಮೀಸಲಿಡಬೇಕು. ಆದರೆ ಭಾರತದಲ್ಲಿ ಯಾವ ಔಷಧಿ ಕಂಪನಿಯೂ ಸಂಶೋಧನೆಗೆ ಹಣ ಹೂಡಿಲ್ಲ ಮತ್ತು ಯಾವ ಹೊಸ ಔಷಧಿಯನ್ನೂ ಕಂಡುಹಿಡಿದಿಲ್ಲ. ಆದರೆ ಅನಗತ್ಯ ಔಷಧಿಗಳನ್ನು ತಯಾರಿಸಿ ಅಪಾರ ಲಾಭ ಮಾತ್ರ ಮಾಡುತ್ತಿವೆ!

ಬಹುರಾಷ್ಟ್ರೀಯ ಕಂಪನಿಗಳು ಔಷಧಿ ತಯಾರಿಕೆ ಪರವಾನಗಿ ಪಡೆದು, ಆ ಪರವಾನಗಿಯನ್ನು ಇತರರಿಗೆ ಸಾಲವಾಗಿ ಕೊಟ್ಟು ಲಾಭಮಾಡುತ್ತಿವೆ. ಆದರೆ ಪರವಾನಗಿಯ ಸಾಲ ಪಡೆದ ಕಂಪನಿಗಳು ಔಷಧಿ ತಯಾರಿಕೆಯ ಜವಾಬ್ದಾರಿಯನ್ನು ವಹಿಸುತ್ತಿಲ್ಲ. ಈ ಪದ್ಧತಿಯನ್ನು ಕೂಡಲೇ ನಿಷೇಧಿಸಬೇಕು.

ಔಷಧಿ ತಯಾರಿಕೆ ಹಾಗೂ ವಿತರಣೆ ಸಮಯದಲ್ಲಿ ಅನೇಕ ದುರಂತಗಳು ಸಂಭವಿಸುತ್ತವೆ. ಇದರಿಂದ ಸಾವು-ನೋವುಗಳಾಗಿವೆ. ಇದರ ಜವಾಬ್ದಾರಿಯನ್ನು ಔಷಧಿ ಕಂಪನಿಗಳು ತೆಗೆದುಕೊಳ್ಳಬೇಕು. ಇದಲ್ಲದೆ ರೋಗಿಯ ಕುಟುಂಬದವರಿಗೆ ಪರಿಹಾರ ಒದಗಿಸುವಂತೆ ಕಡ್ಡಾಯಗೊಳಿಸಬೇಕು.

**ಔಷಧಿ ಬೆಲೆಗಳು**

ಆರೋಗ್ಯ ಕ್ಷೇತ್ರದಲ್ಲಿ ಭಾರತವು ಅತೀ ಹೆಚ್ಚಿನ ಮಟ್ಟದಲ್ಲಿ ಖಾಸಗೀಕರಣಗೊಂಡಿರುವ ದೇಶ. ಆರೋಗ್ಯದ ಜವಾಬ್ದಾರಿಯನ್ನು ಸರಕಾರ ವಹಿಸಿಕೊಳ್ಳದೆ ಜನರೇ ವಹಿಸಿಕೊಂಡಿದ್ದಾರೆ. ಆದ್ದರಿಂದ ಸರಕಾರ ಕನಿಷ್ಠ ಪಕ್ಷ ಜನರು ಕೊಂಡುಕೊಳ್ಳುವ ಔಷಧಿ ಬೆಲೆಗಳ ಬಗ್ಗೆ ಗಮನಹರಿಸಬೇಕು ಮತ್ತು ಔಷಧಿ ಬೆಲೆಗಳನ್ನು ಹತೋಟಿಯಲ್ಲಿಡಬೇಕು. ಔಷಧಿ ಬೆಲೆಯಲ್ಲಿ ತಯಾರಕರ ಹಾಗೂ ವಿತರಕರ ಪಾಲು ಶೇಕಡ ೩೦ಕ್ಕಿಂತ ಹೆಚ್ಚಿರಬಾರದು. ಇದು ಸಾಧ್ಯವಾಗಲು 'ರಾಷ್ಟ್ರೀಯ ಔಷಧ ಬೆಲೆ ನಿಯಂತ್ರಣ ಪ್ರಾಧಿಕಾರ'ವನ್ನು ರಚಿಸಿ ಔಷಧಿ ಬೆಲೆಗಳ ಮೇಲೆ ನಿರಂತರ ಗಮನವಿಟ್ಟಿರಬೇಕು. ಭಾರತದಲ್ಲಿ ಒಂದೇ ಔಷಧಿಯನ್ನು ಹಲವಾರು ಕಂಪನಿಗಳು ಮಾರುತ್ತಿದ್ದು ಔಷಧಿ ಬೆಲೆಗಳಲ್ಲಿ ಅಧಿಕ ವ್ಯತ್ಯಾಸಗಳಿರುವುದು ಕಂಡುಬರುತ್ತದೆ. ಇದನ್ನು ಕೂಡಲೇ ಸರಿಪಡಿಸಬೇಕು. ಸರಕಾರ ಅಗತ್ಯ ಔಷಧಿಗಳು ಹಾಗೂ ಏಡ್ಸ್ ಔಷಧಿಗಳ ಮೇಲಿನ ತೆರಿಗೆಯನ್ನು ತೆಗೆದುಹಾಕಬೇಕು.

**ಸಾರ್ವಜನಿಕ ಕ್ಷೇತ್ರದ ಔಷಧಿ ಕಂಪನಿಗಳು**

ಭಾರತದಲ್ಲಿ ಔಷಧಿ ಉದ್ಯಮದ ಪ್ರಗತಿ ಸಾಧ್ಯವಾಗಿರುವುದು ಸಾರ್ವಜನಿಕ ಕ್ಷೇತ್ರದ ಉದ್ಯಮಗಳಿಂದ. ಔಷಧಿ ಬೆಲೆಗಳು ಕಡಿಮೆಯಾಗಿ ಔಷಧಿಗಳನ್ನು ರಫ್ತುಮಾಡಲು ಸಾಧ್ಯವಾದುದು ಈ ಕಂಪನಿಗಳು ಔಷಧಿ ತಯಾರಿಸಲು ಪ್ರಾರಂಭಿಸಿದಂದಿನಿಂದ ಎಂಬುದನ್ನು ಇಲ್ಲಿ ಸ್ಮರಿಸಬಹುದು. ಆದರೆ ಬಹುರಾಷ್ಟ್ರೀಯ ಕಂಪನಿಗಳು ಈ ನಿಟ್ಟಿನಲ್ಲಿ ಯಾವ ಪ್ರಯತ್ನವನ್ನೂ ಮಾಡದೇ, ಕೇವಲ ಲಾಭಕೋರ ನೀತಿಯನ್ನು ಅನುಸರಿಸುತ್ತಿವೆ. ಈಗ ಭಾರತೀಯ ಸಾರ್ವಜನಿಕ ಕ್ಷೇತ್ರದ ಉದ್ಯಮವನ್ನು ಕಡೆಗಣಿಸಲಾಗುತ್ತಿದೆ. ಈ ಕೂಡಲೇ ಸರಕಾರ ಸಾರ್ವಜನಿಕ ಕ್ಷೇತ್ರದ ಉದ್ಯಮವನ್ನು ಪುನಃಶ್ಚೇತನಗೊಳಿಸಬೇಕು.

**ಸಂಶೋಧನೆ ಮತ್ತು ಬೆಳವಣಿಗೆ**

ಈವರೆಗೆ ಔಷಧಿ ಕಂಪನಿಗಳು ಭಾರತದಲ್ಲಿ ಯಾವ ಹೊಸ ಔಷಧಿಯನ್ನೂ ಕಂಡುಹಿಡಿಯಲು ಪ್ರಯತ್ನಿಸಿಲ್ಲ. ಭಾರತದಲ್ಲಿ ಸಸ್ಯಸಂಪತ್ತು ಹೇರಳವಾಗಿದೆ; ಬಳಕೆಗೆ ಯೋಗ್ಯವೆನಿಸಿದೆ. ರಾಷ್ಟ್ರೀಯ ಸಂಶೋಧನಾ ಕೇಂದ್ರಗಳು, ವಿಶ್ವವಿದ್ಯಾಲಯಗಳು, ಔಷಧಿ ಸಂಶೋಧನೆಯನ್ನು ಪ್ರಾರಂಭಿಸಬಹುದಾಗಿದೆ. ಸಂಶೋಧನೆಯಲ್ಲಿ ಸಾರ್ವಜನಿಕ ಔಷಧಿ ಉದ್ಯಮವೂ ಪ್ರಮುಖ ಪಾತ್ರವಹಿಸಬಹುದಾಗಿದೆ. ಸರಕಾರವು ಸಂಶೋಧನೆಗಳಿಗೆ ಹಣಕಾಸಿನ ಪ್ರೋತ್ಸಾಹ ನೀಡುವುದಲ್ಲದೆ, ಈ ಔಷಧಿಗಳಿಗೆ ೧೦ ವರ್ಷಗಳ ಕಾಲ ತೆರಿಗೆ ಮತ್ತು ಕರ ರಿಯಾಯಿತಿ ನೀಡಬೇಕು.

ಔಷಧಿ ಸಂಶೋಧನೆಯಲ್ಲಿ ನಾಲ್ಕು ಹಂತಗಳಿವೆ. ನಾಲ್ಕನೇ ಹಂತದಲ್ಲಿ ಮಾನವನ ಮೇಲೆ ಔಷಧಿ ಪ್ರಯೋಗ ಮಾಡಲಾಗುತ್ತದೆ. ಬಹುರಾಷ್ಟ್ರೀಯ ಕಂಪನಿಗಳು ಭಾರತದಲ್ಲಿ ತಮ್ಮ ಸಂಶೋಧನೆಯನ್ನು (ನಾಲ್ಕನೇ ಹಂತದ) ಮುಂದುವರಿಸುತ್ತ ಯುವಕ-ಯುವತಿಯರನ್ನು ಮುಂದೆಬರಲು ಪ್ರೋತ್ಸಾಹಿಸುತ್ತಿವೆ. ಆದರೆ ಈ ಸಂಶೋಧನೆಯಲ್ಲಿ ಅಂತರರಾಷ್ಟ್ರೀಯ ಒಪ್ಪಂದದ ಹೆಲ್ಸಿಂಕಿ ಘೋಷಣೆಯನ್ನು ಉಲ್ಲಂಘಿಸಲಾಗಿದೆ ಮತ್ತು ಔಷಧಿ ಪರೀಕ್ಷೆಗಳ ಸಮಯದಲ್ಲಿ ಘಟಿಸಿರುವ ಅಪಘಾತಗಳಿಗೆ ಯಾವ ಪರಿಹಾರವನ್ನೂ ಒದಗಿಸಲು ತಯಾರಾಗಿಲ್ಲ, ಯುವಕ-ಯುವತಿಯರಿಗೆ ಅಗತ್ಯ ಮಾಹಿತಿ ನೀಡದೆ ತಪ್ಪು ಮಾಹಿತಿ ನೀಡಿ ಅವರ ಮೇಲೆ ಪ್ರಯೋಗ ನಡೆಸಲಾಗುತ್ತಿದೆ. ಇನ್ನು ಮೇಲೆ ಈ ತರಹದ ಯಾವುದೇ ಔಷಧಿ ಪರೀಕ್ಷೆಗಳನ್ನು ಸರಕಾರ ನಿಷೇಧಿಸಬೇಕು.

ಔಷಧಿ ಸಂಶೋಧನೆಯ ಮೇಲ್ವಿಚಾರಣೆಗೆ ಒಂದು ಸಮಿತಿ ಇರಬೇಕು. ಆ ಸಮಿತಿಯ ಅನುಮತಿ ಪಡೆದೇ ಸಂಶೋಧನೆ ಮುಂದುವರಿಯಬೇಕು. ಸಂಶೋಧನೆಯಾದ ಔಷಧಿ ಬಗ್ಗೆ ಆ ಸಮಿತಿ ಔಷಧಿ ನಿಯಂತ್ರಣ ಅಧಿಕಾರಿಗಳಿಗೆ ವರದಿ ಮಾಡಬೇಕು. ನಂತರವೇ ಆ ಔಷಧಿ ಮಾರುಕಟ್ಟೆಯ ಬಿಡುಗಡೆಗೆ ಯೋಗ್ಯ ಎಂಬ ಕಾನೂನು ರೂಪಿಸಬೇಕು.

**ಔಷಧಿ ಗುಣಮಟ್ಟ ತಪಾಸಣೆ ಹಾಗೂ ಅದರ ಬಗ್ಗೆ ಮಾಹಿತಿ**

ಔಷಧಿ ಗುಣಮಟ್ಟ ಕಾಪಾಡುವುದು ಔಷಧಿ ತಯಾರಕರ ಜವಾಬ್ದಾರಿ. ಗುಣಮಟ್ಟದ ವಿಷಯಗಳ ಬಗ್ಗೆ ಅನೇಕ ದೂರುಗಳಿದ್ದರೂ ಆ ಕುರಿತ ವಿಚಾರಣೆ ವಿಳಂಬವಾಗುತ್ತದೆ. ಈ ದೂರುಗಳ ವಿಚಾರಣೆಗೆ ಒಂದು ವಿಶೇಷ ನ್ಯಾಯಾಲಯವನ್ನು ನೇಮಿಸಬೇಕು ಮತ್ತು ಇಲ್ಲಿ

ಕಳಪೆ ಔಷಧಿ ಹಾಗೂ ಕಳಪೆ ಗುಣಮಟ್ಟದ ಔಷಧಿಗಳಿಗೆ ಸಂಬಂಧಿಸಿದ ದೂರುಗಳ ವಿಚಾರಣೆ ನಡೆಸಬೇಕು. ಔಷಧಿ ಹಾಗೂ ಸೌಂದರ್ಯವರ್ಧಕಗಳ ಕಾನೂನಿಗೆ ಅಗತ್ಯ ತಿದ್ದುಪಡಿ ತರಬೇಕು.

**ಔಷಧಿ ನಿಯಂತ್ರಣ**

ರಾಷ್ಟ್ರ ಹಾಗೂ ರಾಜ್ಯ ಮಟ್ಟದಲ್ಲಿ ಔಷಧಿ ನಿಯಂತ್ರಣದ ಸೌಲಭ್ಯಗಳನ್ನು ಹೆಚ್ಚಿಸಲು ಪ್ರತಿಯೊಂದು ರಾಜ್ಯದಲ್ಲೂ ಕನಿಷ್ಠ ಒಂದು ಆಧುನಿಕ ಔಷಧಿ ಪರೀಕ್ಷೆಯ ಪ್ರಯೋಗಾಲಯಗಳನ್ನು ಸ್ಥಾಪಿಸಬೇಕು. ಔಷಧಿ ನಿಯಂತ್ರಣ ತನ್ನ ವೆಬ್‌ಸೈಟ್‌ನಲ್ಲಿ ಜನಸಾಮಾನ್ಯರಿಗೆ ಉಪಯೋಗವಾಗುವ ಎಲ್ಲ ವಿವರಗಳನ್ನು ನೀಡಬೇಕು.

**ಔಷಧಿ ತಯಾರಿಕೆ**

ಗುಣಮಟ್ಟದ ಔಷಧಿ ತಯಾರಿಕೆಗೆ, ಒಳ್ಳೆಯ ಮಾದರಿಯನ್ನು ಅನುಸರಿಸಬೇಕಾಗುತ್ತದೆ. ಈ ವಿಷಯಗಳನ್ನು ತಯಾರಕರೊಂದಿಗೆ ಚರ್ಚಿಸಿ ಒಳ್ಳೆಯ ತಯಾರಿಕೆಯ ಮಾದರಿಯನ್ನು ಕಂಡುಕೊಳ್ಳಬೇಕಾಗುತ್ತದೆ. ಒಳ್ಳೆಯ ಗುಣಮಟ್ಟದ ಬಗ್ಗೆ ಅನುಮಾನ ಬಂದರೆ, ಗ್ರಾಹಕರು ಔಷಧಿ ಪ್ರಯೋಗಾಲಯಕ್ಕೆ ಹೋಗುವ ವ್ಯವಸ್ಥೆ ಅನುಷ್ಠಾನಕ್ಕೆ ಬರಬೇಕು.

ಔಷಧಿ ಅಂಗಡಿಗಳಲ್ಲಿ ತರಬೇತಿಹೊಂದಿದ ಔಷಧಿ ವಿತರಕರು ಇರುವುದೇ ಇಲ್ಲ. ತರಬೇತಿ ಹೊಂದಿದ ವಿತರಕರು ಇರುವುದು ಕಡ್ಡಾಯವಾಗಬೇಕು.

ಔಷಧಿ ಕಾನೂನುಗಳಲ್ಲಿ ಈಗಿರುವ ಮ್ಯಾಜಿಕಲ್ ರೆಮಿಡೀಸ್ ಆ್ಯಕ್ಟ್ ಈಗ ಅಪ್ರಸ್ತುತ. ಅದರ ಬದಲು ಹೊಸ ಕಾಯಿದೆಯನ್ನು ಜಾರಿಗೊಳಿಸಬೇಕು.

ಔಷಧಿ ಬಳಕೆ ವ್ಯಾಪಕವಾಗಿದೆ. ಇಂತಹ ಸಂದರ್ಭಗಳಲ್ಲಿ ಔಷಧಿ ಬಳಕೆಯ ಬಗ್ಗೆ ಜನಸಾಮಾನ್ಯರಿಗೆ ಮಾಹಿತಿ ಒದಗಿಸುವ ಅಗತ್ಯವಿದೆ. ಈ ಮಾಹಿತಿಯನ್ನು ಔಷಧಿ ನಿಯಂತ್ರಣ ಮಂಡಳಿ ದೊರಕಿಸಿಕೊಡಬೇಕು. ವೈದ್ಯರಿಗೂ ಔಷಧಿ ಬಗ್ಗೆ ವೈಜ್ಞಾನಿಕವಾದ ಮಾಹಿತಿ ದೊರಕಬೇಕು.

ಔಷಧಿ ಪ್ರಚಾರಕ್ಕಾಗಿ ಔಷಧಿ ಕಂಪನಿಗಳು ಅನೇಕ ಜಾಹೀರಾತುಗಳನ್ನು ನೀಡುತ್ತವೆ. ಇವುಗಳಲ್ಲಿ ಹಲವಾರು ತಪ್ಪು ಮಾಹಿತಿ ಇರುತ್ತವೆ. ಇದಲ್ಲದೆ ವೈದ್ಯರನ್ನು ಪುಸಲಾಯಿಸಿ, ಅವರಿಗೆ ಉಡುಗೊರೆ ಕೊಟ್ಟು, ಅನಗತ್ಯ ಔಷಧಿಗಳನ್ನು ಬರೆಯಲು ಅವರ ಸಹಾಯ ಕೋರಲಾಗುತ್ತದೆ. ಈ ಪದ್ಧತಿ ವ್ಯಾಪಕವಾಗಿ ಕಂಡುಬರುವುದರಿಂದ ಇದನ್ನು ತಡೆಗಟ್ಟಲು ಎಲ್ಲ ಪ್ರಯತ್ನವನ್ನು ಮಾಡಬೇಕು.

ಔಷಧಿ ಕ್ಷೇತ್ರದ ಬಗ್ಗೆ ಇಲ್ಲಿಯವರೆಗೆ ಹಲವಾರು ಚರ್ಚೆಗಳಾಗಿದ್ದು, ಈ ಸಭೆಯಲ್ಲಿ ಒಂದು ಸಮಗ್ರ ಪರಿಹಾರ ರೂಪುಗೊಂಡಿದೆ. ಔಷಧಿ ಕ್ಷೇತ್ರವನ್ನು ಸುಧಾರಿಸುವಲ್ಲಿ ಈ ಚರ್ಚೆ ಉಪಯುಕ್ತವಾಗಬಲ್ಲದು.

**ಡಾ|| ಪ್ರಕಾಶ್ ಸಿ. ರಾವ್**
'ಅಪರ್ಣ ಕ್ಲಿನಿಕ್', ನಂ. ೧೧೯೪, ೫ನೇ ಅಡ್ಡರಸ್ತೆ, ೬ನೇ ಮುಖ್ಯರಸ್ತೆ
ಕೆ. ಎನ್. ಎಕ್ಸ್‌ಟೆನ್ಷನ್, ಯಶವಂತಪುರ, ಬೆಂಗಳೂರು - ೫೬೦ ೦೨೨

# ಯಾವ ನಾಳೆಯೂ ನಮ್ಮದಲ್ಲ



ಒಬ್ಬನಿದ್ದಾನೆ
ನಮ್ಮನ್ನಾಳುವವ
ನಮ್ಮ ಕತ್ತಿಗೆ ದಾರ ಹಾಕಿ
ಕುಣಿಸುವವ –
ಅಗೋಚರ, ಅನಾಮಿಕ.
ನಮಗೋ ಅರಿವಿಲ್ಲದ ಮರೆವು
ನಮ್ಮ ಜೀವನದ ಹರಿಕಾರರು ನಾವೇ
ಎನ್ನುವ ಕುರುಡು ಬಿಗುಮಾನ.
ಪ್ರತಿಯೊಂದು ಕ್ಷಣವೂ ಅವನದ್ದೇ
ಅವನೆಳೆದಂತೆ ನಮ್ಮ ಹೆಜ್ಜೆ;
ಅವನಿಚ್ಛಿಸಿದಂತೆ ನಮ್ಮ ಏಳು ಬೀಳು.
ಹೆಜ್ಜೆಗಳಲ್ಲಿ ಲಯವಿದ್ದಾಗ ಮೈಮರೆವು !
ಲಯ ತಪ್ಪಿದಾಗ ಆತಂಕ, ನೋವು –
ಬಿರುಕು ಬಿಡುವ ಸಂಬಂಧಗಳು
ಮನದೊಳಗೆ ದಾವಾನಲ.
ಅನಿರೀಕ್ಷಿತ ಅಪಘಾತಗಳು –
ಕಳಚಿಕೊಳ್ಳುವ ಸಂದುಗಳು,
ನುಚ್ಚು ನೂರಾಗುವ ದೇಹ, ಮನಸ್ಸು
ಅಸಾಧ್ಯ ನೋವು, ಯಮದರ್ಶನ !
ಅವನ ದ್ವೇಷಿಸುವಷ್ಟು ಅಸಹಾಯಕತೆ.
ಬಿರುಕುಗಳಿಗೆ ಪತ್ತೆಹಾಕಿ
ಕಳಚಿಕೊಂಡ ಸಂದುಗಳ
ಬೋಲ್ಟು ನಟ್ಟು ರಾಡು ಹಾಕಿ ಜೋಡಿಸಿ
ನೋವು ನುಂಗಿ ಎಲ್ಲ ಮರೆತು
ಕಾಲದ ಜೊತೆಗೆ ಹೆಜ್ಜೆ ಹಾಕುತ್ತಾ

ನಾಳೆಯಾದರೂ ನಮ್ಮದೆನ್ನುವ
ಕನಸಲ್ಲಿ ಬದುಕುವಾಸೆ !
ಆಸೆಯ ಪರದೆಯಾಚೆಗಿನದ್ದೆಲ್ಲ ಕತ್ತಲೆ !
ಇದುವೆ ಜೀವನ
ಎಲ್ಲರೂ ಸೂತ್ರದ ಬೊಂಬೆಗಳು
ಅವನು ಆಡಿಸಿದಷ್ಟು ದಿನ
ಕುಣಿಯುತ್ತ ಕುಂಟುತ್ತ ಬದುಕು.

ಅವನ ತಾಳಕ್ಕೆ ನಮ್ಮ ಕುಣಿತ ಸೇರುವಾಗ
ಯಾವ ನಾಳೆಯೂ ನಮ್ಮದಲ್ಲ
ಎಲ್ಲ ನಾಳೆಗಳೂ ಅವನದ್ದೇ.
ಅವನೊಡ್ಡುವ ಸವಾಲುಗಳ
ಎದುರಿಸುತ್ತಾ ಬದುಕುವ
ಆತ್ಮವಿಶ್ವಾಸ ಮಾತ್ರ ನಮ್ಮದೇ !

ಕೆ. ಉಷಾ ಪಿ. ರೈ
ಸಮೃದ್ಧ, ... ಬೆಂಗಳೂರು - [illegible]

# ಸಾಹಿತ್ಯ ಮತ್ತು ಧರ್ಮ-ದರ್ಶನಗಳ ಒಳಸಂಬಂಧ

**ಎಸ್. ಎಸ್. ಹಿರೇಮಠ**

ಸಾಹಿತ್ಯ ಮತ್ತು ದರ್ಶನಗಳ ಕೊಳುಕೊಡೆ ಒಂದು ಕುತೂಹಲದ ಚರ್ಚೆ. 'ಧರ್ಮ'ದ ತಾತ್ವಿಕ ಭಾಗವೇ 'ದರ್ಶನ'. ಧರ್ಮದ ಅನೇಕ ಮುಖಗಳಲ್ಲಿ ದರ್ಶನದ ಆಯಾಮ ಮೂಲಭೂತವಾದುದು, ಪ್ರಧಾನವಾದುದು. ದರ್ಶನದ ಸಂಬಂಧವಿಲ್ಲದ ಧರ್ಮಕ್ಕೆ ಜೀವವಿರಲಾರದು. ಭಾರತೀಯ ಸಂದರ್ಭದಲ್ಲಿ ಆಸ್ತಿಕ ಮತ್ತು ನಾಸ್ತಿಕ ದರ್ಶನಗಳಂತೆ ಆಸ್ತಿಕ, ನಾಸ್ತಿಕ ಧರ್ಮಗಳೂ ಇವೆ. ಲೋಕಾಯತದಂಥ ಪಕ್ಕಾ ನಾಸ್ತಿಕ ಪಂಥಗಳು ಆ ಕಾಲದಲ್ಲೇ ಜೀವಂತವಿದ್ದುದರಿಂದ ಧರ್ಮಗಳಾಗಿರುವ ನಾಸ್ತಿಕ ಪಂಥಗಳು ಪಕ್ಕಾ ನಾಸ್ತಿಕವಾಗಿರಲಿಲ್ಲ. ಅಂದರೆ ಲೋಕಾಯತ ಧರ್ಮವಾಗಿರಲಿಲ್ಲ. ಆದರೆ ನಾಸ್ತಿಕವೆನಿಸಿದ್ದ ಜೈನ, ಬೌದ್ಧಗಳು ಧರ್ಮಗಳೂ ಆಗಿದ್ದವು. ಪ್ರಭುತ್ವದ ಆಶ್ರಯಕ್ಕೆ ನಿಲ್ಲುತ್ತಿದ್ದ ನಾಸ್ತಿಕ ಪಂಥಗಳು ಧರ್ಮಗಳಾಗುತ್ತಿದ್ದವು. ಅಂದರೆ ಸಾಂಸ್ಥೀಕರಣಗೊಳ್ಳುತ್ತಿದ್ದವು. ಶೋಷಕ ವ್ಯವಸ್ಥೆಯ ಭಾಗವಾಗುತ್ತಿದ್ದವು. ಖಾಸಗಿ ಆಸ್ತಿಯ ಒಡೆತನ ಲಭ್ಯವಾದಾಗ ಪಂಥವೊಂದು ಧರ್ಮವ್ಯವಸ್ಥೆಯಾಗುತ್ತದೆ. ತನ್ನ ದಾರ್ಶನಿಕತೆಯಿಂದ ಅದು ದೂರವಾಗತೊಡಗುತ್ತದೆ.

ದಾರ್ಶನಿಕತೆಗೆ ಚಲನಶೀಲ ಲಕ್ಷಣವಿದ್ದರೆ, ಧರ್ಮಕ್ಕೆ ಸ್ಥಗಿತತೆಯ ಗುಣವಿರುತ್ತದೆ. ಧರ್ಮದೊಳಗಿನ ದಾರ್ಶನಿಕತೆ ಉಸಿರು ಸಿಕ್ಕು ಒದ್ದಾಡುತ್ತದೆ. ಧರ್ಮವಾಗುವ ದರ್ಶನ ತನ್ನ ತಾನೇ ಉರುಲು ಹಾಕಿಕೊಳ್ಳುತ್ತದೆ.

'ಸಾಹಿತ್ಯ' ಸೃಜನಶೀಲವಾದ್ದು. ಹಾಗಾಗಿ ಅದಕ್ಕೆ ಚಲನಶೀಲ ಸ್ವಭಾವ. ಧರ್ಮವಾದ ದಾರ್ಶನಿಕತೆಗೆ, ಚಲನಶೀಲ ಸಾಹಿತ್ಯ ಹೇಗೆ ಸ್ಪಂದಿಸುತ್ತದೆ ? ಕನ್ನಡದ ಮೊದಮೊದಲ ಜೈನ ಕವಿಗಳಿಗೆ ಧರ್ಮವಾಗಿದ್ದ ಜೈನ ಎದುರಿಗಿತ್ತು. ಆದರೆ ಹರಿಹರ ರಾಘವಾಂಕರಿಗೆ ಆಗಿನ್ನೂ ಧರ್ಮವಾಗುತ್ತಿದ್ದ ಎಳೆಯ ವೀರಶೈವ ಎದುರಿಗಿತ್ತು. ಅಂದರೆ ವೀರಶೈವ ಇನ್ನೂ ತನ್ನ ದಾರ್ಶನಿಕ ಪ್ರಖರತೆಯನ್ನು ಉಳಿಸಿಕೊಂಡಿತ್ತು. ಶಿವಶರಣರು ಐತಿಹಾಸಿಕ ವ್ಯಕ್ತಿಗಳೋ, ಐತಿಹ್ಯದ ಪಾತ್ರಗಳೋ ಆದುದು ಈ ಕಾರಣಕ್ಕಾಗಿ. ವಿವಿಧ ಶೈವಗಳ ಮಧ್ಯೆ ವೀರಶೈವದ ಸ್ಥಾನಮಾನ ಇನ್ನೂ ಖಚಿತವಾಗಿರಲಿಲ್ಲ. ಉಳಿಗಮಾನ್ಯ ವ್ಯವಸ್ಥೆಯ ಜತೆ ಹೊಂದಿಕೊಂಡಿದ್ದ ದೇಗುಲ-ಮಠ ಕೇಂದ್ರಿತ ಶೈವಗಳು ತೀವ್ರವಾದ ಬಿಕ್ಕಟ್ಟಿಗೆ ಸಿಕ್ಕಿದ್ದವು. ವೀರಶೈವ ಈ ಎರಡನ್ನೂ (ಮಠ, ದೇಗುಲ) ವಿರೋಧಿಸಿತ್ತು. ಒಂದಿಲ್ಲೊಂದು ವಿಧದ ಹೊಂದಾಣಿಕೆ ಅಥವಾ ರಾಜಿಯ ಅಗತ್ಯವಿತ್ತು. ಇಂಥ ಸಂಕ್ರಮಣ ಘಟ್ಟದಲ್ಲಿದ್ದರು ಹರಿಹರ, ರಾಘವಾಂಕ. ದಾರ್ಶನಿಕ ವೀರಶೈವದ ತೀವ್ರ ಸೆಳೆತಕ್ಕೆ ಒಳಗಾಗಿದ್ದ ಇವರು ಧಾರ್ಮಿಕವಾಗಿ ಅದರಿಂದ ದೂರವಿದ್ದರು.

ಪಂಪಾದಿಗಳಿಗೆ ಸಿದ್ಧ ಮಾದರಿಯ ಕಾವ್ಯ ನಾಯಕರಿದ್ದರು. ಏಕೆಂದರೆ ಜೈನ ಧರ್ಮವಾಗಿತ್ತು. ಹರಿಹರಾದಿಗಳ ನಾಯಕರು ಮಾದರ ಚೆನ್ನಯ್ಯನಿಂದ ಹಿಡಿದು ಮಂತ್ರಿ ಬಸವಣ್ಣ, ಚಕ್ರವರ್ತಿ ಚೋಳನವರೆಗೆ ವರ್ಗ ವೈರುಧ್ಯ, ಜಾತಿ ವೈರುಧ್ಯಗಳು ತೀವ್ರ ಸಂಘರ್ಷಕ್ಕೆಡೆಮಾಡಲಿಲ್ಲ. ವೀರಶೈವದ ಐತಿಹ್ಯ ಮತ್ತು ಐತಿಹಾಸಿಕತೆ ಬರಬರುತ್ತ ಪೌರಾಣಿಕತೆಗೆ ದಾರಿ ಮಾಡಿತು ಎಂದರೇನು ? ಅಲ್ಲಮ ಒಂದು ಹಂತದಲ್ಲಿ 'ಪ್ರಭುಲಿಂಗ'ವಾಗುತ್ತಾನಲ್ಲವೇ ? ಧರ್ಮ ದಾರ್ಶನಿಕತೆಗಳ ತಾಕಲಾಟ ಶೂನ್ಯಸಂಪಾದನೆ, ಪ್ರಭುಲಿಂಗಲೀಲೆಗಳ ಕಾಲಕ್ಕೆ ಯಾವ ಆಕಾರ ಪಡೆಯಿತು ಎಂಬುದು ಕುತೂಹಲದ ಪ್ರಶ್ನೆ.

೧೨ನೇ ಶತಮಾನದ ಚಳುವಳಿಯ ವಾಸ್ತವಗಳಿಗೆ ಕಾಲಾಂತರದಲ್ಲಿ ವ್ಯಾಖ್ಯಾನಿಸಲ್ಪಟ್ಟ ವಿಧದಲ್ಲಿ ಬೇರೆ ಬೇರೆ ಆಯಾಮಗಳಿವೆ. ನಮಗಿಲ್ಲಿ ಧರ್ಮ, ದಾರ್ಶನಿಕತೆ, ಸಾಹಿತ್ಯದ ಒಳಸಂಬಂಧದ ಪ್ರಶ್ನೆ ಮಾತ್ರ ಪ್ರಸ್ತುತವಿದೆ. ಅಲ್ಲದೆ, ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಸಾಹಿತ್ಯದ ಚರ್ಚೆ ನಡೆಯುತ್ತಿರುವುದರಿಂದ, ಶಿಷ್ಟ ಸಂಸ್ಕೃತಿ ಅಥವಾ ಗ್ರಾರ್ಕಿ ಹೇಳುವಂತೆ ಧಡಿಯರ ಸಂಸ್ಕೃತಿ (ಅಥವಾ ವರ್ಗ ಸಂಸ್ಕೃತಿ) ಭಾಗವಾಗಿ ಲಿಖಿತ ಸಾಹಿತ್ಯ ಪರಂಪರೆಯ (ಕ್ಲಾಸಿಕಲ್) ಅಧ್ಯಯನವಾಗಬೇಕಾಗುತ್ತದೆ. ಇದು ಜನಪ್ರಿಯ, ಜನಪದ ಮತ್ತು ಜನಪರ ಸಂಸ್ಕೃತಿಗಳಿಂದ ಸಾರದಲ್ಲಿ ಭಿನ್ನ. ಈ ಕೆಲವು ಮಾತುಗಳನ್ನು ಇಲ್ಲಿ ಪ್ರಸ್ತಾಪಿಸಬೇಕಾದ ಜರೂರು ಸಹಿತ್ಯದ ಜತೆ 'ಧರ್ಮ-ದರ್ಶನ'ಗಳ ಸಂಬಂಧದ ಚರ್ಚೆಗೆ ಅನಿವಾರ್ಯವಿರುವುದರಿಂದ ಅಂದರೆ ವರ್ಗ ಸಂಸ್ಕೃತಿಯ ಲಕ್ಷಣ ಗಳನ್ನು ಚೆನ್ನಾಗಿ ತಿಳಿದಿರಬೇಕು. ಈ ಹಿನ್ನೆಲೆಯಲ್ಲಿ ಧರ್ಮವಾದ ದಾರ್ಶನಿಕತೆ, ಒಂದು ಸಾಹಿತ್ಯ ಕೃತಿಯ ಒಳಮೈಯನ್ನು ಹೊಕ್ಕು ಅದರ ಸೃಜನಶೀಲತೆಗೆ ಯಾವ ಬಗೆಯ ಪ್ರಭಾವ ಮಾಡಿರುತ್ತದೆಂಬುದನ್ನು ಶೋಧಿಸಬಹುದು.

ಈ ಬಗೆಯ ಚರ್ಚೆಗೆ ಪಂಪ, ಹರಿಹರ, ರಾಘವಾಂಕ, ಕುಮಾರವ್ಯಾಸರಂಥವರ ತೌಲನಿಕ ವ್ಯಾಸಂಗ ಪ್ರಯೋಜಕವಾಗಬಹುದು. ಬ್ರಾಹ್ಮಣ್ಯದಿಂದ ಜೈನಕ್ಕೆ ಮತಾಂತರ ಗೊಂಡಿದ್ದ ಪರಂಪರೆಯವ ಪಂಪ; ಬ್ರಾಹ್ಮಣ್ಯದಿಂದ ವೀರಶೈವಕ್ಕೆ ಮತಾಂತರ ಗೊಂಡಿದ್ದ ಬಸವಣ್ಣನಂಥ ನಾಯಕರ ಕಾವ್ಯ ಬರೆದವ ಆರಾಧ್ಯ ಬ್ರಾಹ್ಮಣ ಹರಿಹರ, ಅಗ್ರಹಾರದ ಬ್ರಾಹ್ಮಣ ದೇಸಿ ಕವಿ ಕುಮಾರವ್ಯಾಸ. ಆಸ್ಥಾನ ಕವಿ ಪಂಪ, ದೇವಸ್ಥಾನ ಕವಿ ಹರಿಹರ, ದೇಸೀಕೃತ ಅಗ್ರಹಾರ ಕವಿ ಕುಮಾರವ್ಯಾಸ ಈ ಮೂವರೂ ಶೋಷಕ ವರ್ಗಾಶ್ರಯದಲ್ಲಿದ್ದವರು. ಅಗ್ರಹಾರ, ಆಸ್ಥಾನಗಳಂತೆ ದೇವಸ್ಥಾನವೂ ವರ್ಗ ಶೋಷಕ ವ್ಯವಸ್ಥೆಯ ಭಾಗವಾಗಿತ್ತಷ್ಟೆ?

ಹರಿಹರ ಬಯಲಿನಲ್ಲಿದ್ದ ವೀರಶೈವ ಚಳುವಳಿಯನ್ನು ದೇವಸ್ಥಾನದಲ್ಲಿದ್ದು ನೋಡಿದ. ರಾಜಾಸ್ಥಾನ, ಅಗ್ರಹಾರಗಳಂತೂ ಸರಿಯೇ. ದೇವಸ್ಥಾನದಲ್ಲಿದ್ದು ನೋಡಿದುದರ ಪರಿಣಾಮವೆಂದರೆ ಚಳುವಳಿಯ ಮೂಲವಾಗಿದ್ದ ಉತ್ಪಾದನಾ ಸಂಬಂಧದ ನಡುವಿನ ವೈಷಮ್ಯಪೂರಿತ ವೈರುಧ್ಯವನ್ನು (ಆ್ಯಂಟಗೊನಿಸ್ಟಿಕ್ ಕಾಂಟ್ರಡಿಕ್ಶನ್) ಗುರುತಿಸದೇ ಭಕ್ತಿಗೆ ಒತ್ತು ಕೊಟ್ಟುದು; ಚಳುವಳಿಯನ್ನು ಅದರ ಅಖಂಡತ್ವದಲ್ಲಿ ಹಿಡಿಯಲಿಕ್ಕಾಗದೇ, ವ್ಯಕ್ತಿನೆಲೆಯಲ್ಲಿ ಖಂಡಖಂಡವಾಗಿ ವರ್ಣಿಸುವುದು, ಹೊಸ ದಾರ್ಶನಿಕತೆಯ ಒಳಮುಖಗಳನ್ನು ನೋಡಲಿಕ್ಕಾಗದೇ ಅದರ ಸನಾತನ ಧಾರ್ಮಿಕತೆಯನ್ನು ವಿವರಿಸುವುದು. ಅಂತೆಯೇ ಬಸವಣ್ಣನನ್ನು ವರ್ಣಿಸುವ ಕ್ರಮವನ್ನೇ ಓಹಿಲಯ್ಯ, ಹಲಾಯುಧ, ತಿರುನಾಳ್ಪೋವ, ತಿರುನೀಲಕಂಠರ

೧೨ನೇ ಶತಮಾನದ ಚಳುವಳಿಯ ವಾಸ್ತವಗಳಿಗೆ ಕಾಲಾಂತರದಲ್ಲಿ ವ್ಯಾಖ್ಯಾನಿಸಲ್ಪಟ್ಟ ವಿಧದಲ್ಲಿ ಬೇರೆ ಬೇರೆ ಆಯಾಮಗಳಿವೆ. ನಮಗಿಲ್ಲಿ ಧರ್ಮ, ದಾರ್ಶನಿಕತೆ, ಸಾಹಿತ್ಯದ ಒಳಸಂಬಂಧದ ಪ್ರಶ್ನೆ ಮಾತ್ರ ಪ್ರಸ್ತುತವಿದೆ. ಅಲ್ಲದೇ, ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಸಾಹಿತ್ಯದ ಚರ್ಚೆ ನಡೆಯುತ್ತಿರುವುದರಿಂದ, ಶಿಷ್ಟ ಸಂಸ್ಕೃತಿ ಅಥವಾ ಗ್ರಾರ್ಕಿ ಹೇಳುವಂತೆ ಧಡಿಯರ ಸಂಸ್ಕೃತಿ (ಅಥವಾ ವರ್ಗ ಸಂಸ್ಕೃತಿ) ಭಾಗವಾಗಿ ಲಿಖಿತ ಸಾಹಿತ್ಯ ಪರಂಪರೆಯ (ಕ್ಲಾಸಿಕಲ್) ಅಧ್ಯಯನವಾಗಬೇಕಾಗುತ್ತದೆ. ಇದು ಜನಪ್ರಿಯ, ಜನಪದ ಮತ್ತು ಜನಪರ ಸಂಸ್ಕೃತಿಗಳಿಂದ ಸಾರದಲ್ಲಿ ಭಿನ್ನ. ಈ ಕೆಲವು ಮಾತುಗಳನ್ನು ಇಲ್ಲಿ ಪ್ರಸ್ತಾಪಿಸಬೇಕಾದ ಜರೂರು ಸಾಹಿತ್ಯದ ಜತೆ 'ಧರ್ಮ-ದರ್ಶನ'ಗಳ ಸಂಬಂಧದ ಚರ್ಚೆಗೆ ಅನಿವಾರ್ಯವಿರುವುದರಿಂದ. ಅಂದರೆ ವರ್ಗ ಸಂಸ್ಕೃತಿಯ ಲಕ್ಷಣಗಳನ್ನು ಚೆನ್ನಾಗಿ ತಿಳಿದಿರಬೇಕು.

ವರ್ಣನೆಯಲ್ಲೂ ಅನುಸರಿಸುವುದು. ಅಂದರೆ ಐತಿಹಾಸಿಕ, ಪೌರಾಣಿಕ ಪಾತ್ರಗಳು ಕಲಬೆರಕೆಗೊಳ್ಳುವುದು. ವೀರಶೈವದ ಸನಾತನ ದಾರ್ಶನಿಕತೆಗೆ ಒತ್ತುಕೊಟ್ಟ ಆರಾಧ್ಯ ಬ್ರಾಹ್ಮಣ ಹರಿಹರ ದೇವಸ್ಥಾನೀಯ ಶ್ರದ್ಧೆಗೆ ಗಾಢವಾಗಿ ಅಂಟಿದ್ದುದು ಅಚ್ಚರಿಯಲ್ಲ. ಹಿಂದಿನೆಲ್ಲ ಶೈವಗಳಿಂದ ವೀರಶೈವ ದಾರ್ಶನಿಕವಾಗಿ ಹೇಗೆ ಹೊಸದಾಗಿತ್ತೆಂಬುದನ್ನು ಅಲ್ಲಮಪ್ರಭು ತೋರಿಸಿಕೊಡುತ್ತಾನೆ. ಅದನ್ನೇನು ಹರಿಹರ ದರ್ಶಿಸುವುದಿಲ್ಲ. ಹಾಗಾಗಿ ಚಾಮರಸ ಹುಟ್ಟುತ್ತಾನೆ. ಆದರೆ ಚಾಮರಸ ದರ್ಶನದ ತಾತ್ವಿಕ ವಿವರಕ್ಕಲ್ಲ, ಅದರ ಪವಾಡೀಯ ಕಥಾನಕಕ್ಕೆ ಜೋತು ಬೀಳುತ್ತಾನೆ. ವಚನಗಳು ಕಟ್ಟಿಕೊಡುವ ದರ್ಶನದಾಚೆ ಯಾವ ಕವಿಯೂ ಹೋಗಲಿಕ್ಕಾಗಲಿಲ್ಲ. ಅಂದರೆ ಕನ್ನಡದಲ್ಲಿ ಅಕ್ಕ, ಅಲ್ಲಮಾದಿಗಳನ್ನು ಬಿಟ್ಟರೆ ಬೇರೆ ಯಾವ ದಾರ್ಶನಿಕ ಕವಿಯೂ ಕಾಣುವುದಿಲ್ಲ. ಇವರ ದರ್ಶನ ಇವರ ಹಿಂದಿದ್ದ ಲೋಕಾಯತದಷ್ಟು ಕ್ರಾಂತಿಕಾರಕವಾಗಿದ್ದಿಲ್ಲ. ಆದಿಯ ಬೌದ್ಧ, ಜೈನದಷ್ಟು ಪ್ರಗತಿಪರವಾಗಿರಲಿಲ್ಲ. ಶೈವ ಸಾಮ್ರಾಜ್ಯದಲ್ಲಿ ಅದು ಮತ್ತೊಂದು ಹೊಸ ಪ್ರಯೋಗವಾಗಿತ್ತು ಅಷ್ಟೇ. ಹರಿಹರನ ಶಿಷ್ಯ ರಾಘವಾಂಕ ತನ್ನ ಕಾಲದಲ್ಲಿ ಪ್ರಚಲಿತವಿದ್ದ ಪವಾಡಗಳನ್ನು ನಂಬಿದ್ದ. ಅವು ನಿಜವೋ, ಸುಳ್ಳೋ ಶೋಧಿಸುವ ಕೆಲಸಕ್ಕೆ ಕೈಹಾಕುವುದಿಲ್ಲ. ಅಂಥ ಕಾಲ್ಪನಿಕ ಕತೆಗಳು ಆಗ ತುಂಬ ಜನಪ್ರಿಯವಾಗಿದ್ದುವೆಂಬುದಕ್ಕೆ ಶಾಸನಗಳಲ್ಲೂ ಸಾಕ್ಷಿಗಳಿವೆ. ಅಂಥವನ್ನು ಎತ್ತಿಕೊಂಡು ಶೈವ ಸಿದ್ಧರಾಮನ ಆಧ್ಯಾತ್ಮಿಕ ಕತೆಯನ್ನು ಹೆಣೆಯುತ್ತಾನೆ. 'ಸಿದ್ಧರಾಮ ಚರಿತೆ'ಯಲ್ಲಿ ನೀಲ ಪಟನೊಂದಿಗಿನ ತಾತ್ವಿಕ ಚರ್ಚೆಯೊಂದೇ ದಾರ್ಶನಿಕ ಸಂವಾದ ಮತ್ತು ಸಂಘರ್ಷಕ್ಕೆ ನಿದರ್ಶನವಾಗಿದೆ. ಉಳಿದಂತೆ ಈ ಕಾವ್ಯದಲ್ಲಾಗಲೀ, ಆದಿಪುರಾಣದಲ್ಲಾಗಲೀ ಧಾರ್ಮಿಕ ನೆಲೆಯ ವಿವರಗಳೇ ಪವಾಡದ ಆಕಾರದಲ್ಲಿ ತುಂಬಿ ನಿಂತಿವೆ. ಕಾವ್ಯದ ರಚನೆಗೆ ದರ್ಶನಗಳ ವಿಚಾರಗಳಲ್ಲ, ಧರ್ಮದ ವಿವರಗಳು ರೋಚಕವಾಗಿ ನೆರವಾಗಬಲ್ಲವು ಎಂಬುದೂ ವಾಸ್ತವವೇ.




ಹರಿಹರ ಶಿಷ್ಟ ವೀರಶೈವ ಸಂಸ್ಕೃತಿಯ ಹರಿಕಾರನಾದರೆ, ವೀರಶೈವದ ಜನಪದೀಯ ನೆಲೆಯೊಂದು ಚರಿತ್ರೆಯುದ್ದಕ್ಕೂ ಜೀವ ಹಿಡಿದುಕೊಂಡುಬಂತು. ಮಂಟೇಶ್ವರ, ಮಾದೇಶ್ವರ ಪರಂಪರೆ ಇದಕ್ಕೆ ನಿದರ್ಶನ. ಇವುಗಳ ಮಧ್ಯೆ ವೀರಶೈವ ಜನಪ್ರಿಯ ಸಂಸ್ಕೃತಿ ನೆಲೆಯೂ ಒಂದಿದೆ. ಅದು ಇಂದು ವೀರಶೈವ ಸಂತರ ಸಮಾಧಿ ಜಾತ್ರೆಗಳ ಸಿನೆಮಾ ಕ್ಯಾಸೆಟ್ ರೂಪದಲ್ಲಿದೆ.

ಪಂಪ ಕಾವ್ಯ, ಧರ್ಮ ಮತ್ತು ಧರ್ಮಕಾವ್ಯಗಳನ್ನು ಬರೆದ. ವೈದಿಕ ಧರ್ಮ ಕಾವ್ಯಕ್ಕೆ ಈತ ಕಾವ್ಯ ಧರ್ಮವೆಂದ, ಲೌಕಿಕವೆಂದ. ವೈದಿಕರಿಗೆ ಲೋಕ ಪೂಜ್ಯವಾದುದು ಇವನಿಗೆ ಲೌಕಿಕ, ಇಹವಾದ. ಜಿನಮತ ಮಾತ್ರ ಧರ್ಮ. ಲೌಕಿಕವನ್ನು ಈತ ಬಿಡಲಾರ ಎಂದರೆ ವೈದಿಕವನ್ನು ನಿರಾಕರಿಸಲಾರ ಎಂದೇ. ಒಬ್ಬರಿಗೆ ಧರ್ಮ ವಾಗಿರುವಂಥದು ಇನ್ನೊಬ್ಬರಿಗೆ ಲೌಕಿಕ. ಇದು ವೈರುಧ್ಯವೂ ಹೌದು, ವಿಪರ್ಯಾಸವೂ ಕೂಡ. ಭಾರತೀಯತ್ವದ ಗುಣ ವಿಶೇಷ ಇದು. ಸಂಕರ ಶಿಷ್ಟ ಸಂಸ್ಕೃತಿಗಳ ಪಡಿಪಾಟಲು ತನ್ನ ಧಾರ್ಮಿಕ ಕಾವ್ಯದಲ್ಲಿ ಪಂಪ ಮೂವರು ಮಂತ್ರಿಗಳು ಮೂರು ಮತಗಳನ್ನು ಪ್ರತಿನಿಧಿಸುತ್ತ ರಾಜಾಸ್ಥಾನದಲ್ಲಿ ಚರ್ಚೆಗೆ ಬೀಳುವ ಘಟನೆ ದಾರ್ಶನಿಕ ಸಂವಾದಕ್ಕೆ ಒಂದು ಉತ್ತಮ ನಿದರ್ಶನ. ಆದಿಪುರಾಣಕ್ಕೆ ಮೂಲ ಆಕರವಾದ ಜಿನಸೇನನ ಪೂರ್ವಪುರಾಣದಲ್ಲೇ ಈ ಘಟನೆ ವಿಸ್ತೃತವಾಗಿದೆ. ಜೈನನಾದ ಪಂಪ ಜೈನ ಮಂತ್ರಿ ವಾದದಲ್ಲಿ ಗೆಲ್ಲುತ್ತಾನೆಂದು ಪ್ರತಿಪಾದಿಸುವುದು ಸಹಜವೇ. ಆದರೆ ಅವನ ಕವಿ ಅಂತರ್ಯ ಬೇರೆಯದೇ ಆದ ಧ್ವನಿಯನ್ನು ವ್ಯಂಜಿಸುತ್ತದೆ.


ಎಸ್. ಎಸ್. ಹಿರೇಮಠ
ಪ್ರಾಚಾರ್ಯರು, ಕೊಟ್ಟೂರೇಶ್ವರ ಮಹಾವಿದ್ಯಾಲಯ, ಕೊಟ್ಟೂರು - ೫೮೩ ೧೩೪

# ಪುಟ್ಟ ಗಿಳಿಮರಿಗೆ ನೀತಿಬೋಧೆ



ಪುಟ್ಟ ಪುಟ್ಟ ರೆಕ್ಕೆಯ ಹಸಿರು ಗಿಳಿಮರಿಯೊಂದು
ದೂರ-ದೂರ ಕಣ್ಣು ಕಾಣದ ಊರಿಂದ
ಹಾರಾಡಿಕೊಂಡು, ರೆಕ್ಕೆ ಬೀಸಿ ತೇಲಾಡಿಕೊಂಡು ಬಂತು.

ಪುಟ್ಟ ಗಿಳಿಮರಿಯ ಕೆಂಪುಮೂಗು;
ಕತ್ತು ಕೊಂಕಿಸುವ ವಯ್ಯಾರ ;
ಅದರ ಪುಟ್ಟ ಪಾದಗಳು ನೋಡಿದರೆ ಖುಷಿಯಾಗುವಂತಿತ್ತು.

ಆ ಗಿಳಿಮರಿಯು ಹಾರುತ್ತಾ ಬಂದು
ನನ್ನ ಹೆಗಲಮೇಲೆ ಕುಳಿತುಕೊಂಡು
ಕೊಕ್ಕನ್ನು ಹೆಗಲಿಗುಜ್ಜಿ ಕಿವಿಯ ಬಳಿ ಬಂದು ಗುಟ್ಟು ಹೇಳಿತು.

ಹಾರಿಬಂದ ಹರದಾರಿ ದೂರ
ಹಾರಿಹೋಗಲಿರುವ ಸಾವಿರದ ಮೈಲು;
ಮೇಲೆ ಮೂಡಿಬರುವ ಚಂದಿರನ ಸೊಗಸು
ಮುಟ್ಟುವ ತವಕವೆಲ್ಲವ ಒಂದೇ ಉಸಿರಲ್ಲಿ ಉಸುರಿತು.

ಇನ್ನೇನು ಬರಸಿಡಿಲು ಅಬ್ಬರಕ್ಕೆ ;
ಬರಲಿರುವ ಬಿರುಗಾಳಿಗೆ ;
ಬರಗಾಲದಲ್ಲಿ ಒಣಗಿಹೋಗಲಿರುವ ದುಃಖಕ್ಕೆ
ಬಲಿಯಾದ ಒಣಮಾವಿನ ಮರ ನಾನು
ಏನು ಹೇಳಲಿ ಅದಕ್ಕೆ ?

"ಹಾರಾಡಲು ಸ್ವಚ್ಛಂದ ಆಕಾಶವಿದೆ.
ಬಿಸಿ ಕಳೆದುಕೊಳ್ಳಲು ಗಾಳಿಯಿದೆ.
ಹಸಿವೆಯಾದರೆ ಸಾಕು, ತಿನ್ನಲಿದೆ ಬೇಕಾದಷ್ಟು ಹಣ್ಣು,
ಚವುತಿ ಚಂದಿರನನ್ನು ಕೊಕ್ಕಲ್ಲಿ ಕುಕ್ಕಿಬರುವ ತವಕವಿದೆ,
ಎಲೆ ಮರವೆ - ಕನಸುಗಳಿವೆ ಮುಗಿಯದಷ್ಟು" ಮೃದುವಾಗಿ ಉಲಿಯಿತು.

ಜೀವದಾಸೆಯ ಕಳಕೊಂಡು
ಗಳಿಗೆ ಗಳಿಗೆಗಳ ಮೊತ್ತವನ್ನು ಎಣಿಸಿಕೊಂಡು
ಕೂತಿರುವ ನನ್ನ ಹೆಗಲಲ್ಲಿ ಹೂಗಳಿರಲಿಲ್ಲ,
ಅದು ಕೊಕ್ಕಿಂದ ಮೂಗು ತಿಕ್ಕಿದಂತೆ ತಿಕ್ಕಿದಾಗ - ಹೂವು ಅರಳಿತು ಮೈತುಂಬಾ.

"ಪುಟ್ಟ ಗಿಳಿಮರಿಯೆ ಬದುಕುವಾಸೆಯ ಕಳಕೊಂಡು
ನಿಂತಿರುವ ನನ್ನ ಮೈಯಲ್ಲಿ ಈಗ ಕಸುವಿಲ್ಲ,
ಬೇರುಗಳ ತಿಂದು ಮುಗಿಸಿವೆ ಗೆದ್ದಲುಹುಳಗಳು.
ಕನಸುಗಳ ಹೊತ್ತ ಚಿಗುರು ಸುಟ್ಟುಹೋದೀತು ನಾಳೆ.
ಅರಳಿರುವ ಹೂಗಳು ಬಿಸಿಲ ಮತ್ಸರಕ್ಕೆ ಬೀಳುವುದು ನೆಲದ ಮೇಲೆ."
ಎಂದೆ ನಾನು ನಡುನೆತ್ತಿಯ ಸುಡುವ ಬಿಸಿಲ ನೋಡಿ.

ಗಿಳಿಮರಿಯು ನಕ್ಕಿತು - ಕಿಲಕಿಲನೆ; ನನ್ನ ನೋಡಿ.
ನಾನು ಹೇಳಿದೆನಾಗ -
ಗಿಳಿಮರಿಯೆ - ಆಕಾಶವಿದೆ ತಲೆ ಮೇಲೆ, ಕಣ್ಣು ತಾಗದಷ್ಟು ಎತ್ತರದಲ್ಲಿ.
ಆದರೂ ನಿನ್ನ ಹಿಂದಿರುವುದು ಗಿಡುಗ - ಒಮ್ಮೆ ತಿರುಗಿ ನೋಡು.
ಗಾಳಿ ಬಿರುಗಾಳಿಯಾಗುವುದು ಎಷ್ಟು ಹೊತ್ತು ?
ಚಂದಿರನ ನುಂಗಲು ಕಾದಿರುವ ರಾಹು ಕಾಲವನ್ನು ಕಾಯುವುದಿಲ್ಲ,
ಕನಸು ಕಟ್ಟುವುದು ಸುಲಭ, ಅದು ಬೀಳದಂತೆ
ನೋಡಿಕೊಳ್ಳುವುದು ಕಷ್ಟ ಮರಿ !"

ಡಾ|| ಕೇಶವಶರ್ಮ ಕೆ.
ಪ್ರವಾಚಕರು, ಕನ್ನಡ ಭಾರತಿ, ಕುವೆಂಪು ವಿಶ್ವವಿದ್ಯಾನಿಲಯ
ಜ್ಞಾನ ಸಹ್ಯಾದ್ರಿ - ೫೭೭ ೪೫೧, ಶಿವಮೊಗ್ಗ ಜಿಲ್ಲೆ



# ಬೆಳಗು

ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಅಪರೂಪವೆಂಬಂತೆ ಕಂಡುಬರುವ ಕವಿ ಎಂದರೆ ದ. ರಾ. ಬೇಂದ್ರೆ. ಇವರನ್ನು ವರಕವಿ, ಕನ್ನಡನುಡಿಯ ಗಾರುಡಿಗ, ಮಾಂತ್ರಿಕ ಕವಿ, ಭಾವಗೀತದ ಮೂಲ ಪ್ರವರ್ತಕ, ಜನಪದ ಕವಿ ಎಂಬ ವಿಶೇಷಣಗಳಿಂದ ಕರೆಯಲಾಗುತ್ತದೆ. ಅಂದರೆ, ಇವರು ಬರೆದದ್ದೆಲ್ಲವೂ ಜನಭಾಷೆಯಲ್ಲಿಯೇ. ಅದರಲ್ಲೂ ಸಾಮಾನ್ಯ ಜನರ ಬದುಕು-ಬವಣೆಗಳನ್ನು ಕೇಂದ್ರವಾಗಿರಿಸಿಕೊಂಡು ಕಾವ್ಯ ರಚಿಸಿದ ಮೇರುಕವಿ. ಪ್ರಕೃತಿಪ್ರಿಯತೆ, ಆಧ್ಯಾತ್ಮಿಕತೆ ಸಾಮಾನ್ಯ ಜನರ ಜೀವನಕ್ಕೆ ಮಿಡಿಯುವ ಹೃದಯವಂತಿಕೆಯ ಅಭಿವ್ಯಕ್ತಿಕ್ರಮ ಇವರದು. ಹಾಗಾಗಿ ಇವರು ಕನ್ನಡದ ಜನಮನವನ್ನು ಗೆದ್ದಿದ್ದಾರೆ. ಶಬ್ದಾರ್ಥ ಸಹಿತವಾದ ಕಾವ್ಯಭಾಷೆ ಅವರದು. ''ವಾಕ್ಯಂ ರಸಾತ್ಮಕ ಕಾವ್ಯಂ'' ಎಂದು ಭಾರತೀಯ ಕಾವ್ಯಮೀಮಾಂಸಕಾರ ವಿಶ್ವನಾಥನು ಸಾಹಿತ್ಯ ದರ್ಪಣ ಎಂಬ ಕೃತಿಯಲ್ಲಿ ಹೇಳಿದ್ದಾನೆ. ಇದಕ್ಕೆ ಪೂರಕವಾಗಿ ದತ್ತಾತ್ರೇಯ ರಾಮಚಂದ್ರ ಬೇಂದ್ರೆಯವರ ಪ್ರತಿಭಾಚಕ್ಷು ಸಾಮಾನ್ಯತೆಯಲ್ಲಿ ಅಸಾಮಾನ್ಯತೆಯನ್ನು ಹೊಕ್ಕು ಕಾವ್ಯಕೃಷಿ ಮಾಡಿಸಿದೆ. ಆ ನಿಮಿತ್ತವಾಗಿ ರಸಾನುಭವದ ಸುಂದರ ಅಭಿವ್ಯಕ್ತಿ ಸಾಹಿತ್ಯವಾಗುತ್ತದೆ. ಶಿಲ್ಪ, ನೃತ್ಯ, ಸಂಗೀತ, ಚಿತ್ರಗಳ ಲಲಿತಕಲೆಗಳಂತೆಯೇ ಮಾತು, ಶಬ್ದಗಳಿಂದಲೂ ಆನಂದವನ್ನು ವ್ಯಕ್ತಪಡಿಸುವ ಭಾವನಾತ್ಮಕ ಭಾವಗೀತೆಗಳು ಕವಿ ಬೇಂದ್ರೆಯವರ ಹೃದಯಾಂತರಾಳದಿಂದ ಚಿಲುಮೆಯಂತೆ ಉಕ್ಕಿ ಸಂಕಲನರೂಪದಲ್ಲಿ ಪ್ರಕಟಗೊಂಡಿವೆ. ಅವುಗಳಲ್ಲಿ ಕಾಮಕಸ್ತೂರಿ, ಗರಿ, *ಸಖೀಗೀತ, ನಾದಲೀಲೆ, ಗಂಗಾವತರಣ, ಹಾಡು-ಪಾಡು,* ಅರಳು-ಮರಳು, ಬಾ ಹತ್ತರ, ಒಲವೇ ಬದುಕು, ನಾಕುತಂತಿ ಎಂಬ ಸಂಕಲನಗಳು ಹೊರಬಂದಿವೆ. ಈ 'ನಾಕುತಂತಿ' ಕೃತಿಗೆ ಜ್ಞಾನಪೀಠ ಪ್ರಶಸ್ತಿಯೂ ಸಂದಿದೆ (೧೯೭೪). ಬೇಂದ್ರೆಯವರ ಜೀವನದೃಷ್ಟಿ ಸಕಾರಾತ್ಮಕವಾದುದು, ಜೀವಪರವಾದುದು. ಇವರ ದೃಷ್ಟಿಯಲ್ಲಿ ಪ್ರಕೃತಿ ಶಾಶ್ವತ. ಬಡತನ-ಸಿರಿತನ ಶಾಶ್ವತವಲ್ಲ. ಅದನ್ನು ಕುರಿತು ಕವಿ ಹಾಡಿದ್ದು ಹೀಗೆ : ''ಎನ್ನ ಪಾಡೆನಗಿರಲಿ. ಅದರ ಹಾಡನ್ನಷ್ಟೇ ನೀಡುವೆ। ರಸಿಕ ನಿನಗೆ, ಕಲ್ಲು ಸಕ್ಕರೆಯಂಥ ನಿನ್ನೆದೆಯು ಕರಗಿದರೆ ಅದನ್ನೇ ಹಣಿಸು ನನಗೆ ॥'', ''ರಸವೆ ಜನನ, ವಿರಸ ಮರಣ, ಸಮರಸವೇ ಜೀವನ''. ಮಾತಿನಲ್ಲಿಯೇ ಮೌಲಿಕತೆ, ನಾದದಲ್ಲಿ ನವನೀತತೆ ಪಡೆಯುವ ಕವಿ ಭೃಂಗದ ಬೆನ್ನೇರಿ ಬಂದಾಗ ಕಲ್ಪನೆಯ ವಿಲಾಸಗಳನ್ನು ಸುಮಾರು ೨೭ ಸಂಕಲನಗಳಲ್ಲಿ ಹೂವಾಗಿ ಅರಳಿಸಿ ಅದರ ಫಲಿತವನ್ನು ಝೇಂಕಾರದೊಂದಿಗೆ ಸುಮಧುರ ಸವಿಯನ್ನಾಗಿ ಸಹೃದಯರಿಗೆ ನೀಡಿದ್ದಾರೆ.

*ಮಾತು ಮಾತು ಮಥಿಸಿ ಬಂದ ನಾದದ ನವನೀತಾ*
*ಹಿಗ್ಗಬೀರಿ ಹಿಗ್ಗಲಿತ್ತು ತನ್ನತಾನೆ ಪ್ರೀತಾ*
*ಅರ್ಥವಿಲ್ಲ ಸ್ವಾರ್ಥವಿಲ್ಲ ಬರಿಯ ಭಾವಗೀತಾ*
*ಭೃಂಗದ ಬೆನ್ನೇರಿ ಬಂತು ಕಲ್ಪನಾವಿಲಾಸ*

ಎಂದು ನಾದಲೀಲೆ ಸಂಕಲನದಲ್ಲಿ ಹೇಳುತ್ತಾರೆ. ಅಂತರ್ಯದಲ್ಲಿ ನೋವು ಅಡಗಿದ್ದರೂ ಭಾವಗಳ ಮಂಥನವು ನವನೀತವನ್ನುಂಟುಮಾಡಿದೆ. ಹಾಗೇ ಬೇಂದ್ರೆಯವರ ಗರಿ ಸಂಕಲನದ ಒಂದು ಪದ್ಯ ಬೆಳಗು. ಚೇತನಸ್ವರೂಪಿಯಾದುದು. ಆ ಬೆಳಗಿನಲ್ಲಿ ಸೃಷ್ಟಿಸರ್ವಸ್ವವನ್ನು ಕವಿ ಕಂಡಿದ್ದಾರೆ, ಉಂಡಿದ್ದಾರೆ, ಮೂಕವಿಸ್ಮಿತರಾಗಿದ್ದಾರೆ. ಜಗದ ಚಲನ-ವಲನವನ್ನು ಗ್ರಹಿಸಿ, ಅಭಿವ್ಯಕ್ತಿಸಿದ್ದಾರೆ.

*ಮೂಡಲ ಮನೆಯಾ ಮುತ್ತಿನ ನೀರಿನ*
*ಎರಕಽವ ಹೊಯ್ದಾ*
*ನುಣ್ಣ-ನ್ನೆರಕಽವ ಹೊಯ್ದಾ*
*ಬಾಗಿಲು ತೆರೆದೊ ಬೆಳಕು ಹರಿದೊ*
*ಜಗವೆಲ್ಲ ತೊಯ್ದ*
*ಹೊಯ್ತೋ ಜಗವೆಲ್ಲ ತೊಯ್ದ*

(ಆಧುನಿಕ ಕನ್ನಡಕಾವ್ಯ, ಪು. ೩೧)

ಒಂದು ಮುಂಜಾನೆಯ ಸೂರ್ಯೋದಯ ಮೂಡಲಮನೆಯಾಗಿ ಕವಿ ಹೃದಯಕ್ಕೆ ಭಾಸವಾಗಿದೆ. ಮುಂಜಾನೆಯ 'ಕವಳ'ದ ಮುತ್ತಿನ ನೀರಿನಂತೆ ಕಂಗೊಳಿಸುವ ಆ ಹಿಮಬಿಂದುಗಳು ಭೂದೇವಿಯಲ್ಲಿ ಶೃಂಗರಿಸಿವೆ. ಕತ್ತಲಿನ ಬಾಗಿಲು ತೆರೆದು, ಬೆಳಕಿನ ಎರಕವನ್ನು ಹೊಯ್ದು ಜಗತ್ತಿನ ಜೀವರಾಶಿಗಳ ಬದುಕು, ಬವಣೆಗಳಿಗೆ ಆ ಒಂದು ಸೂರ್ಯೋದಯ ಕಾರಣೀಭೂತವಾಗಿದೆ. ಆ ಉದಯ ಸಕಲ ಸೃಷ್ಟಿ, ಹುಟ್ಟುಗಳ ಉದಯವಾಗಿದೆ. ಮೂಡಲ ದಿಕ್ಕಿನಿಂದ (ಪೂರ್ವ) ಹರಿದು ಬಂದ ಆ ಪ್ರಾಕೃತಿಕ ಬೆಳಕು, ಜಗತ್ತನ್ನು ಆವರಿಸಿರುವ ಕತ್ತಲನ್ನು, ಅಜ್ಞಾನದ ಅಂಧಕಾರವನ್ನು ಹಿಮ್ಮೆಟ್ಟಿ ಓಡಿಸಿದೆ. ಆದರಿಲ್ಲಿ ಹಗಲು ದುಡಿಮೆಯನ್ನು ಸಾಂಕೇತಿಸಿದರೆ, ಕತ್ತಲು, ರಾತ್ರಿ ಎಂಬುದು ವಿಶ್ರಾಂತಿ, ಸೃಷ್ಟಿ ಎಂಬ ಭಾವವನ್ನು, ಸೃಷ್ಟಿಯ ಸಾಂಕೇತಿಕತೆಯನ್ನು ವ್ಯಕ್ತಪಡಿಸುತ್ತದೆ. ಇಡೀ ಜಗತ್ತು ಜ್ಞಾನಜ್ಯೋತಿಯ ಪ್ರಭೆಯಲ್ಲಿ ಮಿಂದು, ಹರುಷಗೊಳ್ಳುತ್ತಿದೆ. ಆ ಪ್ರಕೃತಿಯ ಬೆಳಗು ಕವಿಯ ಪ್ರತಿಭಾ ಬೆಳಗನ್ನೂ ಬೆಳಗಿ ಒಂದು ಬಗೆಯ ಆಧ್ಯಾತ್ಮಿಕ ಅನುಭಾವವನ್ನು ತಂದುಕೊಟ್ಟಿದೆ.

ಆ ಬೆಳಗು ಕವಿಗೆ ಅನೇಕ ಬಗೆಬಗೆಯಾಗಿ ಕಂಡಿದೆ. ಸಕಲಾಕಲ ಜೀವಿಗಳಲ್ಲಿ ರಸಾನುಭೂತಿಯನ್ನುಕ್ಕಿಸುವ ಬೆಳಗು ರತ್ನದ ರಸದ ಕಾರಂಜಿಯಂತೆ ಉಕ್ಕಿಹರಿದು, ಪ್ರಕೃತಿಯೇ ಮತ್ತೊಂದು ಸೃಷ್ಟಿ ಪಡೆದಿದೆ. ಮುಗಿದ ಮೊಗ್ಗುಗಳು ಅರಳುವಂತೆ, ಅದು ಘಮಘಮಿಸಿ ಪರಿಮಳ ಸೂಸುವಂತೆ, ಜೀವಿಗಳ ಬದುಕು ಅರಳಿ ಘಮಿಸಿದೆ. ಬೆಳಗಿನ ಮೂಲಕ ಬದುಕು ಹಸನಾಗಿದೆ. ಅದು ಪ್ರಕೃತಿಯಲ್ಲಿ, ಗಿಡಮರಗಳು ನೀಡುವ ಹೂ ಹಣ್ಣುಗಳಲ್ಲಿ. ಕವಿಯೇ ಸೋಜಿಗ ಪಡುವ ಕ್ರಮ ಹೀಗಿದೆ.

*ಎಲೆಗಳ ಮೇಲೆ ಹೂಗಳ ಒಳಗೇ*
*ಅಮೃತಽದ ಬಿಂದು*
*ಕಂಡವು – ಅಮೃತದ ಬಿಂದು*
*ಯಾರಿರಿಸಿರುವರು ಮುಗಿಲಽ ಮೇಲಿಂ*
*ದಿಲ್ಲಿಗೆ ತಂದು*
*ಈಗ – ಇಲ್ಲಿಗೇ ತಂದು.*

**ಡಾ॥ ವಿಶ್ವನಾಥ**

ಪ್ರಕೃತಿಸಂಪತ್ತಿನ ಮುಂದೆ ಮಾನವ ಶಕ್ತಿ ತಾನೇ ಏನು ಮಾಡೀತು. 'ಬೆಳಗು' ವಿಕೆಯಿಂದ ಪ್ರಕೃತಿಗೆ ನವನೂತನ ಕಳೆ, ಕಾಂತಿ, ಸೊಬಗು ಬಂದಿದೆ. ಹಿಮದ ಹನಿಗಳಾದರೋ ? ಹಿಮದ ಹನಿಗಳು ಮರದ ಎಲೆ, ಬಳ್ಳಿಗಳ ಮೇಲೆ ಕುಳಿತು ಶೋಭಿಸುತ್ತಿವೆ. ಅಷ್ಟು ದೂರದ ಗಗನದಿಂದ – ಈ ಭೂಮಿಯ ಮೇಲೆ ತಂದು ಇಟ್ಟವರ್ಯಾರು ? ಎಂದು ಪ್ರಶ್ನಿಸುವ ಬೇಂದ್ರೆ, ಅದು ಬೆಳಗು, ಸೂರ್ಯೋದಯದಿಂದ ಮಾತ್ರ ಸಾಧ್ಯವೆಂಬ ನೈಜತೆಯನ್ನು ಸಾರುತ್ತಾರೆ. ಇದು ಕಣ್ಣಿಗೆ ಕಾಣದ ಮಾಂತ್ರಿಕನ ಪವಾಡದಂತೆ ಕವಿಕಣ್ಣಿಗೆ, ಕವಿಮನಕ್ಕೆ ಗೋಚರಿಸುತ್ತದೆ; ಅಧ್ಯಾತ್ಮಕ್ಕೆ ಶಾಂತತೆಯಿಂದ ನುಸುಳಿದೆ.

ಅಷ್ಟೇ ಅಲ್ಲದೇ, ತಂಗಾಳಿಯೂ ಕೈಯ್ಯೊಳಗಿರಿಸಿದ ಬೀಸುವ ಚಾಮರದಂತೆ ತಂಪಾಗಿ ಬೀಸಿ, ಗಿಡ ಮರಗಳಲ್ಲಿ ಸಿಕ್ಕಿದ ಸುಗಂಧ ಹೊತ್ತ ದುಂಬಿಗಳು ಝೇಂಕರಿಸುತ್ತಾ ಹಾರುತ್ತವೆ. ಆ ತಂಗಾಳಿ ಗಿಡ ಮರಗಳ ಎಲೆಗಳನ್ನು ಚಾಮರದಂತೆ ತೂಗಿಸಿವೆ. ಆ ಪುಷ್ಪ ಸುವಾಸನೆ ಮೈಗೆಲ್ಲ ಸವರಿದಂತೆ ಮಘಮಘಿಸಿದೆ.

ಅದೇ ಕಾಲಕ್ಕೆ ಗಿಡಗಂಟಿಗಳಲ್ಲಿ ಹುದುಗಿದ್ದ ಪಕ್ಕಿಗಳ ಕಂಠದಿಂದ ಸುಮಧುರ ಕಲರವ ಹೊರಹೊಮ್ಮಿದೆ. ಅದು ಗಂಧರ್ವರ ಬೀಡಾಗಿ ಕವಿ ಹೃದಯಕ್ಕೆ, ಕವಿ ಕಿವಿಗೆ ಕೇಳಿಸಿದೆ. ಅಂತೂ ಕವಿ ಪಂಚೇಂದ್ರಿಯಗಳ ಮೂಲಕ ಬೆಳಗನ್ನು ಸವಿಯುತ್ತಿದ್ದಾರೆ, ಉಣ್ಣುತ್ತಿದ್ದಾರೆ. ಕಾಡಿನ ನಾಡಿನಲ್ಲಿ 'ಬೆಳಗಿನ' ರಮ್ಯತೆ ಮೂರ್ತವಾಗಿದೆ, ಹಿತವಾಗಿದೆ. ಕವಿ ಪಂಚೇಂದ್ರಿಯಗಳು ಮತ್ತೆ ತೆರದುಕೊಳ್ಳುತ್ತವೆ.

*ಕಂಡಿತು ಕಣ್ಣು ಸವಿದಿತು ನಾಲಗೆ*
*ಪಡೆದೀತೀ ದೇಹಾ*
*ಸ್ಪರ್ಶ-ಪಡೆದೀತೀ ದೇಹಾ*
*ಕೇಳಿತು ಕಿವಿಯು ಮೂಸಿತು ಮೂಗು*
*ತನ್ಮಯವೀ ಗೇಹಾ*
*ದೇವರ – ದೀ ಮನಸಿನ ಗೇಹಾ*

ಬೆಳಗಿನಿಂದ ಪಂಚೇಂದ್ರಿಯಗಳು ಸುಖ ಉಂಡಿವೆ. ಸೂರ್ಯೋದಯದ ಮೂಡಲಮನೆ ಕಂಡು ಕಣ್ಣು ಆನಂದಿಸಿದೆ. ರತ್ನದ ರಸದ ಕಾರಂಜಿಯನ್ನು ಕವಿ ಕುಡಿದು ಚಪ್ಪರಿಸಿದ್ದಾರೆ. ಹೂಗಳು ಅರಳಿ, ಬಿರಿದು ಸುವಾಸನೆ ನೀಡಿ, ಮೂಗು ಅದನ್ನು ಆಸ್ವಾದಿಸಿದೆ. ತಂಗಾಳಿಯ ಸ್ಪರ್ಶ, ದುಂಬಿಗಳು ಹೊತ್ತು ತಂದ ಸುವಾಸನೆಗಳು ಕವಿ ದೇಹಕ್ಕೆ, ಜಗತ್ತಿನ ದೇಹಕ್ಕೂ ಬೆಳಗಿನ ಮೂಲಕ ಸ್ಪರ್ಶ ನೀಡಿವೆ. ಗಿಡಗಂಟಿಗಳ ಕೊರಳೊಳಗಿಂದ ಮಧುರ ಮಾಧುರ್ಯದ ದೇವತೆಗಳಿಗೆ ಖುಷಿ ನೀಡುವ ಗಂಧರ್ವ ಗಾನವನ್ನು ಮೀರಿಸಿದೆ. ಆ ಬೆಳಗಿನ ಸಾಮರ್ಥ್ಯ, ಆಳ, ವಿಸ್ತಾರ, ಅದರ ಅಗಾಧಶಕ್ತಿ ಯಾರಿಗೂ ಕಾಣದು. ಅದು ನಿರಾಕಾರ, ಸರ್ವಸ್ವರೂಪಿ, ಚಿರಂತಮತಿ. ಈ ಎಲ್ಲವನ್ನೂ ಕವಿ ಬೇಂದ್ರೆ ಪಂಚೇಂದ್ರಿಯಗಳ ಮೂಲಕ ಅನುಭವಿಸಿ, ಮುದಗೊಂಡಿದ್ದಾರೆ. ಮನಕ್ಕೆ ಗೋಚರಿಸದ ಬೆಳಗಿನ ಬಣ್ಣ, ಆಕಾರಗಳನ್ನು ತಿಳಿಯುವ ಪ್ರಯತ್ನಕ್ಕೆ ತಡೆ ಇದ್ದರೂ 'ಶಾಂತಿರಸ'ವೆ ಅವರ ದೃಷ್ಟಿಗೆ ಮೈತುಂಬಿ ಬಂದು ನಿಂತು ವೈರಾಗ್ಯ ಹರಿಸಿದೆ. ಇದು ಸಾಮಾನ್ಯವಾದ ಬೆಳಗು ಅಲ್ಲವೇ ಅಲ್ಲ. ''ಇದು ಬರಿ ಬೆಳಗಲ್ಲೋ ಅಣ್ಣ'' ಎನ್ನುವ ಕವಿಗೆ ಪ್ರೀತಿಯಿಂದ ಶಾಂತಿರಸವೇ ಮೈದೋರಿದೆ, ತನ್ಮಯತೆ ಸಿದ್ಧಿಸಿದೆ.

ಕವಿ ಚನ್ನವೀರ ಕಣವಿಯವರು ಕಾವ್ಯಾನುಸಂಧಾನ ಕೃತಿಯಲ್ಲಿ 'ಬೆಳಗು' ಕವನ ಕುರಿತು ಹೀಗೆ ಅಭಿಪ್ರಾಯಿಸಿದ್ದಾರೆ. ಒಬ್ಬ ಹೆಣ್ಣುಮಗಳು ಮುಂಜಾನೆ ಬಾಗಿಲನ್ನು ತೆರೆದು ಅಂಗಳದ ತುಂಬ ಮುತ್ತಿನ ನೀರನ್ನು ಚಿಮುಕಿಸುವ ಚಿತ್ರ ಎನ್ನುತ್ತಾರೆ.

ರಾಷ್ಟ್ರಕವಿ ಕುವೆಂಪು ಅವರ ಪಕ್ಷಿಕಾಶಿ ಕವನ ಸಂಕಲನದಲ್ಲಿ ಸೂರ್ಯೋದಯ ಕುರಿತ ಪದ್ಯ ಹೀಗಿದೆ. ಅದು ಬೆಳಗನ್ನು ಕುರಿತುದುದಾಗಿದೆ :

*ಶರತ್ಕಾಲದ ಸೂರ್ಯೋದಯದಲಿ*
*ಸ್ವರ್ಗವು ಹೊಮ್ಮಿರೆ ಮರ್ತ್ಯಹೃದಯದಲಿ*
*ಹೊರಹೊರಟೆನು ನಾ ಸಂಚರಿಸೆ*
*ಹೊಂಗದಿರ್ಗಳ ಮಳೆ ಸುರಿಸುರಿದಿತ್ತು* (ಕುವೆಂಪು ಸಮಗ್ರಕಾವ್ಯ, ಪು. ೬೩೨)

ಮಳೆಗಾಲದ ಸೂರ್ಯೋದಯವು ಕವಿಗೆ ಚಿನ್ನದ ಬಣ್ಣವನ್ನು ಸೂಸುತ್ತಾ, ಹುಲ್ಲು ಎಸಳಿನ ಮೇಲೆ ಬಿದ್ದಿರುವ ನೀರಹನಿಗಳು ಉರಿ-ಕಿಡಿಗಳಂತೆ ಕಂಡು, ತೊಯ್ದಿರುವ ಧರೆ ಸ್ವರ್ಗವಾಗಿ ಕಂಗೊಳಿಸುತ್ತಿದೆ. ಭಾವಾವೇಶದಿಂದ ಹಿಮಮಣಿಗಳನು ಕಾಣುವ ಕವಿಗೆ, ಹೃದಯದಲ್ಲಿ ಶೃಂಗಾರರಸದ ತನ್ಮಯತೆ ಒದಗಿಬರುತ್ತದೆ. ನೀರು ಹನಿಗಳೇ ಕವಿಯನ್ನು ರಮಿಸುತ್ತವೆ, ಮುತ್ತಿಟ್ಟ ಅನುಭವವಾಗುತ್ತದೆ, ಹುಲ್ಲಿನ ಸ್ಪರ್ಶ ಇನಿಯನ ತುಟಿಯು ಮುತ್ತಿಟ್ಟಂತಾಗಿದೆ. ಆ ಸೂರ್ಯೋದಯವೇ ಒಂದು ಚೈತನ್ಯದಾಯಕವಾಗಿದೆ ಕವಿ ಅನುಭೂತಿಗೆ.

''ಮೂಡುವನು ರವಿ ಮೂಡುವನು ಕತ್ತಲೊಳಗೆ ಜಗಳಾಡುವನು'' ಎಂದು ಹಾಡಿದ ಇದೇ ಕವಿಗೆ ಬೇಂದ್ರೆಯವರ ಮೂಡಲಮನೆ, ಕವಿ ಕುವೆಂಪು ಅವರಲ್ಲಿ ಇಂದ್ರದಿಗಂತವಾಗಿ ಮೂಡಿಬಂದಿದೆ.

*ಇಂದ್ರದಿಗಂತದಿ ದೂರಾದ್ದೂರಂ*
*ಪ್ರಾತಃ ಸ್ವರ್ಗದ ಸ್ವರ್ಣದ್ವಾರಂ*
*ನೋಡದೋ ತೆರೆಯುತಿದೆ;*
*ಲೋಕದ ನಯನಕ್ಕೋಕುಳಿ ಯೆರಚುತೆ*
*ಮೋಹಿಸಿ ಕರೆಯುತಿದೆ* (ಕುವೆಂಪು ಸಮಗ್ರ ಕಾವ್ಯ, ಪು. ೬೫೩)

ಇಲ್ಲಿಯೂ ಪ್ರಾಕೃತಿಕ ಬಾಗಿಲಾದ ಸೂರ್ಯೋದಯದ ಚಿತ್ರಣವಿದೆ. ಇಲ್ಲಿ ಕವಿ ಮೂಡಣ ದಿಕ್ಕಿಗೆ ಬದಲಾಗಿ ಇಂದ್ರದಿಗಂತ ಎಂದು ಕರೆದಿರುವುದು ಸೂಕ್ತವಾಗಿಯೇ ಇದೆ. ಸರ್ವಭೋಗ, ವೈಭವ ಪ್ರತೀಕಗಳ ಶ್ರೇಷ್ಠತೆಯ ಉತ್ತಮಿಕೆಯನ್ನು ಈ ಪದ ಸೂಚಿಸುತ್ತದೆ. ಅಲ್ಲಿಯ ಬೆಳಗು, ಇಲ್ಲಿ ಇಂದ್ರದಿಗಂತ. ಪ್ರಾತಃಸ್ವರ್ಗ, ಸ್ವರ್ಣದ್ವಾರ ಬಂಗಾರದ ಬಾಗಿಲು ಔನ್ನತ್ಯದ ಸೂರ್ಯೋದಯದ ಅನುಭವವನ್ನು ಕವಿ ಕಂಡಿದ್ದಾರೆ. ಆ ಒಂದು ಮುಂಜಾವಿನ ಉದಯವು ಕುಂಕುಮದ ಕೆಂಪಂತೆ, ಕಾಮನಬಿಲ್ಲಿನ ಸಪ್ತವರ್ಣಗಳನ್ನು ಆವರಿಸಿಕೊಂಡು, ರೇಷ್ಮೆಯ ದುಕೂಲದಂತೆ ಮಿರಿಮಿರಿಗುಟ್ಟುತ್ತಾ ಹೊನ್ನಿನ ತೊರೆಯನ್ನೇ ನೆನಪಿಸುತ್ತದೆ. ಸ್ವರ್ಣದ್ರವವೇ ಜಲವಿಸ್ತೀರ್ಣದಂತೆ, ಮನ್ಮಥ-ರತಿಯರ ಓಕುಳಿಯಾಟದಂತೆ ಪ್ರಕೃತಿಯ ಸಂಸರ್ಗವೇ ಅಲ್ಲಿ ಕೆಂಪು ಕೆಂಪಾಗಿ ಮೈದಳೆದಿದೆ; ಅದೂ ಹೊನ್ನಿನ ಬಣ್ಣದೊಂದಿಗೆ. ಅಂತಹ ಅರುಣೋದಯ ಕಾಲವು ನಲ್ಲ-ನಲ್ಲೆಯರ ಜೀವನ ಪ್ರೀತಿಯ ಕೆಂದುಟಿಯ ಜೇನಿನಂತೆ ಕವಿ ಹೀರಿದ್ದಾರೆ. ಇಲ್ಲಿಯೂ ಕವಿ ಪಂಚೇಂದ್ರಿಯಗಳಲ್ಲದೆ, ರತಿಸುಖವನ್ನು ಅನುಭವಿಸಿದ ಭೋಗಕ್ಕೆ ಅನ್ವಯಿಸಿಕೊಂಡಿದ್ದಾರೆ. ಸೂರ್ಯೋದಯದ ಸ್ಥಾಯಿ 'ರವಿ' ಮತ್ತು 'ಶಾಂತ'. ಅಲ್ಲಿಂದ ಕವಿಮನಸ್ಸು ಪುಳಕಗೊಂಡು... ರಸಾಸ್ವಾದನೆಗೊಂಡಿದೆ.

*ರತಿಯೋಕುಳಿಯಂತೆ*
*ಶ್ರೇಷ್ಠತೆ ಸಂಸರ್ಗಿಸೆ ಸಾಮಾನ್ಯತೆ*
*ಹೊಳೆಯದೆ ಹೊನ್ನಂತೆ ?* (ಅದೇ)

ಇದೇ ಸೂರ್ಯೋದಯವನ್ನು ಪುತಿನ ಅವರು ಹಣತೆ ಎಂಬ ಸಂಕಲನದಲ್ಲಿ ಹೀಗೆ ಅಭಿವ್ಯಕ್ತಿಸಿದ್ದಾರೆ :

*ದಾನವ ಹೃತ ಮೇದಿನಿಯಂ*
*ದಂಷ್ಟ್ರಾಗ್ರದೊಳಿರಿಸಿ*
*ಭೂದಾರಂ ಪಾತಾಳವ-*
*ನುಳಿದೆದ್ದನೋ ಎನಿಸಿ*
*ದೂರ ದಿಗಂತದೊಳೊಪ್ಪಿರೆ*
*ರವಿಮಂಡಿತ ಶೃಂಗಂ*

ಪುತಿನ ಅವರು ಸೂರ್ಯೋದಯ ಗಮನಿಸಿದುದು ಪುರಾಣದ ಹಿನ್ನೆಲೆಯಲ್ಲಿ, ಅವರ ಭವನಿಮಜ್ಜನ ಚಾತುರ್ಯದಲಿ. ಪ್ರತಿಭಾ ಮಹೋನ್ನತಿಯಲಿ.

ಶೃಂಗದ ತುದಿಯಲ್ಲಿ ಮೂಡಿಬರುತ್ತಿರುವ ಸೂರ್ಯೋದಯವು, ರವಿ ಮಂಡಿತವಾದ ಬೆಟ್ಟದ ಕೋಡೊಂದು ಅವರ ಕಣ್ಣಿಗೆ ಪುರಾಣದಲ್ಲಿ ಚಿತ್ರಿಸಿರುವಂತೆ ಹಿರಣ್ಯಾಕ್ಷನಿಂದ ರಸಾತಳಕ್ಕೆ ಅದ್ದಿಹೋದ ಭೂಮಂಡಲವನ್ನು ವಿಷ್ಣು ವರಾಹಾವತಾರ ತಾಳಿ ತನ್ನ ಕೋರೆದಾಡೆಯ ಮೇಲೆತ್ತಿ ನಿಲ್ಲಿಸಿದಂತೆ ತೋರಿದೆ.

ನವೋದಯ ಸಾಹಿತ್ಯ ಪ್ರಕಾರದಲ್ಲಿ ಬೇಂದ್ರೆ, ಪುತಿನ, ಕುವೆಂಪು ಈ ಮೂವರೂ ರತ್ನತ್ರಯರು. ಆದರೆ ಬೇಂದ್ರೆಯವರ ಜನಭಾಷೆಯ ಸೃಷ್ಟಿಯ ಸೊಗಡು, ಕುವೆಂಪು, ಪುತಿನ ಅವರಲ್ಲಿ ಸಾಮಾನ್ಯರಿಗೆ ಸಿದ್ಧಿಸದು. ಆದ್ದರಿಂದಲೇ ಕವಿ ಬೇಂದ್ರೆ ಜನತೆಯ ಕವಿಯಾಗಿ ಮುಂಚೂಣಿಯಲ್ಲಿ ನಿಲ್ಲುತ್ತಾರೆ. ಪಂಡಿತರು, ವಿದ್ವತ್‌ಗಳಿಗೆ ಕುವೆಂಪು, ಪುತಿನ ಅವರ ಕಾವ್ಯಗಳು ಅರ್ಥವಾಗುವುದಾದರೆ, ಪಾಮರರಿಗೆ ಬೇಂದ್ರೆ ಕಾವ್ಯ ಜನಪದ ಗತಿಯಲ್ಲಿ ಎಟಕಿ ನಿಲ್ಲುತ್ತದೆ.

''ನಿನ್ನ ಮುಖಸ್ಪರ್ಶವೇ ಸಾಕು, ಹೊಸ ಸೃಷ್ಟಿ ಬರಬಹುದು'' ಎಂದು ಹೇಳುವ ಬೇಂದ್ರೆ ಅವರ ರಚನೆ ಶ್ರೀಸಾಮಾನ್ಯರಿಗೆ ಸರಳವಾಗಿ ಅರ್ಥವಾಗುತ್ತದೆ. ಈ ನಿಟ್ಟಿನಲ್ಲಿ ಕನ್ನಡ ಮತ್ತು ಜಾನಪದ ಸತ್ವವನ್ನು ಅರಗಿಸಿಕೊಂಡ ಕವಿ ಬೇಂದ್ರೆ ಎಂಬ ಮಾತು ಉಚಿತವಾಗಿಯೇ ಇದೆ. ಅಂತಹ ವರಕವಿ ಸಾಹಿತ್ಯ ಸೂರ್ಯೋದಯದ ಮೂಲಕ, ನಾಟಕ ರಚನೆಯ ಮೂಲಕ, ವಾಗ್ದೇವಿಯ ಭಂಡಾರದ ಕಣಜವನ್ನು ತುಂಬಿ ಬೆಳಗು ಮೂಡಿಸಿ, ಸಹೃದಯ ಸಂಪನ್ನ ಸಿರಿವಂತರಾಗಿದ್ದಾರೆ. ಇವರು ಕನ್ನಡ ಸಾಹಿತ್ಯ ಕಂಡ ಅಪರೂಪದ ಆಧುನಿಕ ಕವಿಗಳಲ್ಲಿ ಪ್ರಮುಖರಾಗಿ ಕಂಡುಬರುತ್ತಾರೆ. ''ಪ್ರಜ್ಞಾನವನವೋನ್ಮೇಷಶಾಲಿನೀ ಪ್ರತಿಭಾ ಮಾತಾ'' ಎಂಬ ಭಟ್ಟತಾತನೆಂಬ ಕಾವ್ಯಮೀಮಾಂಸಕನ ವ್ಯಾಖ್ಯಾನವು ಶಬ್ದಗಾರುಡಿಗ ಕವಿ ಬೇಂದ್ರೆಯವರ 'ಬೆಳಗು' ಕವನದ ರಚನೆಗೆ ಪುಷ್ಟಿ ನೀಡುತ್ತದೆ.

**ಡಾ|| ವಿಶ್ವನಾಥ**
ಕನ್ನಡ ವಿಭಾಗ, ಮೈಸೂರು ವಿಶ್ವವಿದ್ಯಾನಿಲಯ, ಅಲಂಪು, ನಂ. ೧೨೫೭, ಪಡುವಣ ರಸ್ತೆ, ೪ನೇ ತಿರುವು
ಟಿ.ಕೆ. ಬಡಾವಣೆ, ೪ನೇ ಹಂತ, ಕುವೆಂಪುನಗರ, ಮೈಸೂರು - ೫೭೦ ೦೨೩

# ಖೈದಿಗಳ ಅಭಿನಯದ ಕಾರ್ನಾಡರ ತಲೆದಂಡ

ಟಿ. ಯಲ್ಲಪ್ಪ

ಸೆರೆಮನೆಯ ನಾಲ್ಕು ಗೋಡೆಗಳ ನಡುವಿನ ಕ್ರೂರ ಒಂಟಿತನ ಹಾಗೂ ಅರಿವಿನ ಐಚ್ಛಿಕತೆಯನ್ನೂ ಮೀರಿ ಘಟಿಸಿಬಿಡುವ ಮಾನವಸಹಜ ಅಪರಾಧಕ್ಕಾಗಿ, ಇಡೀ ಬದುಕನ್ನು ಕಳೆದುಕೊಂಡು ಅನುಭವಿಸಬೇಕಾದ ಶಿಕ್ಷೆ, ಖೈದಿಗಳನ್ನು ಪಾಪಪ್ರಜ್ಞೆಯ ಕತ್ತಲ ಕೂಪಕ್ಕೆ ದೂಡಿ ಬಿಡುತ್ತದೆ. ಬಿಡುಗಡೆಯ ನಂತರವೂ, ಸಮಾಜದ ಕುಹಕ, ಕಟಕಿಗಳ ಕ್ರೌರ್ಯದಿಂದ ತಪ್ಪಿಸಿಕೊಳ್ಳಲಾಗದೆ ಮುಖ್ಯ ವಾಹಿನಿಯಿಂದ ದೂರವೇ ಉಳಿದುಬಿಡಬಹುದಾದ ಖೈದಿಗಳ ಬದುಕಿಗೊಂದು ಆತ್ಮವಿಶ್ವಾಸದ ಹೊರದಾರಿಯಾಗಿ 'ರಂಗಭೂಮಿ'ಯನ್ನು ಚಿಕಿತ್ಸಕವಾಗಿ ಬಳಸಬಹುದೆಂಬ ಅರಿವಿನೊಂದಿಗೆ ಮೈಸೂರಿನ 'ಸಂಕಲ್ಪ' ಎಂಬ ರಂಗಸಂಸ್ಥೆ ಹುಟ್ಟಿಕೊಂಡದ್ದು! ಈಗಾಗಲೇ ಬಳ್ಳಾರಿ ಹಾಗೂ ಮೈಸೂರಿನ ಕೇಂದ್ರ ಕಾರಾಗೃಹದ ಖೈದಿಗಳಿಗಾಗಿ 'ಮಾರನಾಯಕ', 'ರಕ್ತಾಕ್ಷಿ' ನಾಟಕಗಳನ್ನು ಖೈದಿಗಳಿಂದಲೇ ಪ್ರಯೋಗಿಸಿ ಯಶಸ್ವಿಯಾದ ಹಿನ್ನೆಲೆಯಲ್ಲಿ ಈ ಸಂಸ್ಥೆಯು ಇತ್ತೀಚೆಗೆ, ಬೆಂಗಳೂರಿನ ಕಾರಾಗೃಹವಾಸಿಗಳ ಕೈಯಲ್ಲಿ ರವೀಂದ್ರ ಕಲಾಕ್ಷೇತ್ರದಲ್ಲಿ ಗಿರೀಶ್ ಕಾರ್ನಾಡರ 'ತಲೆದಂಡ' ನಾಟಕವನ್ನು ಪ್ರಯೋಗಿಸಿದ್ದರ ಹಿನ್ನೆಲೆಯಲ್ಲಿ ಹತ್ತು ಹಲವು ನಿರೀಕ್ಷೆ, ಕುತೂಹಲಗಳಿದ್ದವು. (ಕಾರಾಗೃಹವಾಸಿಗಳನ್ನು ರಂಗಕ್ರಿಯೆಯಲ್ಲಿ ತೊಡಗಿಸಿಕೊಳ್ಳುವಾಗ ಎದುರಾಗುವ ಕಾನೂನಿನ ಸಮಸ್ಯೆ, ಸ್ವಲ್ಪ ಎಚ್ಚರ ತಪ್ಪಿದರೆ ತನ್ನ ತಲೆಗೇ ಬರಬಹುದಾದ ಕುತ್ತು ಮತ್ತು ನಿರ್ದೇಶನದ ಸಮಸ್ಯೆಗಳನ್ನು ಸವಾಲಿನಂತೆ ಸ್ವೀಕರಿಸಿ ಹುಲಗಪ್ಪ ಕಟ್ಟೀಮನಿ ಅವರು ಈ ನಾಟಕವನ್ನು ನಿರ್ದೇಶಿಸುವ ಸವಾಲನ್ನು ದಿಟ್ಟವಾಗಿ ಎದುರಿಸಿದ್ದಾರೆ. ಸುಮಾರು ಎಂಟು ವರ್ಷಗಳಿಂದ ಸಕ್ರಿಯವಾಗಿ ಈ ಕ್ರಿಯೆಯಲ್ಲಿ ತೊಡಗಿಕೊಂಡದ್ದರ ಪ್ರತಿಫಲದಂತೆ ಜೈಲಿನ ಆವರಣದ ರಂಗಶಿಬಿರವಾಗಿದ್ದ ಈ ಚಟುವಟಿಕೆ ಇದೀಗ ಒಂದು ಸಾರ್ವಜನಿಕರೆದುರಿನ ರಂಗಪ್ರಯೋಗವಾಗುವುದರ ಮೂಲಕ ಇಡೀ ಭಾರತದ ರಂಗಭೂಮಿ ಹಾಗೂ ಖೈದಿಗಳ ಬದುಕಿನ ರೀತಿಗೊಂದು ಸಂಚಲನೆ ಒದಗಿಸಿದ ಪ್ರಸಂಗವಾಗಿಯೂ ಗಮನ ಸೆಳೆದಿದೆ.)

'ತಲೆದಂಡ' ನಾಟಕ ಕರ್ನಾಟಕದ ಚರಿತ್ರೆಯಲ್ಲಿ ಸಾಹಿತ್ಯಕ, ಸಾಮಾಜಿಕ ಹಾಗೂ ಸಾಂಸ್ಕೃತಿಕವಾಗಿ ಒಂದು ಕ್ರಾಂತಿಯನ್ನೇ ಉಂಟುಮಾಡಿದ ಬಸವ, ಬಿಜ್ಜಳರ ಯುಗಕ್ಕೆ ಸಂಬಂಧಪಟ್ಟಿದೆ. ಇಲ್ಲಿ ಬಸವ ಪುರಾಣವಾಗಲಿ, ಬಿಜ್ಜಳನ ಚರಿತ್ರೆಯ ಶೋಧವಾಗಲಿ ನಾಟಕದ ವಸ್ತುವಾಗಿಲ್ಲ, ಆ ಕಾಲದ ಸಾಮಾಜಿಕ ಆಶಯ, ಸತ್ವ , ತಲ್ಲಣ, ಸಂಘರ್ಷಗಳ ಶೋಧವನ್ನು ನಾಟಕ ವಾಸ್ತವವಾದಿ ನೆಲೆಯಿಂದ ಅತ್ಯಂತ ನಾಟಕೀಯವಾಗಿ ಕಟ್ಟಿಕೊಡುತ್ತದೆ. ಬಸವಣ್ಣ ಇಲ್ಲಿ ಕೇವಲ ಒಬ್ಬ ಸಂತನೋ ಪವಾಡಪುರುಷನೋ ಅಲ್ಲ, ಬಿಜ್ಜಳ ಅಧಿಕಾರಶಾಹಿಯ ಜಡಪ್ರತಿನಿಧಿಯೂ ಅಲ್ಲ, ಇವು ಮಾನವ ಸಹಜ ನಡೆ, ನುಡಿ, ದೌರ್ಬಲ್ಯಗಳಿಂದ ಕೂಡಿದ ಮನುಷ್ಯಪಾತ್ರಗಳು.

'ತಲೆದಂಡ' ಒಟ್ಟುಮೂರು ಅಂಕಗಳಿಂದ, ಹದಿನಾರು ದೃಶ್ಯಗಳಿಂದ ಕೂಡಿದ್ದು, ಮೊದಲ ಅಂಕದಲ್ಲಿ ಬಿಜ್ಜಳನ ಭಂಡಾರಿಯಾದ ಬಸವಣ್ಣ ಎದುರಿಸುವ ಆಪಾದನೆ, ಮತ್ತದರ ಸಲುವಾದ ದೃಶ್ಯಗಳು, ಎರಡನೇ ಅಂಕದಲ್ಲಿ ಬ್ರಾಹ್ಮಣ ಕನ್ಯೆ - ಶೀಲವತಿ ಹಾಗೂ ಚಮ್ಮಾರ ಹುಡುಗನ ನಡುವಿನ ಮದುವೆಯ ಬಗೆಗಿನ ಪರಿಶೀಲನೆ, ಮೂರನೆಯದರಲ್ಲಿ ಸೋವಿದೇವ ತನ್ನ ತಂದೆ ಬಿಜ್ಜಳನನ್ನು ಬಂಧಿಸಿ ತಾನು ರಾಜನಾಗಲು ನಡೆಸುವ ಹುನ್ನಾರಗಳಿದ್ದು, ನಾಟಕದ ಪ್ರಧಾನ ಆಶಯಗಳು ಈ ಪ್ರಮುಖ ಹಂತಗಳಲ್ಲಿ ಬೆಳೆಯುತ್ತ, ಪರಸ್ಪರ ಘರ್ಷಿಸುತ್ತ ಸಾಗಿ ಆ ಯುಗದ ದ್ವಂದ್ವಗಳನ್ನು ನಾಟಕೀಯವಾಗಿ ಕಟ್ಟಿಕೊಡುತ್ತದೆ. ಈ ನಾಟಕದ ಒಟ್ಟು ಕಥಾ ಸ್ವರೂಪವನ್ನು ಘಟನಾವಳಿಗಳನ್ನು ಹೀಗೆ ಗ್ರಹಿಸಬಹುದು; ವೈದಿಕ ಧರ್ಮಕ್ಕೆ ಪ್ರತಿಕ್ರಿಯೆಯಾಗಿ ಹುಟ್ಟಿಕೊಂಡ ಜೈನಧರ್ಮ ಕೋಮು ಹಾಗೂ ಜಾತಿ ಅಸಮಾನತೆಯನ್ನು ಕಾಯ್ದುಕೊಂಡ ಉಗ್ರ ಸನಾತನಿಗಳು, ಇದಕ್ಕೆ ಉಗ್ರ ಪ್ರತಿಕ್ರಿಯೆಯಾಗಿ ಹುಟ್ಟಿಕೊಂಡ ಶರಣ ಚಳುವಳಿ, ಇವರ ನಡುವಿನ ಸಂಘರ್ಷ, ಬಿಜ್ಜಳ ಬಸವ ಪರವಾಗಿದ್ದಾನೆಂದು ಅವನ ಮಗನನ್ನೇ ಅವನ ವಿರುದ್ಧ ಎತ್ತಿ ಕಟ್ಟಿ ಅವನಿಗೆ ಪಟ್ಟ ಕಟ್ಟಿ ಸಂತೋಷಿಸುವ ವೈದಿಕರು ಒಂದು ಕಡೆ.

ಬಸವಣ್ಣನ ಕ್ರಾಂತಿಯನ್ನು ಅಪಾರ್ಥಮಾಡಿಕೊಂಡು, ಉಗ್ರಗಾಮಿಯಾಗುವ ಜಗದೇವ, ರಾಜಕೀಯ ವಿರೋಧಿಗಳನ್ನು ಸದೆಬಡಿಯುವುದೇ ರಾಜಕಾರಣವೆಂದು ಸನಾತನಿಗಳ ಕುತಂತ್ರದ ಕೈಗೊಂಬೆಯಾಗಿ ತಂದೆಯ ಸಿಂಹಾಸನಕ್ಕೆ ಹಂಬಲಿಸುವ ಬಿಜ್ಜಳನ ಮಗ ಸೋವಿದೇವ, ಸಂಬಂಧಗಳ ಪಾವಿತ್ರ್ಯತೆಗಾಗಿ ಭಾವನಾತ್ಮಕವಾಗಿ ಹಂಬಲಿಸುವ ರಾಣಿ ರಂಭಾವತಿ ಹಾಗೂ ಗಂಗಾಂಬಿಕೆಯರದು ಈ ಯುಗದ ಒಂದು ವಿನ್ಯಾಸ. ವೈದಿಕ ಸನಾತನಿಗಳಾದ ಮಂಚಣ್ಣ ಕ್ರಮಿತ, ದಾಮೋದರ ಭಟ್ಟರು ಯಥಾಸ್ಥಿತಿ ವಾದವನ್ನು ಎತ್ತಿಹಿಡಿಯುವ ಮೂಲಕ ವ್ಯವಸ್ಥೆಯ ಕ್ರೌರ್ಯವನ್ನು ಪೋಷಿಸಿಕೊಂಡು ಬರುವ ಮೂಲಕ ಈ ಯುಗದ ತಲ್ಲಣಗಳನ್ನು ಈ ನಾಟಕದಲ್ಲಿ ಹಿಡಿದಿಡಲಾಗಿದೆ. ತನ್ನ ಕ್ರಾಂತಿಯ ಪರಿಣಾಮಗಳನ್ನು ಮುಂದಾಲೋಚಿಸಿ, ವಿವೇಚನೆಯಿಂದ ವರ್ತಿಸುವ ಬಸವಣ್ಣ; ತನ್ನ ಪರಿಮಿತಿಯಲ್ಲೇ ಬಸವನಿಗೆ ಸ್ಪಂದಿಸುವ ಬಿಜ್ಜಳ ಈ ಯುಗದ ಸಂಘರ್ಷದ ವಾಸ್ತವವನ್ನು ಸಮರ್ಥವಾಗಿ ಪ್ರತಿನಿಧಿಸುತ್ತಾರೆ.

ದೇವರು ಹಾಗೂ ಮನುಷ್ಯನ ನಡುವಿನ ಸಂಬಂಧದ

'ತಲೆದಂಡ' ನಾಟಕ ಕರ್ನಾಟಕದ ಚರಿತ್ರೆಯಲ್ಲಿ ಸಾಹಿತ್ಯಕ, ಸಾಮಾಜಿಕ ಹಾಗೂ ಸಾಂಸ್ಕೃತಿಕವಾಗಿ ಒಂದು ಕ್ರಾಂತಿಯನ್ನೇ ಉಂಟುಮಾಡಿದ ಬಸವ ಬಿಜ್ಜಳರ ಯುಗಕ್ಕೆ ಸಂಬಂಧಪಟ್ಟಿದೆ. ಇಲ್ಲಿ ಬಸವ ಪುರಾಣವಾಗಲಿ, ಬಿಜ್ಜಳನ ಚರಿತ್ರೆಯ ಶೋಧವಾಗಲಿ ನಾಟಕದ ವಸ್ತುವಾಗಿಲ್ಲ, ಆ ಕಾಲದ ಸಾಮಾಜಿಕ ಆಶಯ, ಸತ್ವ, ತಲ್ಲಣ, ಸಂಘರ್ಷಗಳ ಶೋಧವನ್ನು ನಾಟಕ ವಾಸ್ತವವಾದಿ ನೆಲೆಯಿಂದ ಅತ್ಯಂತ ನಾಟಕೀಯವಾಗಿ ಕಟ್ಟಿಕೊಡುತ್ತದೆ. ಬಸವಣ್ಣ ಇಲ್ಲಿ ಕೇವಲ ಒಬ್ಬ ಸಂತನೋ ಪವಾಡ ಪುರುಷನೋ ಅಲ್ಲ, ಬಿಜ್ಜಳ ಅಧಿಕಾರಶಾಹಿಯ ಜಡಪ್ರತಿನಿಧಿಯೂ ಅಲ್ಲ, ಇವು ಮಾನವ ಸಹಜ ನಡೆ, ನುಡಿ, ದೌರ್ಬಲ್ಯಗಳಿಂದ ಕೂಡಿದ ಮನುಷ್ಯಪಾತ್ರಗಳು.



# ಸಾದರ ಸ್ವೀಕಾರ

**ಶಬ್ದಗುಣ** (ಅರೆವಾರ್ಷಿಕ ಪತ್ರಿಕೆ) ಸಂ. ವಸಂತ ಬನ್ನಾಡಿ
**ಪುಟ : ೧೫೨** **ಬೆಲೆ : ರೂ. ೬೦**
**ಶಬ್ದಗುಣ ಬಳಗ**, ವಿಠಲವಾಡಿ, ವಡೇರ ಹೋಬಳಿ, ಕುಂದಾಪುರ-೧

**ಆಗಮಿಕ** (ಜೈನ ಶೋಧ ಪ್ರಬಂಧಗಳ ಸಂಕಲನ)
ಡಾ॥ ಶಾಂತಿನಾಥ ದಿಬ್ಬದ
**ಪುಟ : ೧೪೦** **ಬೆಲೆ : ರೂ. ೧೦೦**
**ಮರುಗ ಪ್ರಕಾಶನ**, ಸರಸ್ವತಿಪುರ, ಗುಲಬರ್ಗಾ - ೬

**ಜೀವಪರ - ಜನಪರ** (ಪ್ರಬಂಧ ಸಂಕಲನ)
ಡಾ॥ ಶಾಂತಿನಾಥ ದಿಬ್ಬದ
**ಪುಟ : ೧೫೬** **ಬೆಲೆ : ರೂ. ೧೫೦**
**ರತ್ನತ್ರಯ ಪ್ರಕಾಶನ**, 'ಅರುಣೋದಯ', ಶಾಂತಿನಿಕೇತನ ನಗರ, ಕೆಲಗೇರಿ ರಸ್ತೆ, ಧಾರವಾಡ - ೮

**ಸಾಹಿತ್ಯ ವಿಮರ್ಶೆ** (ಲೇಖನ ಸಂಗ್ರಹ) ಡಾ॥ ಬಸವರಾಜ ಸಬರದ
**ಪುಟ : ೧೦೮** **ಬೆಲೆ : ರೂ. ೪೫**

**ಐದು ಬೀದಿ ನಾಟಕಗಳು** ಡಾ॥ ಬಸವರಾಜ ಸಬರದ
**ಪುಟ : ೧೨೮** **ಬೆಲೆ : ರೂ. ೮೦**

**ಗುಬ್ಬಿಯೊಂದು ಗೂಡು ಕಟ್ಟ್ಯಾದೊ** (ಕವನ ಸಂಕಲನ)
ಡಾ॥ ಬಸವರಾಜ ಸಬರದ
**ಪುಟ : ೬೪** **ಬೆಲೆ : ರೂ. ೪೦**

**Selected Poems** *Dr. Basavaraj Sabarad*
*Tr : Dr. K. V. Venkataramana*
**Pages : 86** **Price : Rs. 40**

ಮೇಲಿನ ನಾಲ್ಕು ಪುಸ್ತಕಗಳ ಪ್ರಕಾಶಕರು
**ಪಲ್ಲವಿ ಪ್ರಕಾಶನ**, ಸರಸ್ವತಿಪುರ, ವಿಶ್ವವಿದ್ಯಾಲಯ ಅಂಚೆ, ಗುಲ್ಬರ್ಗಾ - ೫೮೫ ೧೦೬

**ಬಳಕೆದಾರರ ಸಂಗಾತಿ** (ಮಾಹಿತಿ ಬರಹಗಳು) ಅಡ್ಡೂರು ಕೃಷ್ಣರಾವ್
**ಪುಟ : ೧೧೨** **ಬೆಲೆ : ರೂ. ೫೦**
**ಬಳಕೆದಾರರ ವೇದಿಕೆ**, 'ಸುಮ' ೫ನೇ ಅಡ್ಡರಸ್ತೆ, ಬಿಜೈ ಹೊಸರಸ್ತೆ, ಮಂಗಳೂರು - ೫೭೫ ೦೦೪

**ದಿವ್ಯನೇತ್ರ** (ವಿಜ್ಞಾನ ಪ್ರಬಂಧಗಳು) ಟಿ. ಆರ್. ಅನಂತರಾಮು
**ಪುಟ : ೧೮೪** **ಬೆಲೆ : ರೂ. ೯೫**
**ವರ್ಷ ಎಂಟರ್‌ಪ್ರೈಸಸ್**, ನಂ. ೧೨೦೮, ೧ನೇ ಮಹಡಿ, ೨೬ನೇ ಮೇನ್, ೪೧ನೇ ಕ್ರಾಸ್, ೯ನೇ ಬ್ಲಾಕ್, ಜಯನಗರ, ಬೆಂಗಳೂರು -೬೯

**ತಾಯಿ** (ಹನಿಗವನ ಸಂಕಲನ) ಸಂ : ಕೋ. ಲ. ರಂಗನಾಥರಾವ್
**ಪುಟ : ೧೨೦** **ಬೆಲೆ : ರೂ. ೬೦**
**ಗುರುರಾಜ ಪ್ರಕಾಶನ**, 'ಹರಿಕೃಪ', ೨೩೬, ೧೧ನೇ ಮುಖ್ಯರಸ್ತೆ, ಏಜಿಸ್ ಲೇಔಟ್, ಅರೆಹಳ್ಳಿ, ಸುಬ್ರಹ್ಮಣ್ಯಪುರ, ಬೆಂಗಳೂರು-೬೧

**ಟೊಳ್ಳು ಮೂಳೆ ರೋಗ** ಎನ್. ವಿಶ್ವರೂಪಾಚಾರ್
**ಪುಟ : ೪೮** **ಬೆಲೆ : ರೂ. ೧೦**

**ಟೆನ್ಷನ್ - ನಿವಾರಣೆಗಾಗಿ ೧೫೦ ಸಲಹೆಗಳು**
ಎನ್. ವಿಶ್ವರೂಪಾಚಾರ್
**ಪುಟ : ೪೦** **ಬೆಲೆ : ರೂ. ೧೦**

**ಕತ್ತು, ಬೆನ್ನು, ಸೊಂಟ ನೋವು (ಕಾರಣ-ಪರಿಹಾರ)**
ಡಾ॥ ಬಿ. ಜಿ. ಚಂದ್ರಶೇಖರ್
**ಪುಟ : ೪೦** **ಬೆಲೆ : ರೂ. ೧೦**
ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು
**ಕರ್ನಾಟಕ ಆರ್ಥೈಟಿಸ್ ಫೌಂಡೇಶನ್**, ಪದ್ಮಶ್ರೀ ಪ್ರಕಾಶನ, ನಂ. ೭೭, ೬ನೇ ಮುಖ್ಯರಸ್ತೆ, ಹೆಚ್.ವಿ.ಆರ್. ಲೇಔಟ್, ಬೆಂಗಳೂರು-೭೯




ಬಳ್ಳಾರಿಯಲ್ಲಿ ನವಕರ್ನಾಟಕ ಪುಸ್ತಕ ಪ್ರದರ್ಶನವನ್ನು ಮಹಾನಗರ ಪಾಲಿಕೆಯ ಮಹಾಪೌರ ಜಿ. ಸೋಮಶೇಖರ ರೆಡ್ಡಿ ಅವರು ಉದ್ಘಾಟಿಸಿದರು.

ಸಂಘರ್ಷ ಕಾರ್ನಾಡರ ಈ ನಾಟಕದಲ್ಲೂ ಇದೆ. ''ನನಗೆ ದೇವರಲ್ಲಿ ನಂಬಿಕೆ ಇಲ್ಲ, ನನ್ನಲ್ಲಿ ನಂಬಿಕೆ ಇದೆ'' ಎನ್ನುವ ಬಿಜ್ಜಳದೇವರನ್ನು ನಂಬುವ ಬಸವಣ್ಣನನ್ನು ನಂಬುತ್ತಾನೆ. ಬಿಜ್ಜಳ ಬಳಸುವ ಗ್ರಾಮ್ಯ ಭಾಷೆ ಕೂಡ ಈ ನಾಟಕಕ್ಕೆ ಪ್ರಾದೇಶಿಕತೆಯ ಸ್ಪರ್ಶವನ್ನು ಒದಗಿಸಿದೆ.

ಬಿಜ್ಜಳನ ಪಾತ್ರ ವಹಿಸಿದ (ಮಹೇಶ್-ಬೋಗಾದಿ) ಪಾತ್ರಧಾರಿಯ ನಿಲುವು ಆ ಪಾತ್ರಕ್ಕೆ ಸಾಲದೆನ್ನಿಸಿದರೂ, ಆತನ ಆಂಗಿಕ ಅಭಿನಯ, ಸಂಭಾಷಣೆಯ ಸೊಗಸು, ಒಮ್ಮೊಮ್ಮೆ ಸಿ. ಆರ್. ಸಿಂಹರ ಅಭಿನಯವನ್ನು ನೆನಪಿಗೆ ತರಿಸಿದವು. ಕೊನೆಯ ಅಂಕದಲ್ಲಿ ತನ್ನ ಭುಜದ ಮೇಲೆ ಕಲ್ಲಪ್ಪನನ್ನು ಹೊತ್ತು ನಿಂತು ಐದಾರು ನಿಮಿಷಗಳ ಕಾಲ, ಜಿಮ್ನಾಸ್ಟಿಕ್ ಪಟುವಿನಂತೆ ಕದಲದೆ, ಅಭಿನಯಿಸಿದ ತಾಕತ್ತು ಧೀರೋದಾತ್ತ. ಬಸವಣ್ಣನಾಗಿ (ಹರೀಶ್ ಎಚ್. ವಿ.) ಅವರ ಅಭಿನಯ ಪಾತ್ರೋಚಿತ. ಉಳಿದಂತೆ ಸೋವಿದೇವ (ಪುಟ್ಟಸ್ವಾಮಿ), ಮಂಚ್ಯಣ ಕ್ರಮಿತ (ಇಬ್ರಾಹಿಂ), ದಾಮೋದರ ಭಟ್ಟ(ಗಣೇಶನಾಯ್ಕ) ಅವರುಗಳ ಅಭಿನಯ ಮೆಲುಕುಹಾಕುವಂತಹದ್ದು. ಸನಾತನ ಬ್ರಾಹ್ಮಣರ ಗುಂಪಿನಲ್ಲಿ ಅಭಿನಯಿಸಿದ ಪಾತ್ರಧಾರಿಗಳ ಆಂಗಿಕ, ಮಹಿಳಾ ಪಾತ್ರಧಾರಿಗಳ (ಬಿಎಸ್‌ಎನ್‌ಎಲ್‌ನ ಮಹಿಳೆಯರು) ಅಭಿನಯ ಕಳೆಗಟ್ಟಿದವು. ಅಭಿನಯದ ಗಂಧ ಗಾಳಿ ಇರದ ಖೈದಿಗಳಿಂದ ಈ ಮಟ್ಟಿಗಿನ ಅಭಿನಯವನ್ನು ಹೊರಡಿಸುವಲ್ಲಿ ನಿರ್ದೇಶಕ ಹುಲಗಪ್ಪ ಕಟ್ಟೀಮನಿಯವರ ಶ್ರಮ ಶ್ಲಾಘನೀಯ. ಅವರೆಲ್ಲರ ಉಚ್ಚಾರಣೆಯಲ್ಲಿದ್ದ ದೋಷ – ಈ ಕಾರಣಕ್ಕಾಗಿ ಕ್ಷಮ್ಯ.

ಶಿಲಾಶಾಸನದ ಸ್ತಬ್ಧಚಿತ್ರ, ಮತ್ತದಕ್ಕೆ ಬಳಸಿದ ಚಾಲುಕ್ಯರ ಕಾಲದ ಲಿಪಿ, ವಾಸ್ತವಕ್ಕೆ ಹತ್ತಿರವಿತ್ತಾದರೂ, ಶಿಲಾಶಾಸನಕ್ಕೆ ಕಂಚಿನ ಬಣ್ಣ ಬಳಿದದ್ದು ಸರಿಬರಲಿಲ್ಲ. ಶಿವಾಲಯ ಮತ್ತದರ ಪೀಠ ಮರದ ಶಿವಾಲಯದಂತೆ ಗೋಚರಿಸುತ್ತಿದ್ದು, ಅದರ ವರ್ಣವನ್ನು ಬದಲಿಸಬಹುದಿತ್ತು. ಮಹಾಮನೆಯ ಬೆಳಗಿನ ದೃಶ್ಯ ನಿರ್ಮಾಣಕ್ಕೆ ಬಳಸಿದ ದಟ್ಟವಾದ ದೂಪ ಮತ್ತದರ ಮೇಲಿನ ಬೆಳಕಿನ ವಿನ್ಯಾಸ (ರವಿಮೋಹನ್) ಕಲಾತ್ಮಕವಾಗಿ ಮೂಡಿಬಂತು.

ಬಸವ ಬಿಜ್ಜಳರ ಕೊನೆಯ ಭೇಟಿಯ ದೃಶ್ಯದಲ್ಲಿ ಹಿನ್ನೆಲೆಯಲ್ಲಿ ಕೇಳಿಬರುವ ಸಂಗೀತದ ಆಲಾಪನೆ ಹೃದಯ ಸ್ಪರ್ಶಿಯಾಗಿತ್ತು. ಅರಮನೆ ಮುತ್ತಿಗೆಯ ಸಂದರ್ಭದಲ್ಲಿ ಜಗದೇವ ಮತ್ತವನ ಮಿತ್ರರ ಕೋಲುವರಸೆಯ ರಿಹರ್ಸಲ್ ಹಾಗೂ ಅಂಗಸಾಧನೆಯ ದೃಶ್ಯಗಳು ಸಮರ ಕಲೆಯ ಪರಿಣಾಮಕಾರಿ ಪ್ರಯೋಗಕ್ಕೆ ಸಾಕ್ಷಿಯಾದವು. ಯೋಗ (ಶಾಂತಾರಾಮ್), ಕಂಸಾಳೆ (ರಾಮಣ್ಣ, ಕುಮಾರಸ್ವಾಮಿ), ಕುಂಭಕಲೆ (ದ್ವಾರಕನಾಥ್ ಕಾವಾ, ಪ್ರಿಯದರ್ಶನ್ ಕಾವಾ) ನಾಟಕದ ಸಂಕೀರ್ಣ ಕಲಾವೈಭವಕ್ಕೆ ಮೆರುಗುನೀಡಿದವು.

ನಾಟಕದ ಪೂರ್ವಾರ್ಧದವರೆಗೆ (ಪ್ರತಿ ದೃಶ್ಯ ಬದಲಾವಣೆಯ ಸಂದರ್ಭದಲ್ಲಿದ್ದ ರಂಗದ ಮೇಲೆ ಹಾಡುತ್ತಾ ಬರುತ್ತಿದ್ದ ಮುದುಕ ಹಾಗೂ ಹುಡುಗಿಯ ಹಾಡನ್ನು ಬಳಸಿಕೊಂಡ ಪರಿಣಾಮ ಚೆನ್ನಾಗಿತ್ತು. ಪ್ರತೀ ದೃಶ್ಯದ ಬದಲಾವಣೆಯ ಸಂದರ್ಭದಲ್ಲಿ ಪ್ರೇಕ್ಷಕರ ಎದುರೇ ದಡಬಡ ಸಿದ್ಧತೆ ನಡೆಸುವ ಬದಲು ತೆರೆ ಎಳೆದು, ಅಷ್ಟು ಸಮಯ ಕಥೆಗೆ ಪೂರಕವಾದ ವಚನವೊಂದನ್ನು ಆ ಮುದುಕ-ಹುಡುಗಿಯ ಹಾಡಿನಿಂದ ತುಂಬಿ ಆಭಾಸವನ್ನು ನಿವಾರಿಸಬಹುದಿತ್ತು.

ಮಹಾಮನೆ, ಶಿವಾಲಯ, ಬಿಜ್ಜಳನ ಅರಮನೆಯ ಮುಂದಿನ ವೃಷಭ ತಲೆಯ ಕೋಡಿನ ಲಾಂಛನ, ಪ್ರವೇಶ ದ್ವಾರ, ಇವುಗಳ ರಂಗವಿನ್ಯಾಸ (ಪಕರೇಶ್, ಸಂತೋಷ್‌ಕುಮಾರ್) ಕಲಾತ್ಮಕವಾಗಿದ್ದವು. ಇಂಥ ಹಲವಾರು ಧನಾತ್ಮಕ ಅಂಶಗಳಿಂದ ಇದೊಂದು ಯಶಸ್ವಿಯಾದ ಹಾಗೂ ಶ್ಲಾಘನೀಯವಾದ ರಂಗಪ್ರಯೋಗ ಎನ್ನಬಹುದು.

**ಟಿ. ಯಲ್ಲಪ್ಪ**
ಕನ್ನಡ ಅಧ್ಯಾಪಕ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಬಂಗಾರಪೇಟೆ, ಕೋಲಾರ ಜಿಲ್ಲೆ - ೫೬೩ ೧೧೪

**ಈ**ಗ್ಗೆ ಐವತ್ತು, ಅರವತ್ತು ವರ್ಷಗಳ ಕೆಳಗೆ ನಮ್ಮ ಬಾಲ್ಯ ಒಂದು ರೀತಿಯಲ್ಲಿ ತುಂಬ ಸುಂದರವಿತ್ತು. ಶಾಲೆ ಎನ್ನುವುದೊಂದು ಸುಮ್ಮನೇ ಹೋಗಿಬರುವ ತಾಣವಾಗಿತ್ತು. ಬೆನ್ನ ಮೇಲೆ ಹೊರೆ ಹೊರೆ ಪುಸ್ತಕಗಳಿಲ್ಲ. ''ಗಣಿತದ ಪುಸ್ತಕ ತರಲಿಲ್ಲ ಸಾ'' ಎಂದು ರಾಗ ಹಾಡಿದರೆ ಸಾಕು, ''ತರಲಿಲ್ಲವೇನಮ್ಮ? ಹೋಗಲಿ ಪಕ್ಕದವಳ ಹತ್ತಿರ ನೋಡ್ಕೊಂಡು ಬರಿ'' ಎನ್ನುವ ಉದಾರಿ ಮೇಷ್ಟ್ರು, ಮೇಡಂಗಳು. ಹೋಮ್‌ವರ್ಕ್ ಎನ್ನುವ ಉಸಾಬರಿಯೇ ಇಲ್ಲ. ಸ್ಕೂಲಿನಿಂದ ಬಂದು ಆ ಚೀಲವನ್ನು ಒಂದು ಕಡೆ ಎಸೆದುಬಿಟ್ಟರೆ, ಮತ್ತೆ ಚೀಲ ಹುಡುಕುವುದು ಮರುದಿನ ಶಾಲೆಗೆ ಹೋಗುವಾಗಲೇ ಬರವಣಿಗೆಯೆಲ್ಲಾ. ನಾಲ್ಕನೇ ಕ್ಲಾಸಿನವರೆಗೂ ಸ್ಲೇಟಿನ ಮೇಲೆ. ಪೆನ್ನು ಕಾಗದಗಳ ಹಂಗೇ ಇಲ್ಲ. ನಾವು ಬರೆದಿದ್ದೇನೋ ಬಿಟ್ಟಿದ್ದೇನೋ ದಾಖಲೆಗಳೂ ಇಲ್ಲ. ಪರೀಕ್ಷೆಯಲ್ಲೂ ಬಾಯಿಗೆ ಬಂದಷ್ಟನ್ನು ಪದ್ಯ, ಗದ್ಯ ಎಲ್ಲವನ್ನೂ ಒಂದೇ ರಾಗದಲ್ಲಿ ಉಸಿರಿಬಿಟ್ಟರೆ ಮುಗಿಯಿತು. 'ಪಾಸು !! ಫೇಲು !! ಎನ್ನುವ ಸುದ್ದಿಯೇ ಇಲ್ಲ. ರ್‍ಯಾಂಕ್‌ಗಳ ಕಾಟವೂ ಇಲ್ಲ. ಐದನೇ ಕ್ಲಾಸಿನ ನಂತರ ಬರವಣಿಗೆ. ಅದೂ ಏನು ? ಚಿಕ್ಕ ಪರೀಕ್ಷೆ, ದೊಡ್ಡ ಪರೀಕ್ಷೆ. ಎರಡೇ ಹರ್ಡಲ್‌ಗಳು. ವೀಕ್ಲೀ ಟೆಸ್ಟ್, ಮಂತ್ಲೀ ಟೆಸ್ಟ್ ಇವೆಲ್ಲಾ ನಮ್ಮ ಹತ್ತಿರವೂ ಸುಳಿಯುತ್ತಿರಲಿಲ್ಲ. (ನಮ್ಮ ಮೇಷ್ಟ್ರ ತಲೆಯಲ್ಲೂ ಸುಳಿದಿರಲಿಲ್ಲ. ಇನ್ನು ನಮ್ಮ ಹತ್ತಿರ ಹೇಗೆ ಬಂದಾವು ?) ಹಾಗಾಗಿ ಬೆಳಿಗ್ಗೆ ಎದ್ದು ಸ್ಕೂಲಿಗೆ ಹೋಗುವವರೆಗೆ, ಸ್ಕೂಲಿಂದ ಬಂದು ರಾತ್ರಿ ಮಲಗುವವರೆಗೆ ನಮ್ಮದೇ ಸಮಯ !! ಅದಕ್ಕೆ ನಾವೇ ಪರಮಾಧಿಕಾರಿಗಳು. ಯಾರೂ ನಿಯಂತ್ರಿಸುವವರಿಲ್ಲ. ಹೆಣ್ಣು ಗಂಡು ಆದಿಯಾಗಿ ಮರ ಹತ್ತುವುದೇನು ? ಮರಕೋತಿ ಆಡುವುದೇನು ? ಚಿನ್ನಿಕೋಲು, ಬುಗುರಿ, ಗೋಲಿಯಾಟದಲ್ಲಿ ಎಲ್ಲರೂ ಪ್ರವೀಣರೇ.

ಈ ನಮ್ಮ ಸುಖಮಯ ಸನ್ನಿವೇಶದಲ್ಲಿ ಆಗಾಗ್ಗೆ ಮುದ ಕೊಡುತ್ತಿದ್ದುದು ಕಥೆ ಹೇಳುವ ಕಾಯಕ ! ಒಬ್ಬರಿಗೊಬ್ಬರು ಗೊತ್ತಿರುವ, ಅಜ್ಜಿ, ಅಮ್ಮ, ಮೇಷ್ಟ್ರು, ಅಥವಾ ಯಾರಾದರೂ ಹೇಳಿದ ಕಥೆಗೆ ನಮ್ಮ ಚುಟುಕಗಳನ್ನೂ ಸೇರಿಸಿ ಕಥೆ ಹೇಳುವ ಕೆಲಸವೆಂದರೆ ನಮಗೆಲ್ಲರಿಗೂ ಆಸೆಯೇ. ಆದರೆ ಅವಕಾಶ ಸಿಗುತ್ತಿದ್ದುದು ಚೆನ್ನಾಗಿ ಹೇಳುವವರಿಗೆ ಮಾತ್ರ. ಅದರಲ್ಲಿ ನನ್ನ ಗೆಳತಿ ಹೇಳುತ್ತಿದ್ದ ರಾಕ್ಷಸನ ಜೀವದ ಕಥೆ



# ರಾಕ್ಷಸನ ಜೀವ

ನಮಗೆಲ್ಲರಿಗೂ ಬೆಲ್ಲ ಸವಿದಷ್ಟು ಇಷ್ಟ. ಆ ಕಥೆಯ ರಾಜಕುಮಾರ ಎದುರಿಗಿರುವ ರಾಕ್ಷಸನ ತಲೆಯನ್ನು ಎಷ್ಟು ಬಾರಿ ಕತ್ತರಿಸಿದರೂ ಮತ್ತೆ ಸೇರಿಕೊಂಡು ನಗುವ ಅವನ ದೇಹದಲ್ಲಿ ಅವನ ಜೀವವೇ ಇಲ್ಲ, ಅದು ಅಲ್ಲಿಂದ ಏಳು ಸಮುದ್ರ, ಏಳು ಪರ್ವತ, ಏಳು ನದಿ, ಏಳು ಬೆಟ್ಟ, ಏಳು ಕಾಡು ದಾಟಿ ಅಲ್ಲಿರುವ ಮರದ ಕೊಂಬೆಯ ಪಂಜರದಲ್ಲಿರುವ ಗಿಳಿಯಲ್ಲಿದೆ. ಎಂಥಾ ರೋಚಕ ವಿಷಯವಿದು. ಈ ಕಥೆ ನನಗೆ ಈಗಲೂ ನೆನಪಿಗೆ ಬರುವುದು, ನಮ್ಮ ಜೀವನದೊಳಗೇ ಇಂಥ ರಾಕ್ಷಸ ಜೀವಗಳು ಕಾಡುವುದರಿಂದ. ಇದು ಬದುಕಿಗೆ ಎಷ್ಟು ಹತ್ತಿರವಾಗಿದೆ ನೋಡಿ !!

ಇದೇನಿದು, ರಾಕ್ಷಸಜೀವ ಮತ್ತು ನಮ್ಮ ಬದುಕು ಹೇಗೆ ಹತ್ತಿರ ? ಎಂದು ಹುಬ್ಬಿನ ಮೇಲೆ ಗಂಟು ಕೂಡಿಸಿಕೊಳ್ಳುವುದು ಬೇಡ, ಆಯಿತೇ ? ನಾನು ಕೊಡುವ ಉದಾಹರಣೆಗಳನ್ನು ಓದಿ. ಆ ನಂತರ ನಿಮ್ಮ ಬದುಕಿನ ರಾಕ್ಷಸ ಜೀವಗಳನ್ನು ಹುಡುಕಿಕೊಳ್ಳಿ. ರಾಕ್ಷಸ ತನ್ನ ಜೀವ ಜೋಪಾನವಾಗಿರಲಿ ಎಂದು ತಾನೆ ಅಷ್ಟೊಂದು ದೂರದಲ್ಲಿಟ್ಟಿದ್ದ? ನಾವೂ ಹಾಗೇ ಅಲ್ಲವೇ ಕೆಲವು ವಸ್ತುಗಳನ್ನು ಜೋಪಾನವಾಗಿರಲಿ ಎಂದು ಎತ್ತಿಟ್ಟುಬಿಡುತ್ತೇವೆ. ಆಮೇಲೆ ಸಮಯ ಬಂದು ತೀರಾ ಅರ್ಜೆಂಟಾಗಿ ಅದು ಬೇಕಾದರೆ, ಇಟ್ಟ ಜಾಗ ಮರೆತುಹೋದರೆ ಮನೆಯಲ್ಲೇ ಏಳು ಸಮುದ್ರ, ಏಳು ಪರ್ವತ ಎಲ್ಲವೂ ಉದ್ಭವವಾಗುತ್ತವೆ. ಉದಾಹರಣೆಗೆ, ನನ್ನ ಮಗನ ಡ್ರೈವಿಂಗ್ ಲೈಸೆನ್ಸ್! ಹುಡುಗ ಕೆಲಸಕ್ಕೆ ಸೇರಿದ ತಕ್ಷಣ ಹೊಚ್ಚ ಹೊಸಾ ಸ್ಕೂಟರ್ ಕೊಂಡ. ಪರ್ಮನೆಂಟ್ ಲೈಸೆನ್ಸ್ ಸಹ ಮಾಡಿಸಿದ. ಹಲವು ತಿಂಗಳಷ್ಟೇ ರಸ್ತೆಯ ಮೇಲೆ ಗಾಡಿ ಓಡಿಸಿದ ಸುಖ ಕಂಡಿದ್ದು. 'ದಾನೆ ದಾನೆಪೆ ಲಿಖಾ ಹೈ ಖಾನೆವಾಲೆ ಕಾ ನಾಮ್' (ಧಾನ್ಯಧಾನ್ಯದ ಮೇಲೂ ತಿನ್ನುವವರ ಹೆಸರು ಬರೆದಿರುತ್ತದೆ) ಎನ್ನುವುದು ನಿಜವೇ ಆದಂತೆ, ಅವನ ಹೆಸರು ಸಿಂಗಪುರದ ಅಕ್ಕಿಕಾಳುಗಳ ಮೇಲೆ ಬರೆದಿತ್ತಲ್ಲ? (ಅವನೇನು ? ಅವನ ಇಡೀ ಸಂಸಾರದ್ದೂ, ಆಗಾಗ್ಗೆ ಕೆಲವು ಕೆ.ಜಿ. ಕಾಳುಗಳ ಮೇಲೆ ನಮ್ಮದೂ). ಸಿಂಗಪುರದಲ್ಲಿ ಕೆಲಸ ಸಿಕ್ಕು ಹೊರಟೇ ಹೋದ. ಹೋಗುವಾಗ ''ಅಮ್ಮ ಇದು ನನ್ನ ಡ್ರೈವಿಂಗ್ ಲೈಸೆನ್ಸ್. ಜೋಪಾನವಾಗಿ ಎತ್ತಿಡು'' ಎಂದು ಕೊಟ್ಟ. ನಾನೂ ಜೋಪಾನವಾಗೇ ಎತ್ತಿಟ್ಟೆ. ಎರಡು ವರ್ಷದ ನಂತರ ಬಂದ. ''ಅಮ್ಮ ನಮ್ಮ ದೇಶದ ಏರ್ ಕಂಡೀಷನ್ ಬಸ್ಸು, ರೈಲು, ಟ್ಯಾಕ್ಸಿಗಳ ಕಾಟ ಸಾಕಾಗಿಹೋಗಿದೆ. ಸ್ಕೂಟರ್ ಓಡಿಸುವ ಮಜವೇ ಬೇರೆ. ಎಲ್ಲಿ ನನ್ನ ಡ್ರೈವಿಂಗ್ ಲೈಸೆನ್ಸ್'' ಎಂದ. ಎಲ್ಲಿದೆ ? ಅದು ರಾಕ್ಷಸನ ಜೀವ ಆಗಿದೆ. ಮನೆ ಮೂರು ಸುತ್ತು ಹುಡುಕಿದ್ದಾಯಿತು. ಊಹುಂ ಸಿಗಲೇ ಇಲ್ಲ. ಪಾಪ ಹುಡುಗನ ಸ್ಕೂಟರ್ ಓಡಿಸುವ ಆಸೆ ಪಂಜರದ ಗಿಣಿಯನ್ನೇ ಸೇರಿತು. ಮೂರು ವಾರಗಳು ಹುಡುಕಾಟಕ್ಕೇ ಮೀಸಲಾಯಿತು. ಅವನೂ ಜೋಲು ಮೋರೆ ಹಾಕಿಕೊಂಡು ಅಪ್ಪನ ಒಂದೆ ಕುಳಿತೇ ಬೆಂಗಳೂರಿನ ದಿಕ್ಕುದಿಕ್ಕಿಗೆ ತಿರುಗಿದ್ದೂ ಆಯಿತು. ನಾಲ್ಕನೇ ವಾರ ಅವನು ಏರೋಪ್ಲೇನ್ ಏರಿದ.

ಈ ನಮ್ಮ ಸುಖಮಯ ಸನ್ನಿವೇಶದಲ್ಲಿ ಆಗಾಗ್ಗೆ ಮುದ ಕೊಡುತ್ತಿದ್ದುದು ಕಥೆ ಹೇಳುವ ಕಾಯಕ ! ಒಬ್ಬರಿಗೊಬ್ಬರು ಗೊತ್ತಿರುವ, ಅಜ್ಜಿ, ಅಮ್ಮ, ಮೇಷ್ಟ್ರು, ಅಥವಾ ಯಾರಾದರೂ ಹೇಳಿದ ಕಥೆಗೆ ನಮ್ಮ ಚುಟುಕಗಳನ್ನೂ ಸೇರಿಸಿ ಕಥೆ ಹೇಳುವ ಕೆಲಸವೆಂದರೆ ನಮಗೆಲ್ಲರಿಗೂ ಆಸೆಯೇ. ಆದರೆ ಅವಕಾಶ ಸಿಗುತ್ತಿದ್ದುದು ಚೆನ್ನಾಗಿ ಹೇಳುವವರಿಗೆ ಮಾತ್ರ. ಅದರಲ್ಲಿ ನನ್ನ ಗೆಳತಿ ಹೇಳುತ್ತಿದ್ದ ರಾಕ್ಷಸನ ಜೀವದ ಕಥೆ ನಮಗೆಲ್ಲರಿಗೂ ಬೆಲ್ಲ ಸವಿದಷ್ಟು ಇಷ್ಟ.

ಶಾಂತಾ ನಾಗರಾಜ್

ಚಿಕೋ ಎನ್ನುತ್ತಿದ್ದ ಮನೆಯ ಮೂಲೆಯ ಬೀರುವಿನಲ್ಲಿ ಲೈಸೆನ್ಸ್ ಮುಸಿಮುಸಿ ನಗುತ್ತಿತ್ತು.

ಇದೇನೋ ಕಣ್ಣಿಗೆ ಕಾಣದ ಹಾಗೆ ಎತ್ತಿಟ್ಟಿದ್ದರಿಂದ ಹೀಗಾಯಿತು ಎನ್ನಬಹುದು. ಕೆಲವೊಮ್ಮೆ ಕಣ್ಣೆದುರಿಗಿರುವ ವಸ್ತುಗಳೇ ರಾಕ್ಷಸಜೀವವಾಗಿಬಿಡುತ್ತವೆ ಗೊತ್ತಾ? ಈಗಿನ ಕಾಲದ ವಿದ್ಯಾವಂತರಾದ ನಾವು ಗೃಹಿಣಿಯರು ಯಾವ ಯಾವುದಕ್ಕೋ ತಲೆಕೆಡಿಸಿಕೊಳ್ಳುತ್ತಿರುತ್ತೇವೆ. ಅದರಲ್ಲೂ ಅಡಲ್ಟ್ರೇಶನ್ ಎನ್ನುವ ಪದ ಕಿವಿಗೆ ಬಿದ್ದರೆ ಸಾಕು ಹೌಹಾರುತ್ತೇವೆ. ಒಮ್ಮೆ ಒಬ್ಬ ಗೆಳತಿ ಹೇಳಿದಳು : ''ನಾವು ಬಳಸುವ ಇಂಗಿನಲ್ಲಿ ಮೈದಾ ಹಿಟ್ಟಲ್ಲದೇ ಇನ್ನೂ ಏನೇನೋ ಇರುತ್ತಂತೆ. ಅದು ಆರೋಗ್ಯಕ್ಕೆ ಹಾನಿಯಂತೆ, ಅದಕ್ಕೇ ಹಾಲು ಇಂಗು ಬಳಸಬೇಕಂತೆ !!'' ಸರಿ, ನನ್ನ ಸವಾರಿ ಮರುದಿನವೇ ಗ್ರಂಥಿಗೆ ಅಂಗಡಿಯ ಕಡೆಗೆ ಚಿತ್ತೈಸಿತು. ''ಶೆಟ್ರೆ, ಹಾಲಿಂಗು ಕೊಡಿ'' ಎಂದೆ. ನನ್ನನ್ನು ವಿಚಿತ್ರವಾಗಿ ನೋಡಿದ ಶೆಟ್ಟರು, ''ಯಾಕಮ್ಮ ? ಸುಲಭವಾಗಿ ಬಳಸಬಹುದಾದ ಪುಡಿ ಇಂಗುಗಳಿವೆಯಲ್ಲ ?'' ಎಂದರು. ಓಹೋ ಇವರು ನನಗೆ ಅಶುದ್ಧ ಕಲಬೆರಕೆ ವಸ್ತುಗಳನ್ನು ತಗಲುಹಾಕಲು ನೋಡುತ್ತಿದ್ದಾರೆ ಎಂದೇ ನನ್ನ ಗುಮಾನಿ. ''ಇಲ್ಲ ಹಾಲಿಂಗೇ ಬೇಕು'' ಎಂದೆ ದೃಢವಾಗಿ. ''ಸರಿ ತಗೊಳ್ಳಿ. ಆದರೆ ಅದರ ವಾಸನೆ ತುಂಬಾ ಕಟು. ನಿಮ್ಮ ಬ್ಯಾಗಿಲ್ಲಿ ಬೇರೆ ವಸ್ತುಗಳಿದ್ದರೆ ಅದರ ಜೊತೆ ಇಡಬೇಡಿ. ಸಕ್ಕರೆ, ಬೆಲ್ಲ, ಇಂಥವಿದ್ದರೆ, ಅದಕ್ಕೆ ಇಂಗಿನ ವಾಸನೆ ತಗುಲಿಬಿಟ್ಟರೆ, ಅದರಿಂದ ಮಾಡಿದ ಸಿಹಿ ತಿಂಡಿಯೆಲ್ಲಾ ಇಂಗುಮಯವಾಗಿಬಿಡುತ್ತದೆ. ಅದಕ್ಕೇ ಬೇರೆಯಾಗೇ ಇಟ್ಟುಕೊಳ್ಳಿ'' ಎಂದು ಒಂದು ಸೀಲ್‌ಆದ ಪುಟ್ಟ ಪ್ಲಾಸ್ಟಿಕ್ ಕವರ್ನಲ್ಲಿ ನಸು ಬಿಳಿ, ನಸು ಮರದ ಬಣ್ಣದ ಇಡ್ಲಿ ಹಿಟ್ಟಿನಂಥಾ ಮೆತ್ತಗಿನ ವಸ್ತುವನ್ನು, ಮತ್ತೆರಡು ಕವರ್ಗಳಲ್ಲಿ ಇಟ್ಟು, ಅದನ್ನೊಂದು ಪೇಪರ್ ಬ್ಯಾಗಿಗೂ ಹಾಕಿ, ಮತ್ತೊಂದು ಕ್ಯಾರಿ ಬ್ಯಾಗ್‌ನಲ್ಲಿಟ್ಟುಕೊಟ್ಟರು. ಐದು ಕವಚಗಳೊಳಗೆ ಇಂಗು ಬಂಧಿಯಾಗಿತ್ತು. ಆದರೂ ಮೂಗಿನ ಸೆಲೆ ಒಡೆದುಹೋಗುವಂತೆ ಸುವಾಸನೆ ಬೀರುತ್ತಿತ್ತು. ನಾನೇನೂ ಸಕ್ಕರೆ ಬೆಲ್ಲ ಕೊಂಡಿರಲಿಲ್ಲ. ಮರುದಿನ ದೇವರ ಪೂಜೆಗೆ ಎಂದು ಶಾವಂತಿಗೆ ಹೂವನ್ನು ಕೊಂಡಿದ್ದೆ. ಹೂವು ತಾನೆ ಎಂದು ಅದೇ ಬ್ಯಾಗಿಗೆ ಹಾಕಿದೆ. ಮನೆಗೆ ಬಂದು ನೋಡುತ್ತೇನೆ ಶಾವಂತಿಗೆ ಹೂವೆಲ್ಲಾ ಇಂಗಿನ ಪರಿಮಳದಲ್ಲಿ ಮುಳುಗಿಹೋಗಿತ್ತು. ಪಾಪ ! ನಮ್ಮ ದೇವರು ಇಡೀ ಮರುದಿನ ಆ ಹೂವನ್ನೇ ಧರಿಸಿ ಇಂಗಿನ ವಾಸನೆ ಕುಡಿಯಬೇಕಾಯಿತು.




ಮನೆಗೆ ಬಂದವಳೇ ಇಂಗಿನ ಬ್ಯಾಗನ್ನು ಒಂದು ಚಿಕ್ಕ ಪ್ಲಾಸ್ಟಿಕ್ ಏರ್ಟೈಟ್ ಡಬ್ಬಿಗೆ ಹಾಕಿ, ಅದನ್ನು ಸ್ಟೀಲ್ ಡಬ್ಬದಲ್ಲಿ ಒಲೆಯ ಹತ್ತಿರವೇ ಕಣ್ಣಿಗೆ ಕಾಣುವಂತೆಯೇ ಇಟ್ಟುಕೊಂಡೆ. ಆದರೇನು ಅದೂ ರಾಕ್ಷಸನ ಜೀವವೇ ಆಯಿತು. ಹೇಗೆ ಅನ್ನುತ್ತೀರೋ ? ಅಡಿಗೆ ಮಾಡುವವರಿಗೆ ಇಂಗಿನ ನೆನಪು ಬರುವುದು ಯಾವಾಗ ? ಒಗ್ಗರಣೆಗೆ ಸೌಟನ್ನು ಒಲೆಯ ಮೇಲಿಟ್ಟು, ಎಣ್ಣೆಹಾಕಿ, ಅದು ಕಾದಾಗ, ಸಾಸಿವೆ ಹಾಕುವಾಗ ತಾನೆ ? ನಾನು ತಂದ ಇಂಗೋ ಒಂದು ಸ್ಟೀಲ್ ಡಬ್ಬಿ, ಒಂದು ಪ್ಲಾಸ್ಟಿಕ್ ಡಬ್ಬಿ, ಮತ್ತೆ ಐದು ಕವರ್ಗಳಲ್ಲಿ ಬಂಧಿ !! ಇಲ್ಲಿ ಎಣ್ಣೆ ಕಾಯುತ್ತಿರುವಾಗ ನಾನು ಸ್ಟೀಲು, ಪ್ಲಾಸ್ಟಿಕ್, ಎಲ್ಲ ಏಳು ಸಮುದ್ರಗಳನ್ನು ದಾಟಿ ಹೆಸರುಕಾಳಿನಷ್ಟು ಇಂಗನ್ನು ತೆಗೆದು, ಮತ್ತೆ ಎಲ್ಲವನ್ನೂ ಯಥಾಸ್ಥಿತಿಯಲ್ಲಿರಿಸಬೇಕು. ಏಕೆಂದರೆ, ಅಂಗಡಿಯ ಶೆಟ್ಟರು ವಾರನ್ ಬೇರೆ ಮಾಡಿದ್ದರಲ್ಲ ? ಆ ಇಂಗನ್ನು ಗಾಳಿಗೆ ಸೋಕಿಸಲೇಬಾರದಂತೆ. ಹಾಗೆ ಮಾಡಿದರೆ ಅದು ಕಲ್ಲಿನಂತೆ ಗಟ್ಟಿಯಾಗಿ ನಿರುಪಯೋಗಿಯಾಗಿಬಿಡುತ್ತದೆ. ೬೦ ರೂಪಾಯಿ ಗೋತಾ !! ಇಷ್ಟೆಲ್ಲಾ ಮಾಡುವ ಹೊತ್ತಿಗೆ ನನ್ನ ಒಗ್ಗರಣೆ ಶ್ರೀಮದ್ ರಮಾರಮಣ ಗೋವಿಂದಾ ಗೋವಿಂದ !! ಹೊರಗಿರುವ ಅಗ್ನಿದೇವರು ಸೌಟಿನ ಒಳಗೂ ರಾರಾಜಿಸುತ್ತಿರುತ್ತಾರೆ. ಅದಕ್ಕೇ ನಾನು ಅದರ ತಂಟೆಗೇ ಹೋಗಿಲ್ಲ. ಮೂರು ತಿಂಗಳಿನಿಂದ ಆ ಇಂಗು ಏಳು ಸಮುದ್ರ, ಏಳು ಕಾಡುಗಳಾಚೆ ಭದ್ರವಾಗಿದೆ. ಯಜಮಾನರು ಆಗೀಗ 'ಯಾಕೋ ಸಾರು ಮೊದಲಿನಂತಿಲ್ಲ' ಎಂದು ಗೊಣಗುತ್ತಿರುತ್ತಾರೆ. 'ಹಾಗೇನಿಲ್ಲವಲ್ಲ' ಎಂದು ನಾವು ಸಮರ್ಥಿಸಿಕೊಂಡರೆ ಆಯಿತು. 'ಎಲ್ಲೋ ನನ್ನ ನಾಲಿಗೆಯೇ ಕಟ್ಟಿರಬೇಕು' ಎಂದುಕೊಂಡು ಸುಮ್ಮನಾಗುತ್ತಾರೆ, ಪಾಪ ! ಬಹಳ ವರ್ಷಗಳಿಂದ ಅಡುಗೆ ಮಾಡಿದ ಅನುಭವವಿರುವವರಿಗೆ ಈ ಥರದ ಭಂಡತನಗಳು ಕರಗತ ಬಿಡಿ.

ಇದುವರೆವಿಗೂ ಹೇಳಿದ್ದೆಲ್ಲಾ ಹೊರಗಿನ ರಾಕ್ಷಸ ಜೀವದ್ದು. ನಮ್ಮ ತಲೆಯ ಒಳಗೇ ಈ ರಾಕ್ಷಸಜೀವ ಕಾಡುತ್ತದೆ ಎಂದರೆ ಒಪ್ಪುತ್ತೀರಾ ನೀವು ? ಉದಾಹರಣೆಗೆ, ತುಂಬಾ ಹತ್ತಿರದವರ ಅಂದರೆ ಅಣ್ಣನೋ, ತಮ್ಮನೋ, ಹೆಂಡತಿಯ ತಾಯಿ ಮನೆಯದೋ, ಬಾಸ್‌ನ ಮನೆಯದೋ, ಫೋನ್ ನಂಬರನ್ನು ನೆನಪಿನಲ್ಲಿಟ್ಟುಕೊಂಡಿರುತ್ತೀರಿ. ಎಲ್ಲೂ ಬರೆದುಕೊಳ್ಳುವುದಿಲ್ಲ ಸಹ. ಏಕೆಂದರೆ, 'ದಿನಕ್ಕೆ ಹತ್ತು ಸಲ ಮಾಡುತ್ತೇನೆ. ಅದನ್ನೂ ಬರೆದುಕೊಳ್ಳಬೇಕೆ' ಎನ್ನುವ ಉಡಾಫೆ. ಆ ಬೇಕಾದವರೇ ಒಂದು ವಾರವೋ ತಿಂಗಳೋ ಊರಿಗೆ ಹೋಗಿದ್ದಾಗ, ನೀವು ಫೋನ್ ಮಾಡಲು ಸಾಧ್ಯವಾಗಿಲ್ಲ. ಈಗ ಆ ನಂಬರ್ ನಿಮ್ಮ ತಲೆಯೊಳಗೇ ರಾಕ್ಷಸನ ಜೀವ !! ಅವರು ಊರಿಗೆ ಬಂದಿದ್ದಾರೋ ಇಲ್ಲವೋ ತಿಳಿದುಕೊಳ್ಳಬೇಕು, ಫೋನ್ ನಂಬರ್ ಮಂಗಮಾಯ ! ಎಲ್ಲೂ ಒಂದು ತುಂಡುಕಾಗದದ ಮೇಲೂ ಬರೆದುಕೊಂಡಿಲ್ಲ. ತಲೆಯಲ್ಲಿನ ಏಳು ಸಮುದ್ರ, ಏಳು ಕಾಡು ಎಲ್ಲ ತಡಕಿದರೂ ಪಂಜರ ಕಾಣುತ್ತಿಲ್ಲ. ಗಿಣಿ ಸಿಕ್ಕುತ್ತಿಲ್ಲ !! ಆಗ ಪಡುವ ಚಡಪಡಿಕೆ ಇದೆಯಲ್ಲ, ಅದು ಕೊಲ್ಲುವ ಶತ್ರುವಿಗೂ ಬೇಡ !!

ಇದೆಲ್ಲ ಬಿಡಿ. ಇದು ಬರೀ ನೆನಪು, ಮರೆವುಗಳ ಹಾವಳಿಯಾಯಿತು. ಈಗ ಅತಿ ಆಸೆಯ ಅಪ್ಪ ಅಮ್ಮಂದಿರೂ ಮತ್ತು ನಮ್ಮ ಶಿಕ್ಷಣ ವ್ಯವಸ್ಥೆಯೂ ಸೇರಿಕೊಂಡು ಮಾಡುತ್ತಿರುವುದೇನು ? ಪುಟ್ಟ ಮಕ್ಕಳಿಗೆ ಬಾಲ್ಯದ ಸುಖವನ್ನೇ 'ರಾಕ್ಷಸಜೀವ' ಮಾಡಿಬಿಟ್ಟಿದ್ದಾರಲ್ಲ ? ಕೂಸು ಹುಟ್ಟುತ್ತಲೇ ಕಣ್ಣಿಗೆ ಕಂಪ್ಯೂಟರ್ ಸಿಕ್ಕಿಸಿ, ಐ.ಟಿ., ಬಿ.ಟಿ.ಗಳ ಕನಸು ಕಾಣುವ ಪೋಷಕರು, ಶಾಲೆಗೆ ಪದಾರ್ಪಣ ಮಾಡುತ್ತಲೇ, ತಮ್ಮ ಕೈಗೊಂದು ಸಿ.ಪಿ.ಯು ಸಿಕ್ಕಿತೆಂದು ಎಲ್ಲ ಮೆಮೊರಿ ಚಿಪ್‌ಗಳನ್ನೂ ತಲೆಗೆ ತುಂಬಿಸಿಬಿಡುವ ಉಪಾಧ್ಯಾಯ ವೃಂದ ! ಬೆನ್ನಹೊರೆಯ ಭಾರದಲ್ಲಿ, ರ್‍ಯಾಂಕಿನ ಮಹಾಪೂರದಲ್ಲಿ ಸಹಜವಾಗಿ ಅರಳಬೇಕಾಗಿದ್ದ ಬಾಲ್ಯದ ಸುಖವೇ ನಮ್ಮ ಮಕ್ಕಳ ಪಾಲಿಗೆ ಏಳು ಸಮುದ್ರದಾಚೆ !! ಈಗಿನ ಮಕ್ಕಳಿಗೆ ಕಥೆ ಕೇಳುವ ಸುಖ ಗೊತ್ತಿಲ್ಲ. ಮರದ ಮೇಲೇರುವ ಕೊಂಬೆಯಿಂದ ಕೊಂಬೆಗೆ ಹಾರುವ ಹಕ್ಕಿಯ ಭಾವ ಗೊತ್ತಿಲ್ಲ. ಪುಟ್ಟ ನಾಯಿಮರಿಯನ್ನು ಅಟ್ಟಿಸಿಕೊಂಡು ಓಡಿ ಗೊತ್ತಿಲ್ಲ. ಕಾಡಿ ಬೇಡಿ ಬೆಲ್ಲ, ಅವಲಕ್ಕಿ ಇಸಕೊಂಡು 'ಅಮ್ಮ ಆಟ' ಆಡಿ ಗೊತ್ತಿಲ್ಲ. ಗಿಡದ ಎಲೆಯನ್ನು ವೀಳೆದೆಲೆ ಮಾಡಿ, ಪುಟ್ಟ ಕಲ್ಲುಗಳನ್ನೇ ಅಡಿಕೆ ಮಾಡಿ, ಪುಟ್ಟ ಕಡ್ಡಿಗೇ ಟವಲ್ಲು ಸುತ್ತಿ ಮಗು ಮಾಡಿ... ಉಹೂಂ... ಈ ಯಾವ ಕಲ್ಪನೆಯೂ ಈ ಮಕ್ಕಳ ಪಾಲಿಗೆ ದಕ್ಕುವುದೇ ಇಲ್ಲ. ಇನ್ನು ಹಳ್ಳಿಹಳ್ಳಿಗೂ ಇಂಗ್ಲಿಷಿನ ಗುಮ್ಮ ಹೊರಟಿದ್ದಾನೆ !! ಆ ಮಕ್ಕಳು ಕೆರೆಯ ದಂಡೆಯ ಮೇಲಿನ ಆಟವನ್ನು ಮರೆತು ಹೋಂವರ್ಕ್ ಹೊತ್ತುಕೊಳ್ಳುತ್ತವೆ.

ಹುಟ್ಟಿದ ಐದು ವರ್ಷಗಳು ಜಗತ್ತನ್ನು ಬೆರಗುಗಣ್ಣಿಂದ ನೋಡಿ ಅರಗಿಸಿಕೊಳ್ಳುವುದಕ್ಕೇ ಬೇಕಾಗುತ್ತದೆ. ಆ ನಂತರ ಏಳು ವರ್ಷಗಳಷ್ಟೇ ಬಾಲ್ಯದ ಸುಖ ದಕ್ಕುವುದು. ಹದಿಮೂರಕ್ಕೆ ಹದಿಹರೆಯದ ಪುಳಕಗಳು ಪ್ರಾರಂಭ ! ನಲವತ್ತರವರೆಗೂ ಯೌವನದ ಸಂಭ್ರಮವೇ ಸಂಭ್ರಮ ! ನಲವತ್ತರ ನಂತರ ಜಗತ್ತನ್ನೇ ಗೆದ್ದ ಪ್ರೌಢಾವಸ್ಥೆಯ ಹೆಮ್ಮೆ. ಅರವತ್ತಾದ ಮೇಲೆ ಹಿಂತಿರುಗಿ ನೋಡುವ ಚಪಲ !! ಎಲ್ಲ ಅವಸ್ಥೆಗೂ ದಶಕಗಳ ಅವಧಿಯಿದೆ. ಬಾಲ್ಯಕ್ಕೆ ಏಳೇ ವರ್ಷ !! ಇಂದಿನ ಮಕ್ಕಳಿಗೆ ಅದೂ ಕೈತಪ್ಪಿ ಹೋಗುತ್ತಿದೆಯಲ್ಲ !! 'ಯಯಾತಿ' ನಾಟಕದಲ್ಲಿ ಯಯಾತಿ ಮಹಾರಾಜನ ವೃದ್ಧಾಪ್ಯವನ್ನು ತೆಗೆದುಕೊಂಡು ತನ್ನ ಯೌವನವನ್ನು ಕೊಟ್ಟ ಅವನ ಮಗು ಪುರು ಹೇಳುತ್ತಾನೆ : ''ಅಪ್ಪ, ನೀನು ಮಗನ ಯೌವನ ತೆಗೆದುಕೊಳ್ಳಲು ನಾಚಬೇಡ. ನಾನು ಹುಟ್ಟಿದಾಗಲೇ ಮುದುಕನಾಗಿದ್ದೆ. ಕೆಲವರಿಗೆ ಹಾಗೇ ಹುಟ್ಟಿದ ಕೂಡಲೇ ಮುಪ್ಪು ಬಂದುಬಿಡುತ್ತದೆ.'' ನಾವೀಗ ಮಾಡಹೊರಟಿರುವುದೂ ಅದೇ. ನಮ್ಮ ಮುಂದಿನ ಪೀಳಿಗೆಗೆ ಬಾಲ್ಯಾವಸ್ಥೆಯಲ್ಲೇ ಪ್ರೌಢತ್ವದ ಬಟ್ಟಲುಗಳನ್ನು ದಕ್ಕಿಸಿಕೊಡುತ್ತಿದ್ದೇವೆ. ಅವರ ಬಾಲ್ಯದ 'ಸುಖ' ಏಳು ಸಮುದ್ರಗಳಾಚೆ, ಏಳು ಪರ್ವತಗಳಾಚೆ, ಏಳನೇ ಕಾಡಿನ ಏಳನೇ ಮರದ ಏಳನೇ ಕೊಂಬೆಯ ಮೇಲಿದೆ !!

ಶಾಂತಾ ನಾಗರಾಜ್
ನಂ. ೬೦, ಮೀರಾ ಮ್ಯಾನ್‌ಶನ್, ೧೭ನೇ ಅಡ್ಡರಸ್ತೆ, ಮಲ್ಲೇಶ್ವರಂ, ಬೆಂಗಳೂರು - ೫೬೦ ೦೫೫




## ಶ್ರೀಲಂಕಾ : ಶಾಂತಿ ಪ್ರಕ್ರಿಯೆಗೆ ಭಂಗ

ನಾಲ್ಕು ವರ್ಷಗಳ ಹಿಂದೆ ನಾರ್ವೆ ರಾಷ್ಟ್ರದ ಮಧ್ಯಸ್ತಿಕೆಯಿಂದ ಶ್ರೀಲಂಕಾದಲ್ಲಿ ಪ್ರಾರಂಭಗೊಂಡಿದ್ದ ಶಾಂತಿ ಪ್ರಕ್ರಿಯೆ ಈಗ ಮುರಿದುಬಿದ್ದಿದೆ. ಶ್ರೀಲಂಕಾ ಸರಕಾರ ಮತ್ತು ತಮಿಳರ ವಿಮೋಚನಾ ಸಂಸ್ಥೆ ಎಲ್‌ಟಿಟಿಇ ನಡುವೆ ಏರ್ಪಟ್ಟಿದ್ದ ಯುದ್ಧ ಸ್ತಂಭನ ಒಪ್ಪಂದ ಔಪಚಾರಿಕವಾಗಿ ಅಸ್ತಿತ್ವದಲ್ಲಿದೆಯಾದರೂ ಕಾರ್ಯರೂಪದಲ್ಲಿ ಅದರ ಉಲ್ಲಂಘನೆಯಾಗಿದೆ. ಪರಸ್ಪರ ದೋಷಾರೋಪಣೆಗಳೇ ಇದ್ದರೂ ಹಿಂಸಾಚಾರ ಮತ್ತೆ ಪ್ರಾರಂಭವಾಗಿದೆ. ಈಚೆಗೆ ಎಲ್‌ಟಿಟಿಇ ಆತ್ಮಹತ್ಯಾದಳದ ದಾಳಿಯಲ್ಲಿ ಶ್ರೀಲಂಕಾದ ಸೇನಾ ಮುಖ್ಯಸ್ಥರ ಹತ್ಯೆಯ ನಂತರ ಪರಿಸ್ಥಿತಿ ಬಿಗಡಾಯಿಸಿದೆ. ಪರಸ್ಪರ ಘರ್ಷಣೆಗಳು ನಿರಂತರವಾಗಿ ನಡೆಯುತ್ತಿದೆ. ತಮಿಳರ ಸಮಸ್ಯೆಗೆ ಪರಿಹಾರ ಕಾಣಲು ಸುದೀರ್ಘಕಾಲ ನಡೆದ ಮಾತುಕತೆಗಳು ವಿಫಲಗೊಂಡಿವೆ. ಸುನಾಮಿ ದುರಂತದ ಸಂದರ್ಭದಲ್ಲಿ ಪರಿಹಾರ ಕಾರ್ಯದಲ್ಲಿ ತೊಡಗಿದ್ದಾಗ ಎರಡೂ ಕಡೆಯವರಿಗೆ ಬಾಂಧವ್ಯವನ್ನು ಉತ್ತಮಗೊಳಿಸಲು ಅವಕಾಶವುಂಟಾಗಿತ್ತು. ತಾತ್ಕಾಲಿಕವಾಗಿ ಸ್ಥಗಿತಗೊಂಡಿದ್ದ ಮಾತುಕತೆಗಳು ಮತ್ತೆ ಪ್ರಾರಂಭವಾಗುವ ಸೂಚನೆಯೇ ಇಲ್ಲವಾಗಿದೆ. ಸ್ವತಂತ್ರ ತಮಿಳುರಾಜ್ಯದ ಸ್ಥಾಪನೆಗೆ ಎಲ್‌ಟಿಟಿಇ ಪಟ್ಟುಹಿಡಿದಿರುವುದೇ ಮಾತುಕತೆಗಳ ವೈಫಲ್ಯಕ್ಕೆ ಕಾರಣವಾಗಿದೆ. ಎಲ್‌ಟಿಟಿಇ ತಾನು ಶ್ರೀಲಂಕಾದ ಎಲ್ಲ ತಮಿಳರ ಪ್ರತಿನಿಧಿ ಎಂದು ಕರೆದುಕೊಳ್ಳುತ್ತಿರುವುದು ಸತ್ಯಕ್ಕೆ ದೂರವಾದ ಸಂಗತಿ. ಪ್ರತ್ಯೇಕ ರಾಜ್ಯದ ಸ್ಥಾಪನೆಯ ಬೇಡಿಕೆ ಶ್ರೀಲಂಕಾದ ತುಂಡರಿಕೆಗೆ ಎಡೆಕೊಡುತ್ತದೆ. ಆದರಿಂದ ತಮಿಳು ಜನಾಂಗೀಯರ ಪ್ರಶ್ನೆ ಬಗೆಹರಿಯುವುದಿಲ್ಲ. ಜನಾಂಗೀಯ ಅಥವಾ ಮತೀಯ ಆಧಾರದ ಮೇಲೆ ಛಿದ್ರಗೊಂಡಿರುವ ದೇಶಗಳಲ್ಲಿನ ಪರಿಸ್ಥಿತಿ ಏನಾಗಿದೆ ಎನ್ನುವುದಕ್ಕೆ ಸಾಕಷ್ಟು ನಿದರ್ಶನಗಳಿವೆ. ಹಾಗಾಗಿ ಶ್ರೀಲಂಕಾದ ಸಾರ್ವಭೌಮತ್ವವನ್ನು ಪ್ರಾದೇಶಿಕ ಸಮಗ್ರತೆಯನ್ನು ಉಳಿಸಿಕೊಂಡು ಅವರ ಚೌಕಟ್ಟಿನೊಳಗೆ ಪರಿಹಾರವನ್ನು ಕಂಡುಕೊಳ್ಳಬೇಕಾಗಿದೆ.

ಶ್ರೀಲಂಕಾದ ತಮಿಳರ ಪ್ರಶ್ನೆ ಇಂದು ನಿನ್ನೆಯದಲ್ಲ. ಅದು ಬ್ರಿಟಿಷ್ ಸಾಮ್ರಾಜ್ಯಶಾಹಿಗಳು ಹುಟ್ಟುಹಾಕಿದ ಸಮಸ್ಯೆಗಳಲ್ಲಿ ಒಂದು ಎಂದು ಹೇಳಬಹುದು. ಶ್ರೀಲಂಕಾದಲ್ಲಿ ಬ್ರಿಟಿಷ್ ಆಡಳಿತ ಪ್ರಾರಂಭವಾಗುವುದಕ್ಕೆ ಮೊದಲೇ ತಮಿಳರು ಸಾಕಷ್ಟು ಸಂಖ್ಯೆಯಲ್ಲಿ ನೆಲೆಗೊಂಡಿದ್ದರು. ಅವರೆಲ್ಲ ಅಲ್ಲಿನ ನಾಗರಿಕರೇ ಆಗಿ ಸ್ಥಳೀಯ ಜನರೊಂದಿಗೆ ಬೆರೆತುಹೋಗಿದ್ದರು. ಬ್ರಿಟಿಷ್ ಆಡಳಿತೆಯ ಕಾಲದಲ್ಲಿ ಶ್ರೀಲಂಕಾದ ಪ್ಲಾಂಟೇಷನ್ನುಗಳಲ್ಲಿ ದುಡಿಯಲು ದೊಡ್ಡ ಸಂಖ್ಯೆಯಲ್ಲಿ ತಮಿಳು ಕೆಲಸಗಾರರು ಬಂದು ನೆಲೆಸಿದರು. ಬ್ರಿಟಿಷ್ ಸರಕಾರ ಇವರಲ್ಲಿ ಹೆಚ್ಚಿನವರಿಗೆ ಪೌರತ್ವ ಸೌಲಭ್ಯ ನೀಡಲಿಲ್ಲ. ಲಕ್ಷಗಟ್ಟಲೆ ತಮಿಳು ಕೆಲಸಗಾರರು ವಲಸೆಗಾರರಾಗಿಯೇ ಉಳಿದರು. ಸ್ವಾತಂತ್ರ್ಯಾನಂತರ ಈ ವಲಸೆಗಾರರ ಪ್ರಶ್ನೆ ಭಾರತ-ಶ್ರೀಲಂಕಾಗಳ ನಡುವೆ ವಿವಾದಕ್ಕೆಡೆಕೊಟ್ಟಿತು. ಮಾತುಕತೆಗಳ ಮೂಲಕವಾಗಿ ಒಂದು ಮಟ್ಟಿನಲ್ಲಿ ಈ ಸಮಸ್ಯೆಯನ್ನು ಬಗೆಹರಿಸಲಾಯಿತು. ನಿರ್ದಿಷ್ಟ ಸಂಖ್ಯೆಯ ತಮಿಳರಿಗೆ ಶ್ರೀಲಂಕಾ ಸರಕಾರ ಪೌರತ್ವ ನೀಡಿತು, ಉಳಿದವರು ಭಾರತಕ್ಕೆ ನಿರಾಶ್ರಿತರಾಗಿ ಬಂದರು.

ಇದು ಒಂದು ಘಟ್ಟವಾದರೆ ಶ್ರೀಲಂಕಾ ಸರಕಾರ ಅಲ್ಪಸಂಖ್ಯಾತರ ಹಿತಾಸಕ್ತಿಗಳನ್ನು ಕಡೆಗಣಿಸಿ ಕೈಗೊಂಡ ಕ್ರಮಗಳು ದೇಶದ ಜನಸಂಖ್ಯೆಯಲ್ಲಿ ಶೇಕಡ ೧೮ರಷ್ಟಿರುವ ತಮಿಳರನ್ನು ರೊಚ್ಚಿಗೆಬ್ಬಿಸಿತು. ತಮಿಳು ಜನಾಂಗವನ್ನು ಪ್ರತಿನಿಧಿಸುವ ಹಲವು ಸಂಘ ಸಂಸ್ಥೆಗಳು ನಡೆಸಿದ ಚಳವಳಿಯ ಫಲವಾಗಿ ಕೆಲವು ರಿಯಾಯಿತಿಗಳು ದೊರೆತಾಗ್ಯೂ, ಸಿಂಹಳ ಮತ್ತು ತಮಿಳರ ನಡುವಣ ತಾರತಮ್ಯ ಕಡಿಮೆ ಏನಾಗಲಿಲ್ಲ. ಹಾಗಾಗಿ, ಪ್ರತ್ಯೇಕ ತಮಿಳು ರಾಜ್ಯ ಸ್ಥಾಪನೆಯ ಗುರಿ ಇರಿಸಿಕೊಂಡ ಎಲ್‌ಟಿಟಿಇ ಕ್ರಮೇಣ ಬಲಗೊಂಡು ಕಾಲು ಶತಮಾನಕ್ಕೂ ಹೆಚ್ಚುಕಾಲದಿಂದ ಸಶಸ್ತ್ರ ಹೋರಾಟದಲ್ಲಿ ತೊಡಗಿದೆ. ದೇಶದ ಉತ್ತರ ಭಾಗದಲ್ಲಿ ಸಾಕಷ್ಟು ಪ್ರದೇಶವನ್ನು ಆಕ್ರಮಿಸಿಕೊಂಡಿರುವ ಎಲ್‌ಟಿಟಿಇ ತನ್ನದೇ ಆಡಳಿತವನ್ನು ಸ್ಥಾಪಿಸಿಕೊಂಡಿದೆ. ಈ ಸಮಸ್ಯೆ ಉಲ್ಬಣಗೊಂಡ ಮೇಲೆ ಭಾರತಕ್ಕೆ ಸಾಕಷ್ಟು ಸಂಖ್ಯೆಯಲ್ಲಿ ತಮಿಳರು ನಿರಾಶ್ರಿತರಾಗಿ ಬಂದಿದ್ದಾರೆ. ಈಗಲೂ ಬರುತ್ತಿದ್ದಾರೆ. ತಮಿಳರ ಪ್ರಶ್ನೆ ಶ್ರೀಲಂಕಾದ ಆಂತರಿಕ ವಿಷಯವಾದ್ದರಿಂದ ಭಾರತ ಸರಕಾರ ಮಧ್ಯ ಪ್ರವೇಶಿಸುವುದು ಕಷ್ಟ. ಪರಿಸ್ಥಿತಿ ತೀವ್ರವಾಗಿ ಉಲ್ಬಣಿಸಿದ್ದಾಗ ಶ್ರೀಲಂಕಾ ಸರಕಾರ ಕೋರಿಕೆಯ ಮೇರೆಗೆ ಶಾಂತಿಸ್ಥಾಪನೆಗಾಗಿ ಭಾರತದ ಸೇನೆಯ ಮಧ್ಯಪ್ರವೇಶ, ಅನಂತರದ ಘಟನೆಗಳು ಭಾರತದ ಮಟ್ಟಿಗೆ ಕಹಿ ಪ್ರಕರಣ. ಅದರಿಂದಾಗಿಯೇ ಇಂದು ಉದ್ಭವಿಸಿರುವ ಪರಿಸ್ಥಿತಿಯಲ್ಲಿ ಭಾರತ ಸರಕಾರದ ಹೆಚ್ಚಿನದೇನೂ ಮಾಡುವಂತಿಲ್ಲವಾಗಿದೆ. ಈ ಸಮಸ್ಯೆಗೆ ಮಿಲಿಟರಿಯಿಂದ ಪರಿಹಾರ ಕಾಣುವುದು ಸಾಧ್ಯವಿಲ್ಲ ಎನ್ನುವುದು ಖಚಿತವಾಗಿದೆ. ಸಂಧಾನದ ಮೂಲಕವೇ ಇದನ್ನು ಬಗೆಹರಿಸಬೇಕೆಂದು ಎರಡೂ ಕಡೆಯವರ ಮೇಲೆ ಒತ್ತಾಯ ತರಬೇಕಾಗಿದೆ. ಎಲ್‌ಟಿಟಿಇ ತನ್ನ ನಡವಳಿಕೆಯಿಂದಾಗಿ ಅಂತರರಾಷ್ಟ್ರೀಯ ಸಮುದಾಯದ ಸಹಾನುಭೂತಿಯನ್ನು ಕಳೆದುಕೊಂಡಿದೆ. ಯೂರೋಪಿಯನ್ ಯೂನಿಯನ್ ಸದಸ್ಯ ರಾಷ್ಟ್ರಗಳು ಎಲ್‌ಟಿಟಿಇಯನ್ನು ಬಹಿಷ್ಕರಿಸಿ, ಅದರ ಹಣಕಾಸಿನ ವ್ಯವಹಾರವನ್ನು ಸ್ಥಗಿತಗೊಳಿಸಿವೆ. ಒಂದು ರೀತಿಯಲ್ಲಿ ಎಲ್‌ಟಿಟಿಇ ಇಂದು ಏಕಾಂಗಿಯಾಗುತ್ತಿದೆ. ದುಸ್ಸಾಹಸದಲ್ಲಿ ತೊಡಗದೆ ಎಲ್‌ಟಿಟಿಇ ಪಟ್ಟು ಸಡಿಲಿಸಿ ಸಂಧಾನದಲ್ಲಿ ತೊಡಗುವುದು ಸೂಕ್ತ. ಇತರ ತಮಿಳು ಸಂಘಸಂಸ್ಥೆಗಳ ಜೊತೆ ಗೂಡಿ ಅದು ಒಂದು ಪರಿಹಾರವನ್ನು ಕಾಣಬೇಕಾಗಿದೆ.

## ಮಧ್ಯಪ್ರಾಚ್ಯದಲ್ಲಿ ಇಸ್ರೇಲಿನ ದಾಂಧಲೆ

ಮಧ್ಯಪ್ರಾಚ್ಯದಲ್ಲಿ ಇಸ್ರೇಲಿನ ಪುಂಡಾಟಿಕೆಗೆ ಕಡಿವಾಣವೇ ಇಲ್ಲದಂತಾಗಿದೆ. ಏನಾದರೂ ನೆಪವೊಡ್ಡಿ ಮನಸ್ಸಿಗೆ ಬಂದ ಹಾಗೆ ನೆರೆರಾಷ್ಟ್ರಗಳ ಮೇಲೆ ದಾಳಿ ನಡೆಸುವುದು ಅದಕ್ಕೆ ಹವ್ಯಾಸವಾಗುತ್ತಿದೆ. ಎರಡು ಯುದ್ಧಗಳನ್ನು ಈ ಪ್ರದೇಶದಲ್ಲಿ ನಡೆಸಿದ ಇಸ್ರೇಲ್ ಈಗ ಮೂರನೇ ಯುದ್ಧವೊಂದನ್ನು ಪ್ರಚೋದಿಸಲು ಮುಂದಾಗಿರುವಂತೆ ತೋರುತ್ತಿದೆ. ಲೆಬನಾನಿನಲ್ಲಿ ನೆಲೆಗೊಂಡಿರುವ ಹಜ್ಬುಲ್ ಸಂಘಟನೆ ಇಬ್ಬರು ಇಸ್ರೇಲಿ ಸೈನಿಕರನ್ನು ವಶಕ್ಕೆ ತೆಗೆದುಕೊಂಡಿದ್ದಾರೆಂಬ ನೆಪದ ಮೇಲೆ ಇಸ್ರೇಲ್ ಲೆಬನಾನಿನ ಮೇಲೆ ದಾಳಿ ನಡೆಸಿದೆ. ರಾಜಧಾನಿ ಬೈರೂಟ್‌ನ ವಿಮಾನ ನಿಲ್ದಾಣದ ಮೇಲೆ ಬಾಂಬಿನ ಮಳೆಗರೆದಿದೆ. ಅದು ನಡೆಸಿದ ದಾಳಿಯಲ್ಲಿ ಅನೇಕ ಮಂದಿ ನಾಗರಿಕರು ಸಾವಿಗೀಡಾಗಿದ್ದಾರೆ.

ಇದು ಒಂದು ಕಡೆಯಾದರೆ ಗಾಜಾಪಟ್ಟಿ ಪ್ರದೇಶದಲ್ಲಿ ಪ್ಯಾಲಸ್ತೈನಿಯನ್ನರ ಮೇಲೆ ಇಸ್ರೇಲಿ ಸೈನಿಕರು ಹಲ್ಲೆ ಮುಂದುವರಿಸಿದ್ದಾರೆ. ಇಲ್ಲಿ ಕೂಡ ಪ್ಯಾಲಸ್ತೈನಿನ ಹಮಾಸ್ ಸಂಘಟನೆಯು ಓರ್ವ ಇಸ್ರೇಲಿ ಸೈನಿಕನನ್ನು ಬಂಧಿಸಿದ್ದಾರೆಂಬ ಸಬೂಬು. ಎರಡೂ ರಂಗಗಳಲ್ಲಿ ಇಸ್ರೇಲ್ ರಣರಂಗವನ್ನೇ ಸೃಷ್ಟಿಸಿದೆ. ಘರ್ಷಣೆಗಳು ಮುಂದುವರಿಯುತ್ತಿವೆ. ಮಧ್ಯಪ್ರಾಚ್ಯದ ಈ ಬೆಳವಣಿಗೆಗಳಿಂದ ಅಂತರರಾಷ್ಟ್ರೀಯ ಸಮುದಾಯ ದಿಗ್ಭ್ರಮೆಗೊಂಡಿದೆ. ರಷ್ಯಾ, ಚೀಣಾಗಳು ಇಸ್ರೇಲಿನ ದಾಳಿಯನ್ನು ಖಂಡಿಸಿವೆ. ಸಿರಿಯ ಮತ್ತು ಇರಾನ್ ಇಸ್ರೇಲಿಗೆ ಎಚ್ಚರಿಕೆ ನೀಡಿವೆ.

ಅಮೆರಿಕಾದ ಪೂರ್ಣ ಬೆಂಬಲ ಹೊಂದಿರುವ ಇಸ್ರೇಲ್ ಅಸ್ತಿತ್ವಕ್ಕೆ ಬಂದಂದಿನಿಂದಲೂ ವಿಸ್ತರಣಾಕಾಂಕ್ಷಿಯಾಗಿದೆ. ಎರಡು ಯುದ್ಧಗಳಲ್ಲಿ ಆಕ್ರಮಿಸಿಕೊಂಡ ಭೂಭಾಗದಲ್ಲಿ ಬಹ್ವಂಶ ಇನ್ನೂ ಇಸ್ರೇಲಿಗಳ ವಶದಲ್ಲಿದೆ. ವಿಶ್ವಸಂಸ್ಥೆಯ ಎಲ್ಲ ನಿರ್ಣಯಗಳನ್ನು ಉಲ್ಲಂಘಿಸಿರುವ ಇಸ್ರೇಲ್ ತನ್ನ ದುರಾಕ್ರಮಣ ನೀತಿಯನ್ನು ಮುಂದುವರಿಸುತ್ತಿದೆ. ಅಂತರರಾಷ್ಟ್ರೀಯ ಒತ್ತಡಕ್ಕೆ ಮಣಿದು ಪ್ಯಾಲಸ್ತೈನ್ ರಾಜ್ಯದ ಸ್ಥಾಪನೆಗೆ ಒಪ್ಪಿಕೊಂಡಿದ್ದರೂ ಇಸ್ರೇಲ್ ಅದನ್ನು ಕಾರ್ಯಗತವಾಗಿಸಲು ಸಿದ್ಧವಿಲ್ಲ. ನ್ಯಾಯವಾಗಿ ಪ್ಯಾಲಸ್ತೈನ್‌ಗೆ ಸೇರಬೇಕಾಗಿರುವ ಪ್ರದೇಶಗಳನ್ನು ಅದು ಬಿಟ್ಟುಕೊಡದೆ ತನ್ನ ವಶದಲ್ಲೇ ಇರಿಸಿಕೊಂಡಿದೆ. ಸಣ್ಣ ಪುಟ್ಟ ಕಾರಣಗಳಿಗೆಲ್ಲ ಅದು ಪ್ಯಾಲಸ್ತೈನ್‌ನ ಮೇಲೆ ಎರಗಿಬೀಳುತ್ತಿದೆ. ಪ್ಯಾಲಸ್ತೈನ್ ಸ್ವಾಯತ್ತ ಸರಕಾರ ಸುಗಮವಾಗಿ ಕಾರ್ಯನಿರ್ವಹಿಸುವುದಕ್ಕೆ ಅವಕಾಶವೇ ಆಗದ ಹಾಗೆ ಅದು ಕಿರುಕುಳ ನೀಡುತ್ತ ಬಂದಿದೆ. ಈಚೆಗೆ ಇಸ್ರೇಲಿನ ಕಡು ವಿರೋಧಿ ಹಮಾಸ್ ಸಂಘಟನೆ ಚುನಾವಣೆಗಳಲ್ಲಿ ಜಯಗಳಿಸಿ ಅಧಿಕಾರಕ್ಕೆ ಬಂದ ಮೇಲಂತೂ ಇಸ್ರೇಲಿನ ಅಟ್ಟಹಾಸ ಹೆಚ್ಚಾಗಿದೆ. ಸರಕಾರವನ್ನು ಪದಚ್ಯುತಗೊಳಿಸಲು ಎಲ್ಲ ಅಡ್ಡಿ ಆತಂಕಗಳನ್ನು ಅದು ಸೃಷ್ಟಿಸುತ್ತಿದೆ.

ಹೇಗಾದರೂ ಮಾಡಿ ಪ್ಯಾಲಸ್ತೈನ್ ರಾಜ್ಯ ಸ್ಥಾಪನೆಯಾಗದಂತೆ ಮಾಡುವುದೇ ಇಸ್ರೇಲಿನ ಗುರಿ. ಇದಕ್ಕೆ ಅಮೆರಿಕಾದ ಪೂರ್ಣ ಬೆಂಬಲ ಅದಕ್ಕಿದೆ. ಅದನ್ನೇ ಆಧಾರವಾಗಿಟ್ಟುಕೊಂಡು ಇಸ್ರೇಲ್ ತನ್ನ ದುರಾಕ್ರಮಣ ನೀತಿಯನ್ನು ಮುಂದುವರಿಸುತ್ತಿದೆ. ಲೆಬನಾನಿನ ಮೇಲೆ, ಪ್ಯಾಲಸ್ತೈನ್ ಮೇಲೆ ಇಸ್ರೇಲ್ ನಡೆಸಿರುವ ದಾಳಿಯಿಂದ ಪರಿಸ್ಥಿತಿ ಗಂಭೀರವಾಗಿದೆ. ಇದನ್ನು ತಡೆದು ಇಸ್ರೇಲ್‌ಅನ್ನು ಹದ್ದುಬಸ್ತಿಗೆ ತರದಿದ್ದರೆ ಮಧ್ಯಪ್ರಾಚ್ಯದಲ್ಲಿ ಇನ್ನೊಂದು ಯುದ್ಧದ ಕಾರ್ಮೋಡ ಆವರಿಸುವುದು ಖಚಿತ.

ಸೀಯಾರ್ಕೆ
'ಚೌಬೀನ', ೮೪೯, ಬನಶಂಕರಿ ಮೂರನೇ ಹಂತ, ಕತ್ರಿಗುಪ್ಪೆ, ಬೆಂಗಳೂರು - ೫೬೦ ೦೮೫

ನಾವು ಭಾರತೀಯರು ನೂರು ಕೋಟಿ ಸಂಖ್ಯೆಯನ್ನು ಹಿಮ್ಮೆಟ್ಟಿಸಿದ್ದರೇನಂತೆ. ಈ ನಮ್ಮ ದೇವರುಗಳ ಹೆಸರುಗಳೇ ನಮ್ಮೆಲ್ಲರಿಗೆ ಸಾಕಾಗುವಷ್ಟಿದೆ. ಕೊಂಚ ಸಮಯ, ಸಂದರ್ಭ, ಸಂಬಂಧಗಳು ಏರುಪೇರಾಗದಂತೆ ಜಾಗ್ರತೆ ವಹಿಸ ಬೇಕಷ್ಟೆ. ಇಲ್ಲವಾದರೆ ಅದೆಷ್ಟೋ ಸಂದರ್ಭಗಳಲ್ಲಿ, ಸರಸ್ವತಿಯ ತಂದೆ ಷಣ್ಮುಖ, ಗಣಪತಿಯ ಮಗಳು ಗೌರಿ, ರಾಮನ ತಾಯಿ ಸೀತೆ, ಈ ಸೀತೆಯ ಸೋದರತ್ತೆ ದ್ರೌಪದಿ, ಭೀಮನ ಭಾವ ಹನುಮಂತ ಇತ್ಯಾದಿ ಇತ್ಯಾದಿ.




# ನಾಮಾಯಣ

ಡಾ|| ಅನಿಲ ಕಮತಿ

'ನಾಮ ಯಾವುದಾದರೇನು? ಗುಲಾಬಿಗೆ ಬೇರೆ ಹೆಸರಿನಿಂದ ಕರೆದರೆ ಅದರ ಸೌಂದರ್ಯಕ್ಕೆ ಚ್ಯುತಿ ಬರುವುದೇ? ಅದರ ಪರಿಮಳಕ್ಕೇನು ಕ್ಷತಿ ತಗಲುವುದೇ?' ಎನ್ನುವವರೂ ಇದ್ದಾರೆ.

ಇದು ಒಂದು ಬಗೆ!

'ನೀನ್ಯಾಕೋ? ನಿನ ಹಂಗ್ಯಾಕೋ? ನಿನ ನಾಮದ ಬಲವೊಂದಿದ್ದರೆ ಸಾಕೋ!' ಎಂದು ದಾಸರು ಸಾಕ್ಷಾತ್ ಆ ಪರಮಾತ್ಮನಿಗಿಂತ ಆತನ ನಾಮಕ್ಕೇನೇ ಹೆಚ್ಚು ಮಹತ್ವ ನೀಡಿದ್ದಾರೆ.

ಇದು ಇನ್ನೊಂದು ಬಗೆ!!

ನಮ್ಮಲ್ಲಿ ದೇವರುಗಳೋ...! ಒಟ್ಟು ಮೂವತ್ಮೂರು ಕೋಟಿ. ಅವರಲ್ಲಿ ಪ್ರತಿಯೊಬ್ಬರಿಗೂ ಅವರವರ ಭಕ್ತಗಣದ ಗಾತ್ರ, ಆ ದೇವರುಗಳು ವಿವಿಧ ಸಂದರ್ಭಗಳಲ್ಲಿ ಆಡುವ ಪಾತ್ರಕ್ಕೆ ತಕ್ಕಂತೆ – ಪ್ರತಿಯೊಬ್ಬರಿಗೆ ನೂರಾರೋ, ಸಾವಿರಾರೋ ಹೆಸರುಗಳು. ಬಹುಶಃ ಇವರೆಲ್ಲರಲ್ಲಿ ಶ್ರೀಕೃಷ್ಣನಿಗೆ ಮತ್ತು ಗಣಪತಿಗೆ ಅತಿ ಹೆಚ್ಚು ಹೆಸರುಗಳು. ಈ ಹೆಸರುಗಳ ಪಟ್ಟಿ ತಯಾರಿಸಿ ಅತಿ ಹೆಚ್ಚು ಹೆಸರುಗಳನ್ನು ಪಟ್ಟಿ ಮಾಡುವುದಕ್ಕೇನೇ ಒಂದು ಸ್ಪರ್ಧೆ ಏರ್ಪಡಿಸುವವರೂ ಉಂಟು.

ನಾವು ಭಾರತೀಯರು ನೂರು ಕೋಟಿ ಸಂಖ್ಯೆಯನ್ನು ಹಿಮ್ಮೆಟ್ಟಿಸಿದ್ದರೇನಂತೆ. ಈ ನಮ್ಮ ದೇವರುಗಳ ಹೆಸರುಗಳೇ ನಮ್ಮೆಲ್ಲರಿಗೆ ಸಾಕಾಗುವಷ್ಟಿದೆ. ಕೊಂಚ ಸಮಯ, ಸಂದರ್ಭ, ಸಂಬಂಧಗಳು ಏರುಪೇರಾಗದಂತೆ ಜಾಗ್ರತೆವಹಿಸಬೇಕಷ್ಟೆ. ಇಲ್ಲವಾದರೆ ಅದೆಷ್ಟೋ ಸಂದರ್ಭಗಳಲ್ಲಿ, ಸರಸ್ವತಿಯ ತಂದೆ ಷಣ್ಮುಖ, ಗಣಪತಿಯ ಮಗಳು ಗೌರಿ, ರಾಮನ ತಾಯಿ ಸೀತೆ, ಈ ಸೀತೆಯ ಸೋದರತ್ತೆ ದ್ರೌಪದಿ, ಭೀಮನ ಭಾವ ಹನುಮಂತ ಇತ್ಯಾದಿ ಇತ್ಯಾದಿ.

ನಮ್ಮ ಸಿನಿ ಜಗತ್ತಿನಲ್ಲಿ ಒಂದು ಮಾತು ಪ್ರಚಲಿತದಲ್ಲಿದೆ. ಅದೆಷ್ಟೋ ಜನ ತೆರೆಯ ಮೇಲೆ ನಾಯಕನ ಪಾತ್ರವಹಿಸುವವರು ಖಳನಿಗಿಂತ, ಖೂಳನಿಗಿಂತ ಒಂದು ತೂಕ ಹೆಚ್ಚೇ ಸೈ! ಚಿತ್ರ ಜಗತ್ತಿನ ಖಳನಾಯಕರು ನಿಜಜೀವನದಲ್ಲಿ ನಮ್ಮೆಲ್ಲರಿಗಿಂತ ಸಭ್ಯರು. ತೆರೆಯ ಮೇಲೆ ಪತಿವ್ರತೆಯ ಪಾತ್ರವಹಿಸುವವರು ಹದಿನೆಂಟಕ್ಕಿಂತ ಹೆಚ್ಚು ಗಂಡಂದಿರನ್ನ ಮದುವೆಯಾದ ದಾಖಲೆ ಗಳಿರುವಂತೆಯೇ, ಕ್ಯಾಬರೆ ನರ್ತಕಿಯ ವೇಷ ಧರಿಸಿ ನೂರೆಂಟು ವಿಟರನ್ನು ಬೆಳ್ಳಿತೆರೆಯ ಮೇಲೆ ರಮಿಸುವವರು ನಿಜಜೀವನದಲ್ಲಿ ದುಷ್ಟ ಪತಿಯಿದ್ದರೂ ಸಹಬಾಳ್ವೆ ನಡೆಸಿದ ಉದಾಹರಣೆಗಳೂ ಇವೆ. ಇದು ನಮ್ಮಲ್ಲಿಯ ಹೆಸರುಗಳಿಗೂ ಅದೆಷ್ಟೋ ಸಲ ಅನ್ವಯಿಸುವುದುಂಟು. ಬೀಚಿಯವರ ಮಾತಿನಂತೆ – ಹೆಸರೋ ಭೀಮಸೇನ – ಇವನೋ ನರಪೇತಲ ನಾರಾಯಣ, ಹೆಸರು ನವಕೋಟಿ ನಾರಾಯಣ – ಇವನೋ ದಟ್ಟ ದರಿದ್ರ, ಕಾಮಣ್ಣ ಅಷ್ಟಾವಕ್ರನ ಅಪರಾವತಾರ; ಶ್ರೀಕೃಷ್ಣ ಇಲ್ಲಿ ಬಾಲಬ್ರಹ್ಮಚಾರಿ, ಹನುಮಂತನಿಗೆ ನಾಲ್ವರು ಹೆಂಡಿರಾದರೆ, ಗಣಪತಿಗೆ ಹದಿನೆಂಟು ಮಕ್ಕಳು!!

ಕೊಂಚ ತೆರೆದ ಮನಸ್ಸಿನಿಂದ ನಮ್ಮ ಸುತ್ತಲಿನವರನ್ನು ಮತ್ತು ಅವರ ಹೆಸರುಗಳನ್ನು ಗಮನಿಸುತ್ತಿದ್ದರೆ ಚಿತ್ರವಿಚಿತ್ರ ಅನುಭೂತಿ ನಮಗಾಗುವುದು ಸಹಜ. ಮೊನ್ನೆ ಒಬ್ಬಾತನನ್ನು ಭೇಟಿಯಾದೆ. ಆತನ ಹೆಸರು ವಿಶ್ವಕರ್ಮ. ಹಡಗು ಒಡೆಯುವ ಕಾರ್ಖಾನೆಯ ಮುಖ್ಯ ಮೇಸ್ತ್ರಿಯ ಉದ್ಯೋಗ ಈತನಿಗೆ. ದೂರ್ವಾಸ ಎಂಬ ಅತಿ ಸಭ್ಯ ಮನುಷ್ಯನ ಪರಿಚಯ ನನಗಿದೆ. ನಮ್ಮಲ್ಲಿ ಗೋಡಬೋಲೆ (ರುಚಿಕಟ್ಟಾದ ಮಾತಿನವ) ಎಂಬ ಮಹಾ ಮುಂಗೋಪಿಯೊಬ್ಬನಿದ್ದಾನೆ. ಪೋಟದುಬೆ (ಮರಾಠಿಯಲ್ಲಿ 'ಹೊಟ್ಟೆನೋವು') ಎಂಬುವರೊಬ್ಬರು ಈ ಹಿಂದೆ ಭಾರತ ಸರಕಾರದಲ್ಲಿ ಆರೋಗ್ಯ ಖಾತೆಯ ಸಹಾಯಕ ಸಚಿವರಾಗಿದ್ದರು. ಡೋಯಿಝುಡ (ಜಡ ತಲೆಯವ) ಎಂಬುವನೊಬ್ಬ ನನ್ನ ಸಹಪಾಠಿ.

ನಮ್ಮಲ್ಲಿಯ ಕೆಲ ಹೆಸರುಗಳನ್ನು ವಿಶ್ಲೇಷಿಸುವುದು ಕೊಂಚ ಅವಘಡವೇ. ನನ್ನ ಗುರುಬಂಧುವೊಬ್ಬರ ಪೂರ್ಣಹೆಸರು ನರಸಿಂಹ ಗಾಯತೊಂಡ. ವಿಷ್ಣುವಿನ ಅವತಾರಗಳಲ್ಲೊಂದಾದ ಸಿಂಹದ ಮುಖ ಮಾನವದೇಹಿಯ ಹೆಸರು ಈತನದಾದರೆ ಆಕಳ ಮುಖದವ (ಮರಾಠಿಯಲ್ಲಿ ಗಾಯ = ಆಕಳು; ತೋಂಡ = ಮುಖ) ಎಂದು. ನನ್ನ ಶಾಲಾ ಜೀವನದ ಸಹಪಾಠಿಯೊಬ್ಬಳ ಹೆಸರು ದೊಡ್ಡಕ್ಕ ಸಣ್ಣಕ್ಕಿ. ನನ್ನ ಇನ್ನೊಬ್ಬ ಪರಿಚಿತರ ಹೆಸರು ಹಯವದನ ಕತ್ತಿ. ವಿಶಾಲಾಕ್ಷಿ ಕುರುಡ ಎನ್ನುವವರೊಬ್ಬರನ್ನು ನಾನು ಬಲ್ಲೆ.

ಲೋಕದ ಡೊಂಕ ನೀವೇಕೆ ತಿದ್ದುವೆ? ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ ಎಂಬುದು ಅನುಭವದ ಮಾತು. ತನ್ನ ಎಡೆಯಲ್ಲಿ ಕತ್ತೆ ಬಿದ್ದಿರುವಾಗ, ಬದಿಯವನ ಎಡೆಯಲ್ಲಿಯ ನೊಣ ತೋರಿಸಿ ನಕ್ಕರಂತೆ, ಎಂಬುದೊಂದು ಗಾದೆ. ನನ್ನ ತಂದೆ ತಾಯಿ, ಬಂಧು-ಬಳಗದವರೆಲ್ಲ ಸೇರಿ ನನಗಿಟ್ಟ ಹೆಸರು – 'ಬಹಾದ್ದೂರ್'. ಹುಟ್ಟಿದಾಕ್ಷಣ ನನ್ನ ಮುಖ ನೋಡಿಯೋ, ಜಾತಕಫಲ ನೋಡಿಯೋ ನಾನು 'ಬಹಾದ್ದೂರ್'ನಾಗಬಲ್ಲೆ ಎಂದು ಎಣಿಕೆ ಹಾಕಿದ್ದರೆಂದೇನೂ ಅಲ್ಲ. ನನ್ನ ಅಜ್ಜ – ತಂದೆಯ ತಂದೆಯ ಹೆಸರು 'ಬಹಾದ್ದೂರ್' ಎಂದಿತ್ತು. ನಮ್ಮ ಸ್ವರ್ಗವಾಸಿ ಹಿರಿಯರು ಅಜ್ಜ, ಅಜ್ಜಿಯರು ತಮ್ಮ ಹೊಟ್ಟೆಯಲ್ಲಿ ಮರುಜನ್ಮ ಪಡೆಯುವರೆಂಬ ನಂಬಿಕೆಗೋ, ತಮ್ಮ ಮಾತಾ, ಪಿತೃಗಳ ನೆನಪು ಸದಾ ಹಸಿರಾಗಿರಲಿ ಎಂಬ ಸದಾಶಯದಿಂದಲೋ ತಮ್ಮ ಮಕ್ಕಳಿಗೆ ಅವರ ಹೆಸರನ್ನಿಡುವ ಸಂಪ್ರದಾಯ

ನಮ್ಮಲ್ಲಿ ಬೆಳೆದು ನಿಂತಿರುವುದರಿಂದ ಈ ಅನಾಹುತ ಘಟಿಸಿತು.

ಹಾಗೆ ಕೇಳಿದರೆ ನನ್ನಜ್ಜನಿಗೆ ಆತನ ತಂದೆ ತಾಯಿ ತೊಟ್ಟಿಲಲ್ಲಿ ಇಟ್ಟ ಹೆಸರು 'ನಾರಾಯಣ'. ಮುಂದೆ ಈತ ವಯಸ್ಕನಾದ ನಂತರ ಈತನ ಶೌರ್ಯ, ಧೈರ್ಯ ಜಾಣ್ಮೆಗಳನ್ನು ಕಂಡು ಈತನಿಗೆ 'ಬಹಾದ್ದೂರ' ಎಂದು ಜನ ಕರೆಯತೊಡಗಿದರು. ಅದೇ ಆತನ ಹೆಸರಾಗಿ ಮೊದಲಿನದು ಮರೆತೇಹೋಯಿತು. ಈ ಅರ್ಥದಲ್ಲಿ ನನ್ನಜ್ಜ ಈ ಹೆಸರನ್ನು ಪಡೆದುದಲ್ಲ, ಗಳಿಸಿದ್ದು. ಕೊನೆಯವರೆಗೂ ಆತ ಇದು ಈತನಿಗೆ ಅನ್ವರ್ಥನಾಮ ಎನ್ನುವಂತೆಯೇ ಬದುಕಿದ.

ನನಗೆ ಒಂದು ವರ್ಷ ವಯಸ್ಸಾಗುವಷ್ಟರಲ್ಲಿ ನನ್ನ ಚಲನವಲನ, ಮುಖಲಕ್ಷಣಗಳನ್ನು ಕಂಡವರಿಗೆಲ್ಲ, ನನ್ನ ತಂದೆ ತಾಯಿಗಳನ್ನೊಳಗೊಂಡು, 'ಹೆಸರು ಕ್ಷೀರಸಾಗರ; ಮನೆಯಲ್ಲಿ ನಾಲ್ಕುಕಾಳು ಮಜ್ಜಿಗೆಗೂ ಗತಿಯಿಲ್ಲ' ಎಂಬ ಮಾತು ನೆನಪಾಗಿರಬೇಕು. ಅಂದಿನಿಂದ ಅವರೆಲ್ಲಾ ನನ್ನನ್ನು 'ಅನಿಲ' ಎಂದು ಕರೆಯಲು ಪ್ರಾರಂಭಿಸಿದರು.

ಆದರೆ ಆಗಬೇಕಾದ ಅನಾಹುತವೆಲ್ಲ ಈಗಾಗಲೇ ಆಗಿಹೋಗಿತ್ತು. ಜನ್ಮದಾಖಲೆ ಮುಂತಾದೆಡೆ ಈಗಾಗಲೇ ನನ್ನ ಹೆಸರು 'ಬಹಾದ್ದೂರ' ಎಂದು ನಮೂದಾಗಿತ್ತು. ಆದರೂ ನನ್ನನ್ನೇ ನಾನು ಈ ಹೆಸರಿನೊಂದಿಗೆ ತಕ್ಕಡಿಯಲ್ಲಿಟ್ಟುಕೊಂಡು ನೋಡಿದಾಗ ಸದಾ ಹೆಸರಿನ ಪರಡಿಯೆ ಹೆಚ್ಚು ತೂಗತೊಡಗಿದುದರಿಂದ ನಾನೂ 'ಅನಿಲ'ನನ್ನೇ ಬಳಸಿಕೊಳ್ಳತೊಡಗಿದೆ. ಹೀಗಾಗಿ ದಾಖಲೆಗಳಲ್ಲಷ್ಟೇ ನಾನು ಬಹಾದ್ದೂರ, ನಿಜಜೀವನದಲ್ಲಿ ಗಾಳಿಗಿಂತ ಹಗುರ.

ಆದರೂ ನನ್ನ ದಾಖಲೆಗಳನ್ನು ನೋಡಿದ ಹೊಸಬರು ಅಪನಂಬಿಕೆಯಿಂದ ನನ್ನ ಮುಖ ಮಿಕಿ ಮಿಕಿ ನೋಡುವುದಿದೆ. ಆಗ ಅವರು 'Are you a Nepali ?' ಎಂದಾಗ ಇವರು ಬಹುಶಃ ನನ್ನ ಮುಖದಲ್ಲಿಲ್ಲದ ನೇಪಾಳಿ ಅಥವಾ ಗೂರ್ಖಾ ಲಕ್ಷಣಗಳನ್ನು ಹುಡುಕುತ್ತಿರಬಹುದೆಂದು ನನ್ನ ಎಣಿಕೆ.

ಈಗ ಹತ್ತು ವರ್ಷಗಳ ಹಿಂದೆ ನಮ್ಮೂರಲ್ಲಿ ಇನ್ನೊಬ್ಬ ಬಹಾದ್ದೂರನನ್ನು ನಾನು ಭೇಟಿಯಾದಾಗ ಕೊಂಚ ವಿಚಿತ್ರವೆನ್ನಿಸಿತು. 'ಹಳ್ಳಿ ಊರಾಗ ಕೊಳ್ಳಿ ಬೆಳಕು' ಎಂಬ ಗಾದೆಯಂತೆ. ಈತನ ತಂದೆ ತಾಯಿಗಳು ನನ್ನನ್ನೇ ಅನುಕರಣೆ ಮಾಡಿರಬಹುದೆಂದು ಸ್ವಲ್ಪ ಗರ್ವವೂ ತಲೆಯೆತ್ತಿನಿಂತಿತು. ಅವನ ತಂದೆಯೊಂದಿಗೆ ಒಂದು ದಿನ ಲೋಕಾಭಿರಾಮ ವಾಗಿ ಈ ವಿಷಯ ಪ್ರಸ್ತಾಪಿಸಿದಾಗ – 'ಮಾಸ್ತರಗೋಳ (ನನ್ನ ತಂದೆ ಶಾಲಾ ಮೇಷ್ಟ್ರಾಗಿದ್ದರು) ಈ ಹೆಸರಿಟ್ಟಿದ್ದಾರೆಂದಮೇಲೆ ಏನೋ ಈ ವಿಷಯದಲ್ಲಿ ವಿಶೇಷವಿರಬಹುದೆಂದು ಈ ಹೆಸರನ್ನಾಯ್ದುಕೊಂಡೆ' ಎಂದಾಗ ನನ್ನ ಗರ್ವದ ಗುಳ್ಳೆ ಠುಸ್ಸೆಂದಿತು.

ನಮ್ಮಲ್ಲಿಯ ಹೆಸರುಗಳದೇ ಒಂದು ವಿಚಿತ್ರ ಲೋಕ. ಇದನ್ನು ಒರೆಗೆ ಹಚ್ಚಿ ನೋಡುವ ತಾಳ್ಮೆಯಿರಬೇಕು ಅಷ್ಟೇ.

ನಮ್ಮಲ್ಲಿ ಬೆಲ್ಲದಗಳಿದ್ದಾರೆ; ಮೆಣಸಿನಕಾಯಿಗಳೂ ಇದ್ದಾರೆ. ಕುದುರೆಗಳಿದ್ದಾರೆ; ಕತ್ತೆಗಳಿದ್ದಾರೆ; ಕ್ವಾಗೆಗಳೂ ಇದ್ದಾರೆ. ಡುಕರೆ(ಹಂದಿ)ಗಳೂ ಇದ್ದಾರೆ.

ಅಕ್ಕಿ, ಗೋಧಿ, ಸಕ್ಕರೆ, ರಾಗಿ, ಜೋಳದ, ಭತ್ತೆ ಎಲ್ಲರೂ ಇದ್ದಾರೆ.

ಸಣಕಲ್‌ಗಳಿರುವಂತೆಯೇ ಗಡತರನವರು ಇದ್ದಾರೆ, ಖಡ್ಡಗಳಿರುವಂತೆಯೇ ಢೊಬಳೆಗಳೂ ಇದ್ದಾರೆ.

ಬಾವಚೆ, ಭೆಂಡಿ, ಬದನಿಕಾಯಿ, ಕದ್ದು (ಕುಂಬಳಕಾಯಿ)ಗಳಿರುವಂತೆಯೇ ಪುಂಡಿಪಲ್ಲೆ, ಮೆಂತಿಪಲ್ಲೆಗಳೂ ಇದ್ದಾರೆ.

ನಗಟೆ, ಮುಕರೆ, ಜೊಲ್ಲೆ, ಸುಂಬಳೆಗಳೂ ಇದ್ದಾರೆ.

ರಗಟೆ, ಕೆಳದಿಗಳೂ ಇದ್ದಾರೆ.

ಕುಪ್ಪಸದ, ಲುಗಡೆ (ಸೀರೆ)ಗಳಿರುವಂತೆಯೇ ಇಜಾರೆ, ಧೋತ್ರೆ, ಚೊಣ್ಣದ, ಲಂಗೋಟಿಗಳೆಲ್ಲ ಇದ್ದಾರೆ.

ದಡ್ಡರಿದ್ದಾರೆ, ಶಹಾಣೆಗಳೂ (ಜಾಣ) ಇದ್ದಾರೆ.

ಸಾಹುಕಾರರಿರುವಂತೆ, ಗರೀಬರೂ ಇದ್ದಾರೆ.

ನಮ್ಮ ಹೆಸರುಗಳಲ್ಲಿ ಮನೆಗಳಿಗೇ ಒಂದು ವಿಶಿಷ್ಟ ಸ್ಥಾನ. ಹೊಸಮನಿ, ಹಳೇಮನಿ, ಕೆಳಗಿನ ಮನಿ, ಮೇಲಿನಮನಿ, ದೊಡ್ಡಮನಿ, ದನಿನಮನಿ, ಕಟ್ಟಿಮನಿ, ಹಂಚಿನಮನಿ, ಗಟ್ಟಿನಮನಿ, ಮೂಲಿಮನಿಗಳೆಲ್ಲ ಇದ್ದಾರೆ.

ಹಸನ್ಮುಖೀ (ನಗುಮುಖ)ಗಳಿರುವಂತೆಯೇ ವಿಚಾರೆ, ಗಂಭೀರೇ, ಗುಮಾನಿಗಳೆಲ್ಲ ಇದ್ದಾರೆ.

ಗುಬ್ಬಿ; ಕಾಗೆ, ನವಿಲೆ, ಕೋಗಿಲೆ, ಸಾಳುಂಕೆಗಳೆಲ್ಲ ಇರುವಂತೆಯೇ ಒಂಟೆ, ಹಾಥಿ (ಆನೆ)ಗಳೂ, ಕರಡಿಗಳೂ ಇದ್ದಾರೆ.

ರೊಡ್ಡಗಳಿರುವಂತೆಯೇ ಸೊಟ್ಟಗಳೂ ಇದ್ದಾರೆ. ರಂಗುರಂಗಿನ ಕಾಳೆ, ಗೋರೆ,



ಲಾಲೆಗಳಿರುವಂತೆಯೇ 'ಗಿಡ್ಡ' ಇದ್ದಾರೆ, 'ಲಂಬೆ' (ಎತ್ತರ)ಗಳೂ ಇದ್ದಾರೆ.

'ಪೈ', 'ಚವಲಿ', 'ಪಾವಲಿ', 'ಸವ್ವಾಸೆ', ಹಜಾರೆಗಳೆಲ್ಲ ಇದ್ದಾರೆ.

ಕುಟುಂಬ ಯೋಜನೆಯ ಪೂರ್ವಕಾಲದಲ್ಲಿಯೇ ಏಳು ಮಕ್ಕಳನ್ನು ಹೊಂದಿರುವ – 'ಸಾತಪುತೆ'ಗಳೂ ಇದ್ದಾರೆ.

ಗಿಂಡೆ, ಹಂಡೆಗಳಿರುವಂತೆಯೇ ದುಗ್ಗಾಣಿ, ವಾಗರಾಳಿಗಳೂ ಇದ್ದಾರೆ.

ಜಿರಲಿ, ಸೊಳ್ಳೆ,-ಚಿಕ್ಕಾಡೆಗಳೂ ಇದ್ದಾರೆ.

ರೊಟ್ಟಿ, ಬಳ್ಳೊಳ್ಳಿ, ಉಳ್ಳಾಗಡ್ಡಿಗಳಿರುವಂತೆ ಗಜ್ಜರಿ, ಮೂಲಂಗಿಗಳೂ, ಫಕಾಳೆಗಳು ಇದ್ದಾರೆ.

ಸುಂಕದಗಳಿರುವಂತೆ, ಸಂಗೀತಗಳೂ ಇದ್ದಾರೆ.

ಝಿಪರೆಗಳಿರುವಂತೆಯೇ ಟಕಲೆಗಳೂ ಇದ್ದಾರೆ.

ಹತ್ತಿ, ಹತ್ತಿಕಾಳು, ಆರಳೆ, ನೂಲಿ, ಹಂಜಿ, ಜವಳಿಗಳೆಲ್ಲ ನಮ್ಮೊಂದಿಗಿದ್ದಾರೆ.

ಕಿವುಡರೂ, ಕುರುಡರೂ ಇರುವಂತೆಯೇ ಗೊಡ್ಡಾಳೆಗಳೂ ಇದ್ದಾರೆ.

ಹೀಗೆ ಅಂತ್ಯಗೊಳ್ಳದ ಈ ಹೆಸರಿನ ಗಾಥೆ ಬೆಳೆಯುತ್ತಲೇ ಹೋಗುತ್ತದೆ. ವಿಭಿನ್ನ ರೀತಿಯ ಹೆಸರುಗಳ ವರ್ಗೀಕರಣ, ಅವುಗಳ ಅಂತರಂಗವನ್ನು ಬೆದಕಿನೋಡಿ ವಿಶ್ಲೇಷಿಸುವ ಉದ್ದೇಶವಾಗಲಿ, ಆಳವಾಗಿ ಅಭ್ಯಸಿಸುವ ಇರಾದೆಯಾಗಲಿ ಈ ಲೇಖನದ ಅಳಿವಿನಲ್ಲಿಲ್ಲವಾದುದರಿಂದ ಇದಕ್ಕೂ ಹೆಚ್ಚಿಗೆ ಉದ್ದಕ್ಕೆಳೆಯುವುದು ವಿಹಿತವೆನ್ನಿಸಲಿಕ್ಕಿಲ್ಲ.

**ವಯಸ್ಸು ನಿರ್ಣಯಿಸುವಲ್ಲಿ ಹೆಸರಿನ ಪಾತ್ರ**

ಅವರವರ ಹೆಸರುಗಳ ಮೇಲಿಂದಲೇ ಒಂದು ನಿರ್ದಿಷ್ಟ ಕಾಲಘಟ್ಟವನ್ನು, ಹಲವರ ವಯಸ್ಸನ್ನು ನಿರ್ಧರಿಸಲು ಸಾಧ್ಯ ಎಂದರೆ ನಂಬುವಿರಾ ? ಏನು ? ಶಿಲಾಶಾಸನದ ಪಳೆಯುಳಿಕೆಗಳಿಂದ, ಪಾತ್ರೆ, ಪಗಡೆ, ಆಯುಧಗಳ ಅಭ್ಯಾಸದಿಂದ ಕಾಲಮಾನವನ್ನು ಅಳೆಯುವುದನ್ನು ಕೇಳಿಬಲ್ಲೆವು. ''ಇದೆಂಥದಪ್ಪಾ ಹೆಸರಿನಿಂದ ಕಾಲಮಾನ !'' ಎಂದು ಹುಬ್ಬೇರಿಸದಿರಿ. ನಾನು ಪುರಾತತ್ವತಜ್ಞರ, ಮೇಧಾವಿಗಳ, ಇತಿಹಾಸಕಾರರ ಮಾತನ್ನಿಲ್ಲಿ ಹೇಳುತ್ತಿಲ್ಲ. ನನ್ನಂಥ ಒಬ್ಬ ಹುಲುಮಾನವ ತನ್ನ ಪರಿಧಿಗೆ ಬಂದ ಹೆಸರುಗಳನ್ನು ತನ್ನ ಅನುಕೂಲಕ್ಕೆ ತಕ್ಕಂತೆ 'ಕಾಲಮಾನ' ನಿರ್ಧರಿಸಲು ಹೇಗೆ ಬಳಸಿಕೊಳ್ಳುತ್ತಾನೆ ಎಂಬುದಷ್ಟೇ ಇಲ್ಲಿಯ ವಿಷಯ.

ನಾನೋ ಹಳ್ಳಿಗಾಡಿನ ಒಬ್ಬ ವೈದ್ಯ. ಅಲೋಪಥಿ ಎಂಬ ಇಂಗ್ಲಿಷ್ ಔಷಧಿ ಪದ್ಧತಿಯನ್ನು ಕಲಿತು ಅದನ್ನೇ ಬಳಸುವ ವೃತ್ತಿಯವನಾದ ನಾನು ದಿನನಿತ್ಯ ರೋಗಿಗಳು ಮತ್ತು ಅವರ ತಾಯ್ತಂದೆ ಅಥವಾ ಸಂಬಂಧಿಕರಿಂದ ರೋಗ ಮತ್ತು ರೋಗಿಯ ಸಂಪೂರ್ಣ ಮಾಹಿತಿ ಪಡೆಯಲು ಅನೇಕ ರೀತಿಯಲ್ಲಿ ತಿಪ್ಪರಲಾಗಹಾಕಬೇಕಾಗುತ್ತದೆ. ಹಲವರಿಗೆ ತಮ್ಮ ರೋಗ ಲಕ್ಷಣಗಳನ್ನು, ತೊಂದರೆಗಳನ್ನು ನಿರ್ದಿಷ್ಟವಾಗಿ ವಿವರಿಸಲು ಬರುವುದಿಲ್ಲ. ಅಷ್ಟೇ ಅಲ್ಲ, ಸುಮಾರು ಶೇಕಡಾ ಎಂಭತ್ತರಷ್ಟು ಜನರಿಗೆ ಅವರ, ಅವರ ಮಕ್ಕಳ ಸರ್ವಸಾಧಾರಣ ವಯಸ್ಸೂ ಗೊತ್ತಿರುವುದಿಲ್ಲ. ಅರವತ್ತರ ಅಂಚಿನಲ್ಲಿರುವವನೊಬ್ಬ 'ಶಂಭರ ಸನೇ ಸನೇ ಬಂದಿರಬೇಕಲ್ರಿ' ಎನ್ನುವಂತೆಯೇ, ೪೫-೫೦ರ ಆಸುಪಾಸಿನಲ್ಲಿರುವವಳು – 'ಪಂಚ್ವೀಸ

ಆಗಿರಬೇಕರಿ' ಎನ್ನುವುದೂ ಇದೆ. ಆದರೆ ಇದು ನಿಶ್ಚಿತಕ್ಕೂ ಉದ್ದೇಶಪೂರ್ವಕವಾಗಿ ಹೇಳಿದ್ದಲ್ಲ. ಅವರ ಅಸೀಮ ಅಜ್ಞಾನವೇ ಇದಕ್ಕೆ ಕಾರಣವೇ ಹೊರತು, ಮಧ್ಯವಯಸ್ಸು ದಾಟಿದ ಪುರುಷ ತಾನು ವಯೋವೃದ್ಧನೆಂದು ಹೇಳಿಕೊಳ್ಳುವ ವಾಂಛೆಯಾಗಲಿ ಅಥವಾ ಯಾವುದೇ ವಯಸ್ಸಿನಲ್ಲಿಯೂ ನಾನಿನ್ನೂ ಚಿರಯವ್ವನೆ ಎಂದು ಸಾಧಿಸಬಯಸುವ ಮಾನವಸಹಜ ಮನೋದೌರ್ಬಲ್ಯವಾಗಲಿ ಹೆಚ್ಚಿನವರಲ್ಲಿ ಇಲ್ಲ.

ಕೆಲವು ವಯಸ್ಸಿಗೆ ಕೆಲವು ಕೆಲಸಗಳು ಸಾಮಾನ್ಯ; ಕೆಲ ವಯಸ್ಸಿನಲ್ಲಿ ಕೆಲ ಔಷಧಿಗಳು ನಿಷಿದ್ಧ ಎಂಬ ಸಾಮಾನ್ಯ ಜ್ಞಾನವಾಗಲಿ, ವಯಸ್ಸಿಗೆ ತಕ್ಕಂತೆ ಔಷಧಿಗಳ ಪ್ರಮಾಣವೂ ಹೆಚ್ಚು ಕಡಿಮೆ ಮಾಡಬೇಕಾಗುತ್ತದೆ ಎಂಬ ಪರಿಜ್ಞಾನವಾಗಲಿ ಅವರಲ್ಲಿಲ್ಲ. 'ವಯಸ್ಸೆಷ್ಟು?' ಎಂದು ಕೇಳಿದೊಡನೆ ಎಂದೂ ಈ ನಿಟ್ಟಿನಲ್ಲಿ ಗಮನ ಹರಿಸದೇ ಇದ್ದ ಪ್ರಶ್ನೆಯೊಂದು ಅಕಸ್ಮಾತ್ ಎದುರಾದಾಗ ಆ ಕ್ಷಣ ತೋಚಿದ್ದನ್ನು ಬಿತ್ತರಿಸುವ ಅಸಹಾಯಕತೆ, ಮುಗ್ಧತೆ ಇವರದು.

ಆದರೆ ಇದರಿಂದ ಬಡವೈದ್ಯನ ಸಮಸ್ಯೆಗೇನೂ ಪರಿಹಾರ ದೊರಕುವುದಿಲ್ಲ. ಇಂಥ ಪ್ರಸಂಗಗಳಲ್ಲಿ ವೈದ್ಯರು ಬಳಸುವುದು ಹಲವಾರು ವಿಧಾನಗಳನ್ನು. ನಿನಗೆ ಮದುವೆಯಾಗಿ ಎಷ್ಟು ವರ್ಷವಾಯಿತು ? ನಿಮಗೆಷ್ಟು ಮಕ್ಕಳು ? ದೊಡ್ಡ ಮಗನಿಗೆ ಮದುವೆ ಯಾಗಿದೆಯೇ ? ಇಂಥವುಗಳಿಂದ ಒಂದು ವ್ಯಕ್ತಿಯ ವಯಸ್ಸಿನ ಅಂದಾಜು ಕಟ್ಟಬಹುದಷ್ಟೇ ! ನಾನು ನನ್ನನುಭವದಿಂದ ರಚಿಸಿಕೊಂಡ ಇಂಥದೇ ಒಂದು ವಿಧಾನ – ಅವರವರ ಹೆಸರುಗಳನ್ನು ಬಳಸ್ಕೊಂಡು ಅಂದಾಜು ಕಟ್ಟುವುದು !

ನಮ್ಮಲ್ಲಿಯ ಸದ್ದಾಂ ಹುಸೇನಗಳೆಲ್ಲ ೧೯೬೦ರ ಆಸುಪಾಸಿನಲ್ಲಿ ಜನಿಸಿದವರೇ. ಸುಮಾರು ಅದೇ ಸಮಯಕ್ಕೆ ಅಮೆರಿಕಾದ ದಾಳಿಯನ್ನು ಸದ್ದಾಂ ಮೆಟ್ಟಿನಿಂತಿದ್ದು! 'ಅಜರುದ್ದೀನ್'ಗಳು ಎಂಭತ್ತರ ಆಸುಪಾಸಿನ ತಳಿಗಳಾದರೆ ೧೯೬೫ರಲ್ಲಿ ಜನಿಸಿದ ನಾಲ್ಕಾರು ಜಯಸೂರ್ಯರನ್ನು ನಾನು ಬಲ್ಲೆ. 'ಶ್ರುತಿ' ಮತ್ತು 'ಭಾಗ್ಯಶ್ರೀ'ಗಳೆಲ್ಲ ಕನ್ನಡ ಚಲನಚಿತ್ರ ಶ್ರುತಿ ಮತ್ತು 'ಮೈನೆ ಪ್ಯಾರ್‌ಕಿಯಾ'ಗಳು ಹಿಟ್ ಆದ ಸಮಯದಲ್ಲಿ ಹುಟ್ಟಿದವರು.

ಆದರೆ ಈ ಸಾಮಾನ್ಯ ಸೂತ್ರ ಕೆಲವೊಮ್ಮೆ ಕೈಕೊಡುವುದುಂಟು. ನಲವತ್ತು ವರ್ಷದ ಪ್ರೌಢೆಯೊಬ್ಬಳು ರೋಗಿಯಾಗಿಬಂದಾಗ ಹೆಸರು ಕೇಳಿದಾಗ 'ಭಾಗ್ಯಶ್ರೀ' ಎಂದು ಸಣ್ಣ ಧ್ವನಿಯಲ್ಲಿ ಉಲಿದಳು. ಆಶ್ಚರ್ಯದಿಂದ ತಲೆ ಎತ್ತಿ ಅವಳ ಮುಖ ನೊಡಿದೆ. ಮೈನೆ ಪ್ಯಾರ್ ಕಿಯಾ ಚಲಾವಣೆಯಲ್ಲಿದ್ದ ದಿನಗಳವು. ಭಾಗ್ಯಶ್ರೀ ಎಲ್ಲರ ಕನಸಿನ ರಾಣಿ. ಲಜ್ಜೆ, ಸಂಕೋಚ, ನಾಚಿಕೆಗಳು ಅವಳ ಮುಖದಲ್ಲಿ ಲಾಸ್ಯವಾಡುತ್ತಿದ್ದವು. ಭಾಗವ್ವಳೆಂದೋ ಭಾಗೀರಥಿಯೆಂದೋ ಈ ಹಿಂದೆ ಅವಳ ಹೆಸರು ಬರೆದ ನೆನಪು. ಓಹೋ, ಇದು 'ನಾಮಾಂತರ' ತಾಜಾ ಕೇಸು ಎಂದು ನನ್ನ ಮಂಡೆಗೆ ಹೋದದ್ದು ಆಗ ಮಾತ್ರ.

**ಹೆಸರು ಮತ್ತು ಸಾಮಾಜಿಕ ಸ್ಥಾನ ಮಾನ**

ಕೆಲ ವರ್ಷಗಳ ಹಿಂದಿನವರೆಗೂ ಹೆಸರುಗಳು, ವರ್ಗ-ವರ್ಣಗಳನ್ನೂ ತೋರ್ಪಡಿಸುವಂತಿದ್ದವು. ಹಿಂದುಳಿದವರು ಶಿಷ್ಟ ಹೆಸರುಗಳನ್ನು ಇರಿಸಿಕೊಳ್ಳುವಂತಿರಲಿಲ್ಲ. ಕೆಂಪ ಮುಂದುವರಿದ ಜಾತಿಯಲ್ಲಿ ಹುಟ್ಟಿದವನಾದರೆ, 'ಕರಿಯ' ಹಿಂದುಳಿದವನು – ಇವರಿಬ್ಬರ ಮೈ ಬಣ್ಣ ತದ್ವಿರುದ್ಧವಾಗಿದ್ದರೂ ಇದು ಅಂದಿನ ಸಾಮಾಜಿಕ ನ್ಯಾಯಕ್ಕೆ ಅನುಗುಣವಾಗಿತ್ತು.

ಈರಿಗ, ಡೊಂಕ, ಗೂನ, ಗಿಡ್ಡ, ದೂಮ ಇವು ಹಿಂದುಳಿದ ವರ್ಗದ ಗಂಡಸರ ಹೆಸರುಗಳಾದರೆ ಈರಿ, ಕೆಂಪಿ, ಕಾಳಿ, ಗುತ್ತಿ – ಇವು ಹಿಂದುಳಿದ ಹೆಂಗಸರ ಹೆಸರುಗಳು.

ಏನೋ ಅಪ್ಪಿ ತಪ್ಪಿ ವಿಪ್ರ ಅಂತ್ಯಜರಂದು ತಮ್ಮ ಮಕ್ಕಳಿಗೆ ನಾರಾಯಣ ಎಂದು ಹೆಸರಿಟ್ಟಿದ್ದರೆ, ಈತ 'ನಾಣಿ'ಯಾಗುತ್ತಿದ್ದ, ಈತನ ಸಮವಯಸ್ಕನೇ ಆತ ಹೊಲಸ ನಾರ್ಯಾ ಆಗುತ್ತಿದ್ದ

ಡಾ|| ಅನಿಲ ಕಮತಿ
ಯಕ್ಸಂಬಾ - ೫೯೧ ೨೪೪

# ತಾಯಿ ಮತ್ತು ದೇವಿ

ಭಾರತಾಂಬೆ ನಮ್ಮ ತಾಯಿ
ಎಂದು ಕೇಳಿದಾಗಲೆಲ್ಲ ನನಗೆ
ಭೋರೆಂದು ಸುರಿವ ಮಳೆಯಲ್ಲಿ
ಕಂಬಳಿ ಕೊಪ್ಪೆ ಹಾಕಿಕೊಂಡು
ಗಡಗಡ ನಡುಗುತ್ತಾ ನಾಟಿ ಮಾಡುತ್ತಿದ್ದ
ನನ್ನಮ್ಮ ನೆನಪಾಗುತ್ತಾಳೆ

ಭಾರತಾಂಬೆ ನಮ್ಮ ತಾಯಿ
ಎಂದು ಕೇಳಿದಾಗಲೆಲ್ಲ ನನಗೆ
ತೊಯ್ದ ಕಟ್ಟಿಗೆಯನ್ನು ಒಲೆಗೆ ತುಂಬಿ
ಹಸಿಕಟ್ಟಿಗೆಯಿಂದ ಬಿಸಿನೀರು ಕಾಯಿಸಲು
ತನ್ನ ಜೀವದ ಉಸಿರನ್ನೇ ಹೊರಗೆ ಹಾಕುತ್ತಾ
ಊದಿ ಊದಿ ಹೊಗೆಯಲ್ಲೇ ಲೀನವಾಗುತ್ತಿದ್ದ
ನನ್ನಮ್ಮ ನೆನಪಾಗುತ್ತಾಳೆ

ಭಾರತಾಂಬೆ ನಮ್ಮ ತಾಯಿ
ಎಂದು ಕೇಳಿದಾಗಲೆಲ್ಲ ನನಗೆ
ಕುಡುಕ ಅಪ್ಪನ ಮೇಲಿನ ಸಿಟ್ಟನ್ನು
ಹಟಮಾಡಿದ ನನ್ನ ಮೇಲೆ ಹಾಕಿ
'ಚಟಾರ್' ಎಂದು ಕೆನ್ನೆಗೆ ಒಮ್ಮೆ ಬಾರಿಸಿ
ನಾನು 'ಚಿಟ್ಟನೆ' ಚೀರಿದಾಗ
ಬೆಚ್ಚಿಬಿದ್ದು ಗಪ್ಪನೆ ತಬ್ಬಿಕೊಂಡು
ತಾನೂ ಅಳುತ್ತಾ , ತನ್ನ ಕೈಯನ್ನೇ ಶಪಿಸಿಕೊಳ್ಳುತ್ತಾ
ನೆಲಕ್ಕೆ ಗುದ್ದಿ ಗುದ್ದಿ ಗಾಯಮಾಡಿಕೊಳ್ಳುತ್ತಿದ್ದ
ನನ್ನಮ್ಮ ನೆನಪಾಗುತ್ತಾಳೆ

ಭಾರತಾಂಬೆ ನಮ್ಮ ತಾಯಿ
ಎಂದು ಕೇಳಿದಾಗಲೆಲ್ಲ ನನಗೆ
ಸುಡುವ ರಣಬಿಸಿಲಿನಲ್ಲಿ
ಕಾಲಿಗೆ ಚಪ್ಪಲಿಯೂ ಇಲ್ಲದೆ
ದೂರದ ಬಾವಿಯಿಂದ ತಲೆಯ ಮೇಲೆ
ಕೊಡದ ಮೇಲೆ ಕೊಡವ ಹೊತ್ತುಕೊಂಡು
ಭಾರಕ್ಕೆ ತನ್ನ ಬಡನಡು ಬಳುಕಿಸುತ್ತಾ ಬರುವಾಗ
ತನ್ನ ವಯಸ್ಸಿನ ಗಂಡಸರು ತನ್ನ
ಎದೆಯ ಕುಣಿತವನ್ನು ದಿಟ್ಟಿಸಿ ನೋಡುವಾಗ
ಸಂಕಟದಿಂದ ಸೆರಗು ಎಳೆದುಕೊಂಡು
ತನ್ನ ಹರೆಯವನ್ನು ಮುಚ್ಚಿಟ್ಟುಕೊಳ್ಳಲು ಗೋಳಾಡುತ್ತಿದ್ದ
ನನ್ನಮ್ಮ ನೆನಪಾಗುತ್ತಾಳೆ

ಆದರೆ ಎಷ್ಟು ಕಷ್ಟಪಟ್ಟರೂ
ಭಾರತಾಂಬೆ ನಮ್ಮ ತಾಯಿ ಎಂದು ಕೇಳಿದಾಗ
ಒಮ್ಮೆಯಾದರೂ ನನಗೆ
ತಲೆಗೆ ಕಿರೀಟ ಧರಿಸಿಕೊಂಡು
ಕೈಯಲ್ಲಿ ತ್ರಿಶೂಲ ಹಿಡಿದುಕೊಂಡು
ತೋಳುಬಂದಿ ಸೊಂಟಪಟ್ಟಿ ಹಾಕಿಕೊಂಡು
ಕಣ್ಣು ಕಿವಿ ಮೂಗುಗಳಿಗೆ 'ಭಾರಿ' ಆಭರಣ ಇಟ್ಟುಕೊಂಡು
ವಿರಾಜಮಾನಳಾದ 'ದೇವಿ'
ನೆನಪಾಗುವುದೇ ಇಲ್ಲ

ಏಕೋ ಇತ್ತೀಚೆಗೆ ನನಗೆ ಭಯ ಶುರುವಾಗಿದೆ
ಒಂದು ವೇಳೆ ನನ್ನಮ್ಮನೂ ಭಾರತಾಂಬೆಯಂತೆ
ದೇವಿಯಾಗಿಬಿಟ್ಟರೆ !
ಗರ್ಭಗುಡಿ ಸೇರಿಬಿಟ್ಟರೆ ?!
ದೇವಿಯಾದವಳು ತಾಯಿಯಾಗಿರಲು ಸಾಧ್ಯವೇ ?

ಗರ್ಭದಿಂದ ಹೊರಗೆ ಬಂದ ಶಿಶು
ಗರ್ಭಗುಡಿಯ ಒಳಗೆ ಹೋದ ತಾಯಿ
ಮರಳಿ ಬರುವುದುಂಟೆ ಮೊದಲ ಜಾಗಕ್ಕೆ ?

ನನ್ನಂತೂ ಖಂಡಿತಾ ಬಿಡುವುದಿಲ್ಲ
ಗರ್ಭಗುಡಿಯ ಒಳಗೆ !!



ರಾಜೇಂದ್ರ ಬುರಡಿಕಟ್ಟಿ
ಪರ್ಣಕುಟಿ - ಸಾಲೇಕೊಪ್ಪ, ಸರು ಅಂಚೆ, ತೀರ್ಥಹಳ್ಳಿ ತಾಲ್ಲೂಕು
ಶಿವಮೊಗ್ಗ ಜಿಲ್ಲೆ - ೫೭೭ ೪೨೨

**ಅಯೋಧ್ಯೆ** (ವಿನಾಶಕಾರಿ ವೋಟ್ ಬ್ಯಾಂಕ್ ರಾಜಕೀಯ)

*ಮಧು ಲಿಮಯೆ ಅನು : ಹಸನ್ ನಯೀಂ ಸುರಕೋಡ*

**ಪುಟ :** ೮೮ **ಬೆಲೆ : ರೂ.** ೨೫

**ಲೋಹಿಯಾ ಪ್ರಕಾಶನ,** 'ಕ್ಷಿತಿಜ', ಕಪ್ಪಗಲ್ಲು ರಸ್ತೆ, ಗಾಂಧಿನಗರ, ಬಳ್ಳಾರಿ - ೫೮೩ ೧೦೩

ಹಿರಿಯ ಸಮಾಜವಾದಿ ಚಿಂತಕ ಮಧು ಲಿಮಯೆ ಅವರ ವಿಚಾರಪೂರ್ಣ ಲೇಖನಗಳ ಸಂಕಲನ ಇದು. ಲೋಹಿಯಾ ಹಾಗೂ ಜಯಪ್ರಕಾಶ್ ನಾರಾಯಣ್‌ರಿಂದ ಪ್ರಭಾವಿತರಾಗಿದ್ದ ಲಿಮಯೆ ಈ ಕೃತಿಯಲ್ಲಿ ೧೯೭೨ರ ಜನವರಿಯಿಂದ ಡಿಸೆಂಬರ್‌ವರೆಗಿನ ಪ್ರಕ್ಷುಬ್ಧ ಕಾಲಾವಧಿಯಲ್ಲಿ ಬರೆದ ಲೇಖನಗಳು ಲೋಹಿಯಾರವರು ಈ ವಿವಾದದ ಕುರಿತು ಹೇಗೆ ಪ್ರತಿಕ್ರಿಯಿಸಬಹುದೋ ಹಾಗೇ ಬರೆದಿದ್ದಾರೆ. 'ಭಾರತೀಯರ ಮನಸ್ಸಾಕ್ಷಿಯ ರಕ್ಷಕರಂತಿದ್ದ ಲಿಮಯೆ ಅವರ ಚಿಂತನೆ ದೇಶದ ಪ್ರಸಕ್ತ ಸಂದರ್ಭದಲ್ಲಿ ತುಂಬ ಪ್ರಸ್ತುತವೆನಿಸುವುದರಲ್ಲಿ ಸಂದೇಹವಿಲ್ಲ' ಎಂಬ ಮಾತು ಲೇಖನಗಳನ್ನು ಮನದಟ್ಟು ಮಾಡಿಕೊಳ್ಳುತ್ತಾ ಸಾಗಿದಂತೆ ಗೊತ್ತಾಗುತ್ತದೆ. ಹಸನ್ ನಯೀಂ ಸುರಕೋಡ ಈ ವಿಚಾರಪೂರ್ಣ ಲೇಖನಗಳನ್ನು ಅಚ್ಚುಕಟ್ಟಾಗಿ ಕನ್ನಡಕ್ಕೆ ಅನುವಾದಿಸಿದ್ದಾರೆ.

**ಭೂಮಿಗಂಧ** (ಕವನ ಸಂಕಲನ)

*ಜಿ. ಪಿ. ಬಸವರಾಜು*

**ಪುಟ :** ೧೭೪+೪ **ಬೆಲೆ : ರೂ.** ೯೦

**ಶ್ರೀ ರಾಘವೇಂದ್ರ ಪ್ರಕಾಶನ,** ಅಂಬಾರಕೊಡ್ಲ, ಅಂಕೋಲಾ - ೫೮೧ ೩೧೪

ಜಿ. ಪಿ. ಬಸವರಾಜುರವರು ಕಳೆದ ಹತ್ತುವರ್ಷಗಳಲ್ಲಿ ಕಾವ್ಯದೊಂದಿಗೆ ನಡೆಸಿದ ಅನುಸಂಧಾನದ ಫಲವೇ 'ಭೂಮಿಗಂಧ'ವಾಗಿ ಮೈತಾಳಿದೆ. ಇದು ಇವರ ಮೂರನೆಯ ಕವನ ಸಂಕಲನ. 'ಅಂತರಂಗದ ದನಿಗೆ ಕಿವಿ ಮತ್ತು ಮನಸ್ಸುಗಳನ್ನು ಕೀಲಿಸಿ ನಡೆಸುವ ಏಕಾಗ್ರ ಧ್ಯಾನವೇ ನನ್ನ ಕಾವ್ಯ' ಎಂದಿರುವ ಇವರ ಕವನಗಳನ್ನು ಓದುವುದೇ ಒಂದು ವಿಶಿಷ್ಟ ಅನುಭವ. 'ಆಕಾಶದಲ್ಲಿ ಮಿಂಚು ಇದ್ದದ್ದೆ ತಿಳಿಯುವುದಿಲ್ಲ। ಅದು ಬಂದುಹೋದದ್ದಕ್ಕೆ ಕಣ್ಣು ಸಾಕ್ಷಿಯಾಗಿರುತ್ತದೆ। ಹೃದಯದ ಮಾತು ಹೀಗೆ ಹೊಳೆಯುವುದು ತಾನೇ। – 'ಕಾವ್ಯ'ವನ್ನು ಕುರಿತಂತೆ ಇಂಥ ಆಪ್ತ ಸಾಲುಗಳು ಮನಸ್ಸನ್ನು ಸೆರೆಹಿಡಿಯುತ್ತವೆ. 'ಸಮಕಾಲೀನ ಮುಖ್ಯ ಪ್ರಶ್ನೆಗಳಿಂದ ಹಿಡಿದು ಸೂಕ್ಷ್ಮವಾದ ಆಸಕ್ತಿಗಳಿಗೆ ಕವಿ ಎದುರಾಗಿದ್ದಾರೆ' ಎಂದು ಕಿ. ರಂ. ಗುರುತಿಸಿದ್ದಾರೆ. 'ಈ ಕವಿತೆಗಳು ಬಿಡುಗಡೆಯ ಉಲ್ಲಾಸವನ್ನು ಹುಟ್ಟಿಸುತ್ತವೆ ಮತ್ತು ಸಮಕಾಲೀನ ಕನ್ನಡ ಕವಿತೆಯ ನಡುವೆ ತಮ್ಮ ವಿಭಿನ್ನ ದನಿಯನ್ನು ದಾಖಲಿಸುತ್ತವೆ' ಎಂದು ಬೆನ್ನುಡಿಯಲ್ಲಿ ಜಿ. ಎಸ್. ಎಸ್. ತಿಳಿಸಿದ್ದಾರೆ.

**ಭೂಮಿಗೀತೆ** (ಭಾರತೀಯ ಪರಿಸರವಾದದ ಪುನರಾವಲೋಕನ)

*ಟಿ. ಎಸ್. ವಿವೇಕಾನಂದ*

**ಪುಟ :** xvi+೨೬೦ **ಬೆಲೆ : ರೂ.** ೧೮೦

**ಇಂದ್ರಪ್ರಸ್ಥ ಪ್ರಕಾಶನ,** ನಂ. ೩೬೦, ಗವಿಪುರಂ, ೧ನೇ ಅಡ್ಡರಸ್ತೆ, ಬೆಂಗಳೂರು - ೫೬೦ ೦೧೯

ಟಿ. ಎಸ್. ವಿವೇಕಾನಂದರವರು ಸರಿಸುಮಾರು ಎರಡು ದಶಕಗಳ ಅವಧಿಯ ಪರಿಸರ ಕ್ಷೇತ್ರದ ಒಡನಾಟದಿಂದ ದೊರೆತ ಅನುಭವ, ಓದು, ಗ್ರಹಿಕೆಗಳ ಸಾರರೂಪ ಇದಾಗಿದೆ. ಆದರೆ ಅವರೇ ಹೇಳಿಕೊಳ್ಳುವಂತೆ – 'ನಿಜ ಪರಿಸರವಾದದ ಸ್ವರೂಪ ಮತ್ತು ವ್ಯಾಪ್ತಿಗಳನ್ನು ಮಾತ್ರ ನಿಮ್ಮ ಮುಂದಿಡಲು ಪ್ರಯತ್ನಿಸಿದ್ದೇನೆ. ಹಾಲಿ ಪರಿಸರವಾದದ ಮೇಲೆ. ಇಳಿಬಿಟ್ಟಿರುವ ವರ್ಣರಂಜಿತ ಪರದೆಯ ಹಿಂದಿನದನ್ನು ತೆರೆದಿಡುವುದು ನನ್ನ ಉದ್ದೇಶ. ಇವನ್ನು ಸರಿಯಾಗಿ ಅರ್ಥಮಾಡಿಕೊಳ್ಳದ ಹೊರತು ಈ ನಾಡಿನ ಯಾವುದೇ ಚಳವಳಿಗೆ ಭವಿಷ್ಯವಿಲ್ಲವೆಂದೇ ನಾನು ನಂಬಿದ್ದೇನೆ.' ಈ ನಿಟ್ಟಿನಲ್ಲಿ ಇವರ ಭಾರತೀಯ ಪರಿಸರವಾದದ ಪುನರಾವಲೋಕನ ಮುಂದುವರೆಯುತ್ತದೆ.

**ಕಂಪನಿ ಸವಾಲ್** (ಕವನಗಳು)

*ಸತೀಶ ಕುಲಕರ್ಣಿ*

**ಪುಟ :** xii+೯೦ **ಬೆಲೆ : ರೂ.** ೫೦

**ಲೋಹಿಯಾ ಪ್ರಕಾಶನ,** 'ಕ್ಷಿತಿಜ', ಕಪ್ಪಗಲ್ಲು ರಸ್ತೆ, ಗಾಂಧಿನಗರ, ಬಳ್ಳಾರಿ - ೫೮೩ ೧೦೩

ಕಾವ್ಯ, ನಾಟಕ, ವಿಮರ್ಶೆ, ಸಂಘಟನೆಗಳಿಂದ ಗಮನ ಸೆಳೆದಿರುವ ಸತೀಶ್ ಕುಲಕರ್ಣಿಯವರ ಕವನ ಸಂಕಲನ ಇದಾಗಿದೆ. ಒಡಲಾಳದ ಕಿಚ್ಚು, ವಿಷಾದಯೋಗ, ಗಾಂಧೀಗಿಡ ಕೃತಿಗಳಲ್ಲಿ ಅವರ ಮನಃಸ್ಥಿತಿಯ ನಡಿಗೆಯ ಹಾದಿಯನ್ನು ಗುರುತಿಸಬಹುದು. 'ಆಳದಲ್ಲಿ ಎಲ್ಲಿಯೋ ಪ್ರತಿಭಟನೆಯ ಶಕ್ತಿಯೊಂದು ಹುದುಗಿಕೊಂಡು ರಾಜಕೀಯ, ಸಾಮಾಜಿಕ, ಸ್ಫೋಟಕ್ಕಾಗಿ ಕಾದಿದೆ ಏನೋ ಎಂಬ ವಾತಾವರಣವಿದೆ. ದಮನಕ್ಕೆ ಪ್ರತಿಭಟನೆಯೇ ಉತ್ತರ ಎಂಬ ಸ್ಥಿತಿಯಲ್ಲಿ ನಾವು ಬದುಕುತ್ತಿದ್ದೇವೆ. ಎಲ್ಲ ಕಡೆ ಕಂಪನಿಗಳ ಆಳ್ವಿಕೆ ಆರಂಭವಾಗಿ, ಕಂಪನಿ ಸವಾಲುಗಳು ಹೆಜ್ಜೆ ಹೆಜ್ಜೆಗೂ ಎದುರಾಗುತ್ತವೆ. ಇವನ್ನು ಕಾವ್ಯರೂಪದಲ್ಲಿ ಇಲ್ಲಿ ಕೊಡಲು ಪ್ರಯತ್ನಿಸಿದ್ದೇನೆ' ಎನ್ನುವ ಅವರ ಮಾತುಗಳು ಕವನಗಳನ್ನು ಓದಲು ಮಾರ್ಗಸೂಚಿಯಾಗಿವೆ.

**ಸುಗ್ಗಿಯ ಕತೆ** (ಕಥನ ಕಾವ್ಯ)

*ಎಲ್. ರಂಗನಾಥ್ ಶಿರಾ*

**ಪುಟ :** xvi+೯೬ **ಬೆಲೆ : ರೂ.** ೧೦೦

**ಪಂಚಮ ಪ್ರಕಾಶನ,** ಕೆರೆಹಿಂದಲಹಟ್ಟಿ, ಶಿರಾ ಟೌನ್ - ೫೭೨ ೧೩೭, ತುಮಕೂರು ಜಿಲ್ಲೆ

ಬಂಡಾಯ ಪ್ರಜ್ಞೆಯ ಲೇಖಕ-ಕವಿ ಶ್ರೀ ಎಲ್. ರಂಗನಾಥ್ ಶಿರಾರವರ ಕಥನಕಾವ್ಯ ಇದು. ಈ ಕೃತಿಯ ಕುರಿತಂತೆ ಮುನ್ನುಡಿಯಲ್ಲಿ ಬರಗೂರು ರಾಮಚಂದ್ರಪ್ಪನವರು ಮುಖ್ಯವಾದ ಎರಡು ಅಂಶಗಳನ್ನು ಗುರುತಿಸಿದ್ದಾರೆ – 'ಅತ್ಯಂತ ಪ್ರಾದೇಶಿಕ ಪರಿಸರ ಮತ್ತು ಭಾಷೆ' ಹಾಗೂ 'ವ್ಯವಸ್ಥೆಯೊಂದರ ಒಳಸುಳಿಗಳನ್ನು ಕಥಾ ಹಂದರದಲ್ಲಿ ಅಂತರ್ಗತಗೊಳಿಸುವ ಅಭಿವ್ಯಕ್ತಿ'. ಜಾಣಗೆರೆ ವೆಂಕಟರಾಮಯ್ಯನವರು ಹೇಳಿರುವಂತೆ 'ದಲಿತ ಲೋಕದ ದಾರುಣ ಬದುಕಿನ ಘೋರ ಚಿತ್ರಣವನ್ನು ತಮ್ಮದೇ ಊರುಕೇರಿಯ ಆಡುಭಾಷೆಯಲ್ಲಿ ರಚಿಸುವ ಸಾಹಸ ಮಾಡಿದ್ದಾರೆ'. 'ಈ ಕೃತಿ ಭಾಷಾ ವಿಜ್ಞಾನಿಗಳಿಗೆ ಆಹಾರ ಒದಗಿಸುವುದಂತೂ ಮುಖ್ಯ ಸಂಗತಿಯಾಗಿದೆ' ಎಂದು ಬರಗೂರು ರಾಮಚಂದ್ರಪ್ಪನವರು ಹೇಳಿದ್ದಾರೆ. ತಾನು ಬದುಕಿರುವ ನೆಲದ ಭಾಷೆಯ ಸೊಗಡಿನಲ್ಲೇ ಕೃತಿ ಪ್ರಕಟವಾಗಬೇಕೆಂಬ ಆಶಯ ಲೇಖಕರದು.

**ಪ್ರೀತಿ ಮತ್ತು ನಿರ್ಭೀತಿ** (ವಿಮರ್ಶಾ ಲೇಖನಗಳು)

*ಕಾಳೇಗೌಡ ನಾಗವಾರ*

**ಪುಟ :** xiv+೧೪೮ **ಬೆಲೆ : ರೂ.** ೫೦

**ಕನ್ನಡ ಪುಸ್ತಕ ಪ್ರಾಧಿಕಾರ,** ಕನ್ನಡ ಭವನ, ಜೆ. ಸಿ. ರಸ್ತೆ, ಬೆಂಗಳೂರು - ೫೬೦ ೦೦೨

ಕಾಳೇಗೌಡ ನಾಗವಾರರವರ ಈ ಕೃತಿಯಲ್ಲಿ ಕನ್ನಡ ಸಾಹಿತ್ಯ ಸಂಸ್ಕೃತಿಗೆ ಸಂಬಂಧಿಸಿದ ೩೪ ಲೇಖನಗಳಿವೆ. ೧೯೮೮ರಲ್ಲಿ ಪ್ರಥಮ ಮುದ್ರಣ ಕಂಡು ಅನೇಕರ ಗಮನ ಸೆಳೆದ ಈ ಕೃತಿ ಕಾವ್ಯಾನಂದ ಪುರಸ್ಕಾರ ಪಡೆದುಕೊಂಡು ಈಗ ಎರಡನೇ ಮುದ್ರಣ ಕಂಡಿರುವುದು ಸಂತೋಷದ ಸಂಗತಿ. 'ಜಾನಪದ ಸಾಹಿತ್ಯ, ಹಳಗನ್ನಡ ಕಾವ್ಯ ಹಾಗೂ ಆಧುನಿಕ ಕನ್ನಡ ಸಾಹಿತ್ಯದ ಹಲವರ ಕೃತಿಗಳ ಬಗ್ಗೆ ಸಮಾಜೋಸಾಂಸ್ಕೃತಿಕ ದೃಷ್ಟಿಯ ವಿಶ್ಲೇಷಣೆಯನ್ನೊಳಗೊಂಡ ಲೇಖನಗಳಿವೆ ಎಂದು ಎಸ್. ಜಿ. ಸಿದ್ಧರಾಮಯ್ಯ ಹೇಳಿದ್ದಾರೆ. ಈ ಕೃತಿಯಲ್ಲಿರುವ ಸಂದರ್ಶನಗಳ ಭಾಗ ಓದುತ್ತಿದ್ದರೆ ಕಾಳೇಗೌಡ ನಾಗವಾರರವರ ಸೂಕ್ಷ್ಮ ಚಿಕಿತ್ಸಕ ಸಾಮಾಜಿಕ ದೃಷ್ಟಿ ಎಂಥದೆಂಬುದು ತಿಳಿದುಬರುತ್ತದೆ.

– ಎನ್. ಪಿ. ಮಹೇಶ್, ಸೇಂಟ್ ಆ್ಯನ್ಸ್ ವುಮೆನ್ಸ್ ಪ್ರಥಮ ದರ್ಜೆ ಕಾಲೇಜು,
ನಂ. ೨, ಕೇಂಬ್ರಿಡ್ಜ್ ರಸ್ತೆ, ಹಲಸೂರು, ಬೆಂಗಳೂರು - ೫೬೦ ೦೦೮

# ಮಠಾಧೀಶರು ಮತ್ತು ವಚನಕಾರರು

ಕೆ. ಡಿ. ಮುತ್ತೂರ

ಅಂದು ಗ್ರಾಮಾಂತರ ಪ್ರದೇಶಗಳಲ್ಲಿ ಕೇರಿಗೊಂದು ಕೆರೆ, ಊರಿಗೊಂದು ಮಠ. ಗಾದೆಯ ಮಾತಿನಂತೆ ಇವು ಪ್ರತಿಯೊಂದು ಊರಿನಲ್ಲಿ ಕಂಡುಬರುತ್ತಿದ್ದವು. ಕೆರೆಗಳ ನೀರು ಮೇಲ್ಜಾತಿಯವರಿಗೂ ಪಶುಪಕ್ಷಿಗಳಿಗೂ ಸುಲಭವಾಗಿ ದೊರೆಯುತ್ತಿದ್ದವು. ಆದರೆ ನಿಮ್ನ ವರ್ಗದವರಿಗೆ ನೀರು ಪಡೆಯಲು ಬಹಳ ಪ್ರಯಾಸಪಡಬೇಕಾಗುತ್ತಿತ್ತು. ಆಗ ಸಾಮಾಜಿಕ ಅಸಮತೋಲನ ಪರಮಾತ್ಮನ ಸೃಷ್ಟಿಯೆಂದು ಎಲ್ಲರೂ ಒಪ್ಪಿಕೊಂಡಿದ್ದರು. ಮಠಗಳು ಅಕ್ಷರಾಭ್ಯಾಸದ ಕೇಂದ್ರಗಳಾಗಿದ್ದವು. ಅಕ್ಷರಾಭ್ಯಾಸವು ಮೇಲ್ಜಾತಿಯ ಜನರಿಗೆ ಮೀಸಲಾಗಿತ್ತು. ಕೆಳಜಾತಿಗಳಿಗೆ ಅಕ್ಷರಾಭ್ಯಾಸಕ್ಕೆ ಮಠಗಳಲ್ಲಿ ಪ್ರವೇಶವೇ ಇರಲಿಲ್ಲ. ಶೂದ್ರರಿಗೆ ಅದು ದೊರೆಯುತ್ತಲೂ ಇರಲಿಲ್ಲ. ಮಠದಲ್ಲಿ ಅಕ್ಷರಾಭ್ಯಾಸದ ಜೊತೆಗೆ ಜಾತಿ, ಮತ, ಪಂಥ, ಮೇಲು-ಕೀಳು, ಮಡಿ-ಮೈಲಿಗೆ, ಅಸ್ಪೃಶ್ಯತೆ ಇವೆಲ್ಲ ಪಠ್ಯವಿಷಯವಾಗಿಯೇ ಪಾಠ ದೊರೆಯುತ್ತಿತ್ತು. ಮೇಲ್ಜಾತಿಯ ಜನರಿಂದ ಪ್ರೋತ್ಸಾಹವಿತ್ತು. ಅದು ಮೇಲ್ಜಾತಿಯವರ ಗೌರವದ ಪ್ರಶ್ನೆಯೂ ಆಗಿತ್ತು. ಅಸ್ಪೃಶ್ಯತೆ ವೈಯಕ್ತಿಕವಾಗಿಯೂ ಮನೆಮನೆಗಳಲ್ಲಿಯೂ ಸಾರ್ವಜನಿಕ ಸ್ಥಳಗಳಲ್ಲಿಯೂ, ಗುಡಿ ಗುಂಡಾರಗಳಲ್ಲಿಯೂ, ಬಾವಿ, ಕೆರೆ ಜಲಾಶಯಗಳಲ್ಲಿಯೂ ವ್ಯವಸ್ಥಿತವಾಗಿ ಕಡ್ಡಾಯವಾಗಿ ಜಾರಿಯಲ್ಲಿತ್ತು. ಆದರೆ ಈಗ ಮಠಗಳಲ್ಲಿ ಅಕ್ಷರ ಅಭ್ಯಾಸ ನಡೆಯುವುದಿಲ್ಲ ನಿಜ. ಆದರೆ ಶಾಲೆ ಕಾಲೇಜುಗಳು ಶಿಕ್ಷಣ ಸಂಸ್ಥೆಗಳು ಮಠಾಧೀಶರ ಕೈಯಲ್ಲಿಯೇ ಇವೆ. ರಾಜಕೀಯ ಪಕ್ಷಗಳು ಕೂಡ ಜಾತಿವಾದಿಗಳಿಂದ, ಧಾರ್ಮಿಕ ಭಾವನೆಯಿಂದ, ಮುಕ್ತವಾಗಿವೆ ಎಂಬ ವಿಶ್ವಾಸ ಬರುವುದಿಲ್ಲ. ಅಂತೆಯೇ ಅಸ್ಪೃಶ್ಯತೆ ಮತ್ತು ಮತಗಳು ಪ್ರಕಾಶಿಸುತ್ತವೆ. ವಿದ್ಯೆಯೇನೋ ದೊರೆಯುತ್ತದೆ. ಅದು ಯಾವ ಹಾದಿ ಹಿಡಿಯುತ್ತದೆ ಎಂಬುದು ಗೊತ್ತಾಗುತ್ತಿಲ್ಲ. ಧಾರ್ಮಿಕ ಭಯೋತ್ಪಾದನೆಯ ಹುಟ್ಟು ಇಲ್ಲಿಯೇ ಇರಬೇಕು. ರಾಷ್ಟ್ರೀಯತೆ, ಧರ್ಮನಿರಪೇಕ್ಷತೆ, ಜಾತ್ಯತೀತತೆ ಈ ಶಬ್ದಗಳು ಶಿಕ್ಷಣ ಸಂಸ್ಥೆಗಳನ್ನು ನಡೆಸುತ್ತಿರುವವರಿಗೆ ಶಿಕ್ಷಕರಿಗೆ ಅಪರಿಚಿತ ಶಬ್ದಗಳಾಗಿರಬೇಕು. ಇಲ್ಲವೇ ಈ ಶಬ್ದಗಳನ್ನು ಬೇಕಂತಲೇ ಮರೆಮಾಚುತ್ತಿರಬೇಕು. ಸಂವಿಧಾನದಲ್ಲಿ ಈ ಪದಗಳು ಇದ್ದೂ ಇಲ್ಲದಂತಾಗಿವೆ. ಹೀಗಾಗಿ ರಾಷ್ಟ್ರೀಯತೆಯ ಬದಲಿಗೆ ಧಾರ್ಮಿಕ ಭಯೋತ್ಪಾದನೆ ಬೆಳೆಯಲು ಕಾರಣವಾಗಿದೆ.

ಸುಮಾರು ಎಂಟುನೂರು ವರ್ಷಗಳ ಹಿಂದೆಯೇ ವಚನಕಾರರು ಧರ್ಮನಿರಪೇಕ್ಷತೆ ಮತ್ತು ಜಾತ್ಯತೀತತೆಯ ಬಗ್ಗೆ ದೊಡ್ಡ ಆಂದೋಲನ ಮಾಡಿದರು. ಪ್ರಾಣವನ್ನೇ ಪಣಕ್ಕಿಟ್ಟು ಹೋರಾಡಿದರು. ಅಂದಿನ ಮಠಾಧೀಶರ ಕಾರ್ಯವೈಖರಿಯನ್ನು ಕಣ್ಣಾರೆ ಕಂಡು ಈ ಕೆಳಗಿನ ವಚನಗಳಲ್ಲಿ ತಮ್ಮ ನ್ಯಾಯ ನಿಷ್ಠುರತೆಯನ್ನು ಪ್ರದರ್ಶಿಸಿದ್ದಾರೆ.



*ಮಾತು ಕಲಿತು ಮಂಡೆಯ ಬೋಳಿಸಿಕೊಂಡರೇನು ?*
*ವೇಷಲಾಂಛನಧಾರಿಗಳಾಗಿ ಉದರ ಪೋಷಕರಪ್ಪರಲ್ಲದೆ*
*ಶಿವಾಗಮದ ಸುವಿಚಾರದ ಹೊಲಬನರಿಯರು ಕಾಣಿರೆ*
*ಅಷ್ಟವಿಧಾರ್ಚನೆ ಷೋಡಶೋಪಚಾರ ಸಲ್ಲದು ಸೀಮೆಕಲ್ಲಿಗೆ*
*ಅನ್ಯರ ಬೋಧಿಸಿ ತನ್ನುದರವ ಹೊರೆವ*
*ಬರಿವೇಷ ಡಂಬಕರ ಮೆಚ್ಚ*
*ನಮ್ಮ ಕೂಡಲಚನ್ನಸಂಗಮದೇವ*

ತಲೆಯನ್ನು ನುಣ್ಣಗೆ ಬೋಳಿಸಿಕೊಂಡು, ಬೆಲೆಯುಳ್ಳ ಆಕರ್ಷಕ ಕಾಷಾಯಾಂಬರಗಳನ್ನು ತೊಟ್ಟು, ಗಿಳಿಯಂತೆ ಒಳ್ಳೆಯ ಮಾತುಗಳನ್ನು ಕಲಿತುಕೊಂಡು, ತುತ್ತು ಅನ್ನಕ್ಕಾಗಿ ಮಾಡಿಕೊಂಡ ಯೋಜನೆಯ ವೇಷವದು, ಇವರಿಗೆ ಲೋಕ ಕಲ್ಯಾಣದ ಸದ್ವಿಚಾರಗಳು ಗೊತ್ತೇಯಿಲ್ಲ. ಸೀಮೆಯ ಕಲ್ಲಿಗೆ ಲಿಂಗವೆಂದು ಕಲ್ಪಿಸಿ ಎಂಟು ತರದ ಪೂಜೆ, ಹದಿನಾರು ತರದ ಸೇವೆ ಏಕೆ ಬೇಕು ? ಜನರಿಗೆ ಬೋಧನೆಯನ್ನು ಮಾಡುತ್ತ, ಅವರ ಕಿಸೆಗೆ ಕತ್ತರಿಯನ್ನು ಹಾಕುತ್ತ ತನ್ನ ಉಪಜೀವನದ ಹಾದಿಯನ್ನು ಸುಗಮಗೊಳಿಸಿಕೊಳ್ಳುವುದು. ಇಂಥ ವೇಷಧಾರಿ ಆಷಾಢಭೂತಿಗಳನ್ನು ಕೂಡಲಚನ್ನಸಂಗಮದೇವನೆಂದೂ ಮೆಚ್ಚನು ಎಂದು ಚನ್ನಬಸವಣ್ಣನವರು ಎಚ್ಚರಿಸುತ್ತಾರೆ.

*ಕೇಶ ಕಷಾಯಾಂಬರ ವೇಷ ಲಾಂಛನವಾದೊಡೇನೋ*
*ಗ್ರಾಸಕ್ಕೆ ಭಾಜನರಲ್ಲದೆ, ಲಿಂಗಕ್ಕೆ ಭಾಜನರಲ್ಲ*
*ಈ ಆಸೆಯ ವೇಷವ ಕಂಡೆಡೆ ಕಾರಹುಣ್ಣಿವೆ ಹಗರಣವೆಂಬೆ*
*ಕಾಣಾ ಕೂಡಲಚನ್ನಸಂಗಮದೇವಾ*

ಕೇಶವನ್ನು ಬೆಳೆಸಿಕೊಂಡು ನೆತ್ತಿಯ ಮೇಲೆ ತುರುಬನ್ನು ಕಟ್ಟಿಕೊಂಡು ಕಾವಿ ಬಣ್ಣದ ರೇಶಿಮೆ ವಸ್ತ್ರವನ್ನು ತೊಟ್ಟುಕೊಂಡು ಮಹಾಸ್ವಾಮಿಗಳು ಎನ್ನುವಂತೆ ಜನರ ಮನಸ್ಸಿಗೆ ಬಿಂಬಿಸುತ್ತ ತಿರುಗುವುದು ಊಟಕ್ಕಲ್ಲದೆ ಮತ್ತೇನು ? ಸದಾಚಾರಕ್ಕೂ ಅಲ್ಲ, ಒಳ್ಳೆಯ ಕೆಲಸಕ್ಕೂ ಅಲ್ಲ. ಈ ಆಸೆಬುರುಕರ ವೇಷವನ್ನು ಕಂಡಕೂಡಲೆ ಕಾರಹುಣ್ಣಿಮೆಯಲ್ಲಿ ಶೃಂಗರಿಸಿದ ಎತ್ತಿನ ನೆನಪಾಗುತ್ತದೆ ಎನ್ನುತ್ತಾರೆ ಚನ್ನಬಸವಣ್ಣನವರು.

*ಕೇಶ ಕಷಾಯಾಂಬರವನ್ನಿಕ್ಕಿದಡೇನು ?*
*ವಿಭೂತಿ ರುದ್ರಾಕ್ಷಿ ಮುಕುಟವ ಧರಿಸಿದಡೇನು ?*
*ಸಾಕಾರದಲ್ಲಿ ಸನ್ಮತರಲ್ಲ ನಿರಾಕಾರದಲ್ಲಿ ನಿರತರಲ್ಲ*
*ಪರಮಾರ್ಥದಲ್ಲಿ ಪರಿಣಾಮಿಗಳಲ್ಲ*
*ಇದು ಕಾರಣ ಕೂಡಲಚನ್ನಸಂಗಮದೇವಾ*
*ತುರುಬಾಗಲಿ, ಬೋಳಾಗಲಿ, ಜಡೆಯಾಗಲಿ*
*ಅರಿವುಳ್ಳೆಡೆ ಜಂಗಮ.*

ಕೇಶವನ್ನು ಬಿಟ್ಟು ಬೆಲೆಯುಳ್ಳ ಕಾಷಾಯಾಂಬರವನ್ನು ತೊಟ್ಟು ವಿಭೂತಿ, ರುದ್ರಾಕ್ಷಿಗಳನ್ನು ಧರಿಸಿ, ತಲೆಗೆ ಕಿರೀಟವನ್ನು ಸಿಕ್ಕಿಸಿಕೊಂಡೊಡೆ ನಾಟಕದಲ್ಲಿಯ ನಟನೆಯಲ್ಲದೆ

ಮತ್ತೇನು ? ಕಾಯಕದಲ್ಲಿ ನಿರತರಲ್ಲ, ಜ್ಞಾನದಲ್ಲಿ ಬಲ್ಲಿದರಲ್ಲ ತತ್ವಜ್ಞಾನದಲ್ಲಿ ವಿಶ್ವಾಸ ವಿಟ್ಟವರಲ್ಲ, ಕೂಡಲಚನ್ನಸಂಗಮದೇವಾ ಇವರು ತುರುಬನ್ನು ಕಟ್ಟಲಿ, ಜಡೆಯನ್ನು ಬಿಡಲಿ, ತಲೆಯನ್ನು ಬೋಳಿಸಲಿ, ಅಭ್ಯಂತರವಿಲ್ಲ. ಆದರೆ ಸುಜ್ಞಾನಿಗಳಾಗಿ ಕಾಯಕದಲ್ಲಿ ತೊಡಗಿದಾಗ ಮಾತ್ರ ಜಂಗಮರು ಮತ್ತು ಜ್ಞಾನಿಗಳು, ಇಲ್ಲವಾದರೆ ಕಪಟನಾಟಕದವರು.

ಹೊರ ವೇಷದಲ್ಲಿ ವಿಭೂತಿ, ರುದ್ರಾಕ್ಷಿಯನಳವಡಿಸಿಕೊಂಡು
ವೇದಶಾಸ್ತ್ರ ಪುರಾಣ ಪುರಾತರ ವಚನದ ಬಹುಪಾಠಕರು
ಅನ್ನದಾನ ಹೊನ್ನದಾನವನೀವನ ಬಾಗಿಲಮುಂದೆ
ಮಣ್ಣಪುತ್ಥಳಿಯಂತಹವರು ನಿತ್ಯನೇಮದ ಹಿರಿಯರು
ಎಲ್ಲಾ ಅರಿವುಳ್ಳವರು ಲಕ್ಷ್ಮೀ ಮನೆಯ ದ್ವಾರಪಾಲಕರಾದರು
ಅರಿವಿಂಗೆ ಇದು ವಿಧಿಯೇ ?
ಕೂಡಲಚನ್ನಸಂಗಯ್ಯ ನೀ ಮಾಡಿದ ಮರಹು

ನಿತ್ಯನೇಮದ ಹಿರಿಯರೆನಿಸಿಕೊಂಡವರು, ಸಡಗರ ಸಂಭ್ರಮದ ವೇಷ ಧರಿಸಿಕೊಂಡು ವೇದ, ಶಾಸ್ತ್ರ, ಪುರಾಣ ಮತ್ತು ಪುರಾತನರ ವಚನಗಳನ್ನು ಕಂಠಪಾಠ ಮಾಡಿದವರು; ಮಹಾ ಜ್ಞಾನಿಗಳೆನಿಸಿಕೊಂಡವರು; ಅನ್ನದಾನ, ಹೊನ್ನದಾನ, ದುಡ್ಡುದಾನ ಮಾಡುವ ಶ್ರೀಮಂತರ ಬಾಗಿಲಲ್ಲಿಯ ಮಣ್ಣಿನ ಗೊಂಬೆಯಂತೆ ನಿಂತು ಅವರ ಮನೆಯ ದ್ವಾರಪಾಲಕರ ಹಾಗೆ ಕಂಡುಬರುತ್ತಾರೆ. ಜ್ಞಾನಿಗಳಿಗೆ ಹೀಗಿರುವುದು ಅನಿವಾರ್ಯವೆ ? ಹೇಳಿ, ಕೂಡಲಚನ್ನಸಂಗಯ್ಯನೆಂಬ ಮನಸ್ಸಿನ ಮರವೆಯಲ್ಲದೆ ಮತ್ತೇನು ?

ಜಗದಕರ್ತನ ಕೈಯಲ್ಲಿ ಹಿಡಿದುಕೊಂಡು ಬೇಡುವ
ತುಡುಗುಣಿಗಳ ನಾನೇನೆಂಬೆನಯ್ಯಾ ?
ಬೇಡಲಾಗದು ಭಕ್ತನ, ಕಾಡಲಾಗದು ಭಕ್ತನ
ಬೇಡಿಕಾಡಿ ಒಡಲ ಹೊರೆದೆನಾದಡೆ
ಬೇಟೆಯ ನಾಯಿ ತಂದ ಮೊಲನ ಅಟ್ಟು ಬಾಣಸವಮಾಡಿ
ನಾಯಿ ತಿಂದು ಮಿಕ್ಕುದ ತಾವು ತಿಂದಂತೆ ಕಾಣಾ
ಕೂಡಲ ಚನ್ನಸಂಗಮದೇವಾ

ಬೇಡಿದ್ದನ್ನು ಕೊಡುವ ಜಗದ ಕರ್ತನೆಂದು ಕೈಯಲ್ಲಿ ದೇವರನ್ನು ಹಿಡಿದುಕೊಂಡು ಮನೆ ಮನೆ ಭಿಕ್ಷೆಬೇಡುತ್ತ ಅಲೆಯುವ ಕಳ್ಳರನ್ನು ನಾನೇನೆಂದು ಕರೆಯಲಿ, ಇವರಿಗೆ ನಾನೇನನು ಹೇಳಲಿ ! ನನಗೆ ಅದು ಬೇಕು, ಇದು ಬೇಕು ಎಂದು ಕಾಡಬಾರದು, ಭಕ್ತರನ್ನು ಬೇಡಬಾರದು. ಅವನು ಜಂಗಮನಿರಲಿ, ಭಕ್ತನಿರಲಿ ಮತ್ತೆ ಬೇರೆ ಯಾವನೇ ಇರಲಿ ತಾನು ಕಾಯಕವನ್ನು ಮಾಡದೆ ಯಾರನ್ನೂ ಕಾಡಿ ಬೇಡಿ ತನ್ನ ಉದರಪೋಷಣೆ ಮಾಡಿಕೊಳ್ಳಬಾರದು. ಒಂದು ವೇಳೆ ಹಾಗೆ ಮಾಡಿದ್ದಾದರೆ ನಾಯಿ ಬೇಟೆಯಾಡಿ ತಂದ ಮೊಲವನ್ನು ಅಡಿಗೆ ಮಾಡಿದ ಮೇಲೆ ಮೊದಲು ನಾಯಿ ತಿಂದು ಉಳಿದ ಎಂಜಲನ್ನು ತಾವು ತಿಂದಂತೆ ಎಂದು ಚನ್ನಬಸವಣ್ಣನವರು ಹಂಗಿಸುತ್ತಾರೆ.

ವೇದ ವೇದಾಂತವನೋದಿ ಜ್ಞಾನ ಸೂರೆಯ ಮಾಡುವ ಜಂಗಮ
ಕ್ರಿಯಾಹೀನನಾದಡೆ ಆಗಮ ಸಮರಸ ಆತನಲ್ಲ
ಅದೇನು ಕಾರಣವೆಂದರೆ ನುಡಿದಂತೆ ನಡೆಯನು
ಅಲ್ಲಿ ಕೂಡಲಚನ್ನಸಂಗಮದೇವ ನಿಲ್ಲಲಾರನು
ಸಿದ್ಧರಾಮಯ್ಯ

ವೇದಗಳನ್ನು ವೇದಾಂತಗಳನ್ನು ಓದಿಕೊಂಡು ಜ್ಞಾನವನ್ನು ನಾಡಿನ ತುಂಬ ಬಿತ್ತರಿಸುವ ಜಂಗಮನಿಗೆ ಕಾಯಕ ಒಂದಿಲ್ಲದಿದ್ದರೆ ಜ್ಞಾನದಲ್ಲಿ ಸಮರಸವನ್ನು ಹೊಂದಿದವನಲ್ಲವೆಂದೇ ಅರ್ಥ. ಏಕೆಂದರೆ, ಮಾತಾಡಿದಂತೆ ಮಾಡಲಾರದವನಾಗಿದ್ದಾನೆ. ಈತನ ಪ್ರವಚನವನ್ನು ಆಲಿಸಿದ ಮುಗ್ಧರು ಈತನನ್ನು ನಡೆದಾಡುವ ದೇವರೆಂದು ಕರೆಯುತ್ತಾರೆ. ತನ್ನ ಪಾಂಡಿತ್ಯ ಪೂರ್ಣ ಪ್ರವಚನ ಮುಗಿದಕೂಡಲೇ ಈ ದೇವರು ತುತ್ತು ಅನ್ನಕ್ಕಾಗಿ ಶ್ರೀಮಂತರ ಬಾಗಿಲಲ್ಲಿ ನಿಲ್ಲಬೇಕಾಗುತ್ತದೆ. ಇಲ್ಲವೆ ಅವರು ಅನ್ನ ತಂದುಕೊಡುವ ತನಕ ಅನ್ನದ ಜಪ ಮಾಡುತ್ತ ಕೈ ಚಾಚಿಕೊಂಡು ಕೂಡಬೇಕಾಗುತ್ತದೆ. ಕಾರಣ ಅನ್ನವೇ ದೇವರು ಅಲ್ಲವೆ ? ಬೇಡಿ ತಿನ್ನಲಿಕ್ಕೆ ಈ ದೇವರಿಗೆ ನಾಚಿಕೆಯಾಗುವುದೇ ಇಲ್ಲ. ಈ ದೇವರಿಗಿಂತ ಬೀದಿಯ ಬದಿಗೆ ಹಳೆಯ ಚಪ್ಪಲಿಗಳನ್ನು ರಿಪೇರಿ ಮಾಡುವ ಸಮಗಾರ ಬಾಲಕ ಬಹಳ ಶ್ರೇಷ್ಠನೆನಿಸಿ ಕೊಳ್ಳುತ್ತಾನೆ. ಅವನು ತಾನು ಸಂಪಾದಿಸಿದ ದುಡ್ಡನ್ನು ತಾನು ತಿನ್ನುವ ಹಕ್ಕುದಾರನಾಗಿದ್ದಾನೆ. ಅವನಿಗೆ ಯಾವ ದೇವರದಾಗಲಿ, ಯಾವ ಶ್ರೀಮಂತನದಾಗಲಿ, ಯಾವ ಹಂಗೂ ಇಲ್ಲ. ಅವನು ಸ್ವಕಾಯಕ ಮಾಡಿ ತನ್ನ ಉಪಜೀವನ ಸಾಗಿಸುತ್ತಾನೆ. ಸದಾ ಸುಜ್ಞಾನ ಮತ್ತು ತನ್ನ ಕಾಯಕದಲ್ಲಿ ನಿರತನಾಗಿರುತ್ತಾನೆ. ಅವನು ಕೂಡಲ ಚನ್ನಸಂಗಯ್ಯನ ಪ್ರತಿರೂಪ. ಅಲ್ಲಲ್ಲ ಕೂಡಲ ಚನ್ನಸಂಗಯ್ಯ ಅವನೇ ಆಗಿದ್ದಾನೆ ಎಂದು ಚನ್ನಬಸವಣ್ಣನವರು ಹೇಳುತ್ತಾರೆ.

ಧರೆಯ ಮೇಲೆ ಸುಳಿದಾಡುವ ಲಾಂಛನಧಾರಿಗಳೆಲ್ಲ
ಹದಿನೆಂಟು ಜಾತಿಯ ಮನೆಯಲುಂಡು ಕೆಟ್ಟರಯ್ಯ
ಗಿರಿಯಲಿಪ್ಪ ಜಟಾಧಾರಿಗಳೆಲ್ಲ ಫಲಭಕ್ಷವನುಂಡು ಕೆಟ್ಟರಯ್ಯ
ತರಗೆಲೆಯ ಮೆಲಿದು ತಪವಿಪ್ಪವರೆಲ್ಲಾ ವಾಯುಭಕ್ಷವನುಂಡು ಕೆಟ್ಟರಯ್ಯ
ಅರಿಯದೆ ಇಂದ್ರಿಯಗಳ ಕಟ್ಟಿ ಕುರುಹಿನ ರಾಜ್ಯಕ್ಕೆ ಬಂದು
ನರಕಕ್ಕಿಳಿದವರ ಹಿರಿಯರೆಂದೆನಗೆ ತೋರದಿರಾ
ಸರ್ವಭ್ರಾಂತಳಿದುಳಿದ ಮಹಾಂತರೆನಗೆ ತೋರಾ
ಕೂಡಲಚನ್ನಸಂಗಮದೇವಾ

ಈ ನಾಡಿನಲ್ಲಿ ವೇಷ ಭೂಷಣಗಳಿಂದ ಮಹಾಸ್ವಾಮಿಗಳೆಂದೂ ನಡೆದಾಡುವ ದೇವರೆಂದೂ ತೋರಿಸಿಕೊಳ್ಳುತ್ತ, ಮನೆ ಮನೆಯಲ್ಲಿ ಹೊಕ್ಕುಂಡು ಕೆಟ್ಟುಹೋದರು. ಗಿರಿಶಿಖರಗಳ ತುದಿಯಲ್ಲಿ ಕುಳಿತು ಜಟಾಧಾರಿಗಳಾಗಿ ಹಣ್ಣುಹಂಪಲುಗಳನ್ನು ತಿನ್ನುತ್ತ ತಮ್ಮನ್ನು ತಾವೇ ಹಾಳುಮಾಡಿಕೊಂಡರು. ತಾವು ತಪಸ್ವಿಗಳೆಂದು ಹೇಳಿಕೊಳ್ಳುತ್ತ, ತರಗೆಲೆಗಳನ್ನು ತಿನ್ನುತ್ತ ವಾಯುವನ್ನು ಸೇವಿಸುತ್ತ ಮಣ್ಣುಗೂಡಿಹೋದರು. ಏನನ್ನೂ ತಿಳಿಯದೆ ಇಂದ್ರಿಯಗಳನ್ನು ನಿಗ್ರಹಿಸಿ ಗುಡಿ-ಗುಂಡಾರಗಳನ್ನು ಕಟ್ಟಿ ಕುರುಹ ಸ್ಥಾಪಿಸಿ ಹಿರಿಯರೆಂದು ಹೇಳಿಕೊಳ್ಳುತ್ತ ನರಕಕ್ಕಿಳಿದವರನ್ನು ಅಂದರೆ ಹೀನಕಾರ್ಯದಲ್ಲಿ ತೊಡಗಿದವರನ್ನು ನಾನು ನೋಡಲು ಇಚ್ಛಿಸುವುದೇ ಇಲ್ಲ. ಮೇಲಿನ ಯಾವತ್ತೂ ಭ್ರಾಂತಿಗಳಿಂದ ಮುಕ್ತವಾದ ಮಹಾಪುರುಷರನ್ನು ತೋರಿಸಿ ಬದುಕಿಸಯ್ಯ ಕೂಡಲಚನ್ನಸಂಗಮದೇವಾ.

ಷಡುದರ್ಶನ ಜ್ಞಾನವಲ್ಲದಿಲ್ಲೆಂಬ
ಜ್ಞಾನಿಗಳೆಲ್ಲರೂ ಚಾಂಡಾಲಿಗಳು
ಬ್ರಹ್ಮಚಾರಿಗಳೆಲ್ಲರೂ ಉದ್ದೇಶಿಗಳು
ಶಿವಯೋಗಿಗಳೆಲ್ಲರೂ ಅಂಧಕರು
ಇಷ್ಟಲಿಂಗ ಸಂಬಂಧಿಗಳೆಲ್ಲರೂ ಅವಿಚಾರಿಗಳು
ಅವರಿವರ ಪರಿಯಲ್ಲ ಗುಹೇಶ್ವರಾ
ನಿಮ್ಮ ಶರಣನ ಪರಿಬೇರೆ

ಹರಿಭದ್ರ ಸಂಗ್ರಹಿಸಿದ ಮೋಕ್ಷದ ಆರು ಮಾರ್ಗಗಳನ್ನು ತಿಳಿಸುವ ಆರು ಪುಸ್ತಕಗಳ ಷಡ್‌ದರ್ಶನವೆಂಬ ಪುಸ್ತಕಕ್ಕಿಂತ ಹೆಚ್ಚಿನ ಜ್ಞಾನ ಇನ್ನೆಲ್ಲಿಯೂ ಇಲ್ಲವೆನ್ನುವ ಜ್ಞಾನಿಗಳು ಚಾಂಡಾಲರು, ಬ್ರಹ್ಮಚಾರಿಗಳೆನ್ನುವವರು ತಮ್ಮ ಸ್ವಾರ್ಥದ ಗುರಿಯಿಟ್ಟು ಕೆಲಸ ಮಾಡುವವರು. ಶಿವನನ್ನು ಆರಾಧಿಸುವ ಯೋಗಿಗಳೆಲ್ಲ ಕುರುಡರೇ ಆಗಿದ್ದಾರೆ. ಅಂಗೈಯಲ್ಲಿ ಲಿಂಗ ಇಟ್ಟುಕೊಂಡು ಪೂಜಿಸುವ ಪೂಜೆಯಲ್ಲಿ ನಂಬಿಕೆ ಇದ್ದವರು ಅವಿಚಾರಿಗಳು. ಗುಹೇಶ್ವರಾ, ನಿಮ್ಮ ಶರಣರು ಅವರಿವರ ಹಾಗೆ ಅಲ್ಲ. ಸುಜ್ಞಾನ ಸತ್‌ಕ್ರಿಯೆಗಳಲ್ಲಿ ತೊಡಗಿ ಲೋಕ ಕಲ್ಯಾಣದ ಹಾದಿಯಲ್ಲಿದ್ದವರು.

ಕಂಥೆ ತೊಟ್ಟವ ಗುರುವಲ್ಲ
ಕಾವಿ ಹೊತ್ತವ ಜಂಗಮನಲ್ಲ
ಶೀಲ ಕಟ್ಟಿದವ ಶಿವಭಕ್ತನಲ್ಲ
ನೀರು ತೀರ್ಥವಲ್ಲ
ಕೂಳು ಪ್ರಸಾದವಲ್ಲ
ಹೌದೆಂದವನ ಬಾಯ ಮೇಲೆ
ಅರ್ಧ ಮಣದ ಪಾದರಕ್ಷೆಯ ತೆಗೆದುಕೊಂಡು
ಮಾಸಿಕಡಿಮೆಯಿಲ್ಲದೆ ತೂಗಿ ತೂಗಿ ಟೊಕ ಟೊಕನೆ
ಹೊಡೆಯಂದಾತ ನಮ್ಮ ಅಂಬಿಗರ ಚೌಡಯ್ಯ

ಕೌದಿಯನ್ನು ತೊಟ್ಟು ತಿರುಗುವವ ಗುರುವಾಗುವುದಿಲ್ಲ. ಕಾವಿಯನ್ನು ಧರಿಸಿದವನು ಎಂದೂ ಜಂಗಮನಾಗಲಾರ. ಶೀಲ ಕಟ್ಟಿದವ ಶೀಲವಂತನೆಂದು ಹೇಳಿಕೊಳ್ಳುವವ ಎಂದೂ ಶಿವಭಕ್ತನಾಗುವುದಿಲ್ಲ. ನೀರು ತೀರ್ಥವೂ ಅಲ್ಲ, ಕೂಳು ಪ್ರಸಾದವೂ ಅಲ್ಲ ಎಂದು ಅಂಬಿಗರ ಚೌಡಯ್ಯನವರು ಹೇಳುತ್ತಾರೆ. ಒಂದು ವೇಳೆ ಯಾರಾದರೂ ನಾನು ಗುರು, ನಾನು ಜಂಗಮ, ನಾನು ಶಿವಭಕ್ತ, ನೀರು ತೀರ್ಥ, ಕೂಳು ಪ್ರಸಾದ ಎಂದು ಹೇಳಿಕೊಂಡರೆ ಆತನನ್ನು ಸರಿಯಾಗಿ ಹಿಡಿದುಕೊಂಡು, ಅರ್ಧ ಮಣದ ಪಾದರಕ್ಷೆಯನ್ನು ತೆಗೆದುಕೊಂಡು ಚೆನ್ನಾಗಿ ಹೊಡೆ ಎಂದು ಎಚ್ಚರಿಸುತ್ತಾನೆ. ಸ್ವಾರ್ಥಿಗಳು ಇಂಥ ವಚನಗಳನ್ನು ಮರೆಮಾಚಿ ತಮ್ಮ ಕೊಳಕು ಸಾಧನೆಯಲ್ಲಿಯೇ ಮೆರೆಯುತ್ತಾರೆ.

*ಜಂಗಮನ ಕರೆತಂದು ಮನೆಯಲ್ಲಿ ಕುಳ್ಳಿರಿಸಿ*
*ಲಿಂಗದ ಮೇಲಣ ಜಪವನೆಣಿಸುವ ಭಕ್ತನ ಬಾಯಲ್ಲಿ*
*ಕೆರವನಿಕ್ಕಲಿ ಅವನ ಲಿಂಗಾರ್ಚನೆಯ ಬಾಯಲ್ಲಿ*
*ಹುಡಿಯ ಹೊಯ್ಯಲಿ*
*ಜಂಗಮದ ತೃಪ್ತಿಯನರಿಯದೆ*
*ಲಿಂಗವಂತನೆಂದಾದನೋ ಮರುಳೇ*
*ಆತ ಪಿಸುಣ ಹೊಲೆಯನೆಂದಾತ*
*ಅಂಬಿಗರ ಚೌಡಯ್ಯ*

ಒಬ್ಬ ಕಾವಿಧಾರಿಯನ್ನು ಕರೆತಂದು ಅವನನ್ನು ಜಂಗಮನೆಂದು ಹೇಳಿ, ಮನೆಯಲ್ಲಿ ಕುಳ್ಳಿರಿಸಿ, ಲಿಂಗವನ್ನು ಕೈಯಲ್ಲಿ ಹಿಡಿದು ಜಪವನ್ನು ಮಾಡುವ ಭಕ್ತನ ಬಾಯಲ್ಲಿ ಕೆರವನ್ನಿಟ್ಟು ಹೊಡೆಯಬೇಕು. ಅವನು ಲಿಂಗಪೂಜೆ ಮತ್ತು ಜಪಮಾಡುವಾಗ ಬಾಯಲ್ಲಿ ಮಣ್ಣು ಹೊಯ್ಯಬೇಕು. ಜಂಗಮನೆಂದರೆ ಯಾರು ? ಜಂಗಮನನ್ನು ಹೇಗೆ ತೃಪ್ತಿಪಡಿಸಬೇಕು ಎನ್ನುವುದನ್ನು ಅರಿಯದೆ ಇವನು ಲಿಂಗವಂತನೆಂದಾದನೋ ಮರುಳೇ ಎಂದು ಅಂಬಿಗರ ಚೌಡಯ್ಯನವರು ಪ್ರಶ್ನಿಸುತ್ತಾರೆ. ಇಂಥವರು ಹೊಲಸು ಚಾಡಿಕೋರ ಮನುಷ್ಯರೆಂದು ಹೇಳುತ್ತಾನೆ.




ಹೀಗೆ ವಚನಕಾರರು ಯಾವುದೇ ದೇವರು, ಯಾವುದೇ ಧರ್ಮ, ಯಾವುದೇ ಮತ ಪಂಥವನ್ನಾಗಲಿ ಅಭಿವೃದ್ಧಿಪಡಿಸಲು ಚಿಂತಿಸಲಿಲ್ಲ, ಸಮಗ್ರ ಮಾನವಕುಲದ ಏಳಿಗೆಗಾಗಿ, ವಿಶ್ವಬಾಂಧವ್ಯದ ಯಶಸ್ಸಿಗಾಗಿ, ದೀನ ದಲಿತರ ಉದ್ಧಾರಕ್ಕಾಗಿ, ಮಹಿಳೆಯರ ಶ್ರೇಯಸ್ಸಿಗಾಗಿ, ಜಗದ ಜೀವಾಳವಾದ ಕಾಯಕದ ತತ್ವಕ್ಕಾಗಿ, ಸಾಮಾಜಿಕ ಸಮಾನತೆಗಾಗಿ ತಮ್ಮ ಪ್ರಾಣವನ್ನೇ ಪಣಕ್ಕಿಟ್ಟು ಹೋರಾಟ ಮಾಡಿದವರು. ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯ ಎಂದು ಹೇಳಿ ಇಲ್ಲಿ ಯಾವನು ಕಾಯಕ ಮಾಡುವನೋ ಈ ಜಗತ್ತು ಅವನದೇ ಕಾರ್ಯಕ್ಷೇತ್ರ. ದುಡಿಯದೆ ಮೋಸ, ವಂಚನೆ, ಅಪ್ರಾಮಾಣಿಕತೆಯಿಂದ ಹೊಟ್ಟೆ ಹೊರೆಯುವ ನಯವಂಚಕ ಮನುಷ್ಯನಿಗೆ ಇಲ್ಲಿ ಅವಕಾಶವಿಲ್ಲವೆಂದು ಹೇಳಿದರು. ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರೆಂದು ಹೇಳಿ ಇಲ್ಲಿ ಕಾಯಕದಲ್ಲಿ ಯಾರು ಗಟ್ಟಿಯಾಗಿ ನಿಂತು ಅದರಲ್ಲಿ ತನ್ಮಯರಾಗಿ ಕೆಲಸಮಾಡುತ್ತಾರೋ ಅವರೇ ಅಲ್ಲಿ ಅಂದರೆ ಜ್ಞಾನ ವಿಜ್ಞಾನದೊಳಗೆ ತೊಳಗಿ ಬೆಳಗುತ್ತಾರೆ ಎಂದು ಘಂಟಾಘೋಷವಾಗಿ ಹೇಳಿದ್ದಾರೆ.

ಹೀಗಿದ್ದೂ ಬಸವ ಸಂದೇಶವನ್ನು ಪ್ರತಿಯೊಬ್ಬರ ಮನೆಗೂ ಪ್ರತಿಯೊಬ್ಬರ ಮನಸ್ಸಿಗೂ ತಲುಪಿಸಲು ಬಸವ ಸಮಿತಿಯವರು ಹಿಂಜರಿಯುತ್ತಾರೆ. ಬಸವ ಸಂದೇಶದ ಹಿನ್ನಡೆಗೆ ಅವರ ಹಿಂಜರಿಕೆಯೇ ಕಾರಣ. ಇವರು ಸ್ವಾರ್ಥ ಪರರಾಗಿದ್ದಾರೆ. ಮತ್ತು ಮಠಾಧೀಶರ ಪರವಾಗಿದ್ದಾರೆ ಎಂದು ಯಾವ ಸಂಕೋಚವೂ ಇಲ್ಲದೆ ಹೇಳಬಹುದು. ವಚನಕಾರರ ತತ್ವವನ್ನು, ಸಂದೇಶವನ್ನು ಹಾಳುಮಾಡಲಿಕ್ಕೆ ಏನು ಮಾಡಬೇಕೋ ಅದನ್ನೆಲ್ಲ ಮಾಡಿದ್ದಾರೆ. ವೈದಿಕ ಪರಂಪರೆಯನ್ನು ವಿಜೃಂಭಿಸಲಿಕ್ಕೆ ಮಾಡಬೇಕಾದ್ದನ್ನೆಲ್ಲ ಮಾಡಿ, ಜಾತೀಯತೆ ಮತ್ತು ಅಸ್ಪೃಶ್ಯತೆಯನ್ನು ಪ್ರೋತ್ಸಾಹಿಸಿಕೊಂಡು ಬಂದಿದ್ದಾರೆ. ಇದಕ್ಕೆ ಸಾಕ್ಷಿ ದಲಿತರು ಹಿಂದುಳಿದವರು ಮತ್ತು ಶ್ರಮಜೀವಿಗಳು ಅನುಭವಿಸುವ ನೋವುಗಳನ್ನು ಕಂಡಾಗ ಗೊತ್ತಾಗುತ್ತದೆ.

ಕ್ರಿ.ಶ. ೧೪೨೦ರಿಂದ ಕ್ರಿ.ಶ. ೧೫೨೦ರವರೆಗಿನ ಅವಧಿಯಲ್ಲಿ ಬೇರೆ ಬೇರೆ ಮಠಾಧೀಶರಿಂದ ಐದು ಶೂನ್ಯಸಂಪಾದನೆಯ ಗ್ರಂಥಗಳು ರಚನೆಯಾದವು. ವಚನಗಳನ್ನು ಷಟ್‌ಸ್ಥಲಗಳ ಕಟ್ಟುನಿಟ್ಟಿಗನುಗುಣವಾಗಿ ಪರಿಗಣಿಸಬಾರದೆಂದು ವಚನಕಾರರೇ ಪ್ರತಿಪಾದಿಸಿದ್ದಾರೆ. ಅವುಗಳನ್ನು ಸ್ಥಲ ಕಟ್ಟುಗಳಿಗೆ ಒಳಪಡಿಸಿ ಭಕ್ತ, ಮಹೇಶ, ಪ್ರಾಣಲಿಂಗಿ, ಪ್ರಸಾದಿ, ಶರಣ ಐಕ್ಯವೆಂದು ವಿಂಗಡಿಸಿ ಗುರು, ಲಿಂಗ, ಜಂಗಮ, ದಾಸೋಹವೆಂದು ಶೋಷಣೆಗೆ ಅನುವಾಗುವಂತೆ ಅರ್ಥೈಸಿ ಅನೇಕ ಟೀಕೆ ಟಿಪ್ಪಣಿಗಳನ್ನು ಬರೆದು ಪ್ರಚಾರ ಮಾಡಿದರು. ಇದನ್ನೇ ದೇವವಾಣಿಯೆಂದು ಜನ ನಂಬಿದರು. ಏನೂ ಅರಿಯದ ಮುಗ್ಧಜನತೆ ತಿಳಿಯುವುದಾದರೂ ಹೇಗೆ ? ತಿಳಿಸುವವರಾದರೂ ಯಾರು ?

**ಕೆ. ಡಿ. ಮುತ್ತೂರ**
ಮಲ್ಲಮ್ಮನಗರ, ಕಲ್ಯಾಣಕುಂಜ, ಮುಧೋಳ - ೫೮೭ ೩೧೩

# ವೈರುಧ್ಯ ಬದುಕು

ಎಂಥ ವೈರುಧ್ಯವೀ ಬದುಕು
ಏನು ಅನಿವಾರ್ಯವೀ ತಳುಕು

ಕತ್ತಲೊಡನೆ ಒಡನಾಟ
ಬೆಳಕಿಗಾಗಿ ಹುಡುಕಾಟ
ಬೆಂಕಿ ಮೇಲೆ ನಡೆದಾಟ
ತಂಪು ಕೇಳೋ ಪರಿಪಾಠ

ವಿಷದೊಡನೆ ಅತಿ ಸೆಳೆತ
ಸಿಹಿ ಸವಿಯೋ ಒಡಲಿಂಗಿತ
ಕೆಂಭೂತದ ಜೊತೆ ಕೂತು
ಕುಹೂ ಕೇಳೋ ಹುಚ್ಚಾಟ

ಇಂಗಿ ಹೋದ ಕಂಗಳಲಿ
ಕನಸು ಕಾಣೋ ಹುಂಬ ತವಕ
ಸತ್ತುಹೋದ ಮನಗಳಲಿ
ಪ್ರೇಮ ಹುಡುಕುವ ಬಯಕೆ

ಮಿಥ್ಯದ ಮನೆಯೊಳಗೆ
ಸತ್ಯಕಾಗಿ ಶೋಧನೆ
ಕ್ಷಣಗಣನೆಯ ಒಡಲೊಳಗೆ
ನವಬದುಕ ಅನ್ವೇಷಣೆ



**ಎನ್. ಕರಿಯಪ್ಪ**
ಕನ್ನಡ ಭಾಷಾ ಶಿಕ್ಷಕರು, ಸರ್ಕಾರಿ ಪ್ರೌಢಶಾಲೆ, ಶಾಂತಿಗ್ರಾಮ, ಶಾಂತಿಗ್ರಾಮ ಅಂಚೆ
ಕೊಪ್ಪ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ



# ಕಾಯಕ ನಿಷ್ಠೆಯ ಕೃತಿ

ವಿಲಿಯಂ

ದೇಶದ ಪ್ರಮುಖ ರಂಗಕರ್ಮಿ, ನಾಟಕಕಾರರಲ್ಲಿ ಒಬ್ಬರಾದ ಪ್ರಸನ್ನ ಕಳೆದ ಸುಮಾರು ಎರಡು ದಶಕಗಳಿಂದ ಗ್ರಾಮೀಣ ಪ್ರದೇಶದಲ್ಲಿ ಕೈಮಗ್ಗ ಚಳುವಳಿ, ಗ್ರಾಮಾಭಿವೃದ್ಧಿ ಹಾಗೂ ಸಹಕಾರ ಕ್ಷೇತ್ರಗಳಲ್ಲಿ ಮಾಡುತ್ತಿರುವ ಕೆಲಸ ಅನನ್ಯ ಮಾತ್ರವಲ್ಲ, ಅಧ್ಯಯನಕ್ಕೆ ಒಳಪಡಿಸಬೇಕಾದ ಸಂಗತಿಯೂ ಹೌದು. ನಾಟಕಗಳ ಪ್ರಸನ್ನ ತನ್ನ ರಂಗಕರ್ಮವನ್ನು ಹೆಚ್ಚಾಗಿ ದೆಹಲಿ ಹಾಗೂ ಬೆಂಗಳೂರಿನಲ್ಲಿ ನಡೆಸಿ ಈಗ ಹೆಗ್ಗೋಡಿನ ಆಸುಪಾಸಿನ ಹಿಂದುಳಿದ ಸುಮಾರು ಇನ್ನೂರು ಗ್ರಾಮೀಣ ಬಡ ಮಹಿಳೆಯರಿಗೆ ಕೈಮಗ್ಗದ ತರಬೇತಿ ನೀಡಿ ಆ ಮೂಲಕ ಸ್ತ್ರೀಯರ ಬದುಕಿಗೊಂದು ಬಲವಾದ ನೇಯ್ಗೆಯ ಆಸರೆಕೊಟ್ಟ ದೇಸಿ ಚಳುವಳಿ ಈ ಕೃತಿಗೊಂದು ಬಂಧ ಕೊಟ್ಟಿದೆ. ಜೀವನ ಪದ್ಧತಿಯನ್ನು ಆಧರಿಸಿ ಬಂದಿರುವ ಕನ್ನಡ ಕೃತಿಗಳು ಬಹು ವಿರಳ. ದೇಸಿ ಪದ್ಧತಿಯನ್ನು ಮರೆಗೆ ತಳ್ಳಿ ಆಧುನಿಕ ಜೀವನ ಪದ್ಧತಿಯು ಸಂಭ್ರಮಗೊಳ್ಳುತ್ತಿರುವ ಈ ಸಂದರ್ಭದಲ್ಲಿ ಪ್ರಸನ್ನರ ಈ ಅಧ್ಯಯನ ಬಹು ಮುಖ್ಯ. ಅಲ್ಲದೆ, ಈ ಚಿಂತನೆಯ ಹುಡುಕಾಟಗಳು ಸಹ ಅಷ್ಟೇ ಪ್ರಾಂಜಲ. ಆಧುನಿಕ ಜೀವನ ಪದ್ಧತಿಯ ಅಸ್ಥಿರತೆ, ಧಾವಂತಗಳನ್ನು ಸುಧಾರಿಸಲು ಯಾವುದೇ ಕ್ರಾಂತಿ, ರಾಜಕೀಯ, ಧಾರ್ಮಿಕ ನೀತಿ ನಿಯಮಗಳು ಇಲ್ಲವೇ ಯಾವುದೇ ಕಾನೂನಿನ ಸುಧಾರಣೆಗಳಿಗಿಂತಲೂ ಹೆಚ್ಚಿನ ಸಾಧ್ಯತೆಗಳಿರುವುದು ದೇಸಿ ಜೀವನ ಪದ್ಧತಿಗೆ ಮಾತ್ರವೆನ್ನುವತ್ತ ಇಲ್ಲಿಯ ಚಿಂತನೆಗಳು ಹರಿಯುತ್ತವೆ. ಒಂದು ಕಾಲದಲ್ಲಿ ಎಲ್ಲವನ್ನೂ ಕೆಂಪಾಗಿ, ಸೈದ್ಧಾಂತಿಕವಾಗಿ ನೋಡುತ್ತಿದ್ದ ಪ್ರಸನ್ನ ಈಗ ಈ ಕೆಂಪಿನೊಟ್ಟಿಗೆ ಇತರ ಬಣ್ಣಗಳನ್ನು ಕಾಣುವ ಪ್ರಯತ್ನಗಳಿಂದಾಗಿ ಜಗತ್ತು ಬದಲಾಗಬೇಕಾದರೆ ಜಗತ್ತಿನ ಜೀವನ ಪದ್ಧತಿಯಲ್ಲಿ ಬದಲಾವಣೆ ಆಗಬೇಕೆನ್ನುವ ಅವರ ಧ್ವನಿ ತುಂಬಾ ಅರ್ಥಪೂರ್ಣ. ವಿಕೇಂದ್ರಿತ ಬದುಕಿನಲ್ಲಿ ಗಾಂಧೀಜಿ ರೂಢಿಸಿದ ಕಾರ್ಯನಿಷ್ಠೆ ಜೀವನ ಪದ್ಧತಿ ಬಹು ಪ್ರಸ್ತುತ. ಕೃಷಿ ಮತ್ತು ಚರಕ ಕೇವಲ ವೃತ್ತಿ ಮಾತ್ರವಲ್ಲ, ಅದು ಜೀವನ ಪದ್ಧತಿಯೂ ಹೌದು. ಈ ಜೀವನ ಪದ್ಧತಿಯನ್ನು ರಕ್ತಗತ ಮಾಡಿಕೊಂಡಿರುವ ರೈತ ಮತ್ತೊಂದು ವೃತ್ತಿಗೆ ಒಗ್ಗಿಸಿಕೊಳ್ಳುವ ಹೋರಾಟದ ಒಡಲಿನ ಕೂಗು ಇಲ್ಲಿದೆ. ದೇಸಿ ಜೀವನ ಪದ್ಧತಿಯನ್ನು ಬಲಪಂಥೀಯರು ಸಂಘ ಪರಿವಾರ ಬೋಧಿಸುವ ಸ್ವದೇಶಿ ಚಳುವಳಿಗೆ ಥಳುಕು ಹಾಕುವುದು ಬಹು ಅಪಾಯಕಾರಿಯೆಂದು ಪ್ರಸನ್ನ ಅನ್ನುತ್ತಾರೆ.

ಹೆಂಗಸರಿಗೂ ಹೆಣಿಗೆಗೂ ಇರುವ ಸಂಬಂಧ ತುಂಬಾ ಪುರಾತನ. ಅಲ್ಲದೆ ಜಾನಪದ ಕತೆಗಳಲ್ಲಿ ಹಾಗೂ ಹಾಡುಗಳಲ್ಲಿ ಹೆಂಗಸು ಹೆಣೆಯುವ, ನೇಯ್ಗೆ ಮಾಡುವ ಹತ್ತು ಹಲವು ಪ್ರಸಂಗಗಳನ್ನು ಪ್ರಸ್ತಾಪಿಸುವುದರ ಮೂಲಕ ಮಹಿಳೆಯರು ಪುರುಷರಿಗಿಂತ ನೇಯ್ಗೆಯಲ್ಲಿ ಪರಿಣತರೆಂಬುದನ್ನು ಈ ಕೃತಿ ಚರ್ಚಿಸುತ್ತದೆ. ಮಲೆನಾಡಿನಲ್ಲಿ ಕೈಮಗ್ಗದ ನೇಕಾರಿಕೆ ಸಾಧ್ಯ ಹಾಗೂ ಕೈಮಗ್ಗವನ್ನು ಲಾಭದಾಯಕ ಉದ್ದಿಮೆಯನ್ನಾಗಿ ಮಾಡಲು ಸಾಧ್ಯವೆನ್ನುವುದು ಇಲ್ಲಿಯ 'ಚರಕ', 'ಕವಿವಾವ್ಯ' ಮತ್ತು 'ದೇಸಿ' ಸಂಸ್ಥೆ ಸಾಬೀತು ಮಾಡಿವೆ. ಗ್ರಾಮೀಣ ಕೈಯೊಂದು ಒಂದು ತುಣುಕು ಬಟ್ಟೆ ನೇಯಲಿಕ್ಕಾಗಿ ಅದೆಷ್ಟು ಕೋಟಿ ಬಾರಿ ಮಗ್ಗವನ್ನು ಜಗ್ಗಿಸಿ ಬಟ್ಟೆ ನೇಯ್ದಿದೆ ಎಂಬ ಅರಿವು ಅದನ್ನು ತೊಡುವವರಿಗೆ ಆದಾಗ ಅವರು ಒಂದು ಕ್ಷಣವಾದರೂ ಮನುಷ್ಯರಾಗುತ್ತಾರೆ. ವಿಚಾರವಾದಿ ಪ್ರಸನ್ನ ಕೈಮಗ್ಗ ಸಂಸ್ಕೃತಿಯನ್ನು ವಿಶ್ಲೇಷಿಸುವಾಗ ಸ್ವಲ್ಪ ಭಾವುಕರಾಗಿ ತಲೆಬಾಗುತ್ತಾರೆ. ಇವೆಲ್ಲಾ ಈ ಕೃತಿಕಟ್ಟೋಣದಲ್ಲಿ ಸೇರಿರುವ ಜೀವದ್ರವ್ಯಗಳು.

ಈ ಕೃತಿ 'ಆಶಯ' ಮತ್ತು 'ಆಕಾರ' ಎಂಬ ಎರಡು ಭಾಗಗಳಲ್ಲಿ ಹಾದುಹೋಗಿದೆ. 'ಆಶಯ' ಪೂರ್ತಿ ಕೈಮಗ್ಗ, ಚರಕ, ದೇಸಿ ಕವಿಕಾವ್ಯಗಳಾದರೆ 'ಆಕಾರ'ಗಳೆಲ್ಲವೂ ಸಮಕಾಲೀನ ಬದುಕಿನಲ್ಲಿ ಲಭ್ಯವಿರುವ ಸಾಂಸ್ಕೃತಿಕ ಆಕಾರಗಳು, ತಂತ್ರಜ್ಞಾನ, ಸಂತರುಗಳ ಜೀವನಶೈಲಿ, ಜಾನಪದ ಹಾಗೂ ಬಹು ಪ್ರಮುಖವಾದ ಎರಡು ಚಿತ್ರಗಳ ಮೂಲಕ ಗಾಂಧಿವಾದ ಹಾಗೂ ಮಾರ್ಕ್ಸವಾದದ ನಡುವಿನ ವಿಮರ್ಶೆ ಮತ್ತು ಅಂಬೇಡ್ಕರ್ ಹಾಗೂ ಗಾಂಧೀಜಿಯವರ ಚಿತ್ರಗಳನ್ನಿಟ್ಟುಕೊಂಡು ಅವರಿಬ್ಬರ ಆಶಯ ಹಾಗೂ ಆಕೃತಿಗಳ ತುಲನಾತ್ಮಕ ವಿಮರ್ಶೆ ಮಾಡಲಾಗಿದೆ. 'ಆಕಾರ'ದ ಬರಹಗಳೆಲ್ಲಾ ಬರೇ ಪರಂಪರೆಯೇ ಅಲ್ಲ, ಅದೂ ಕೂಡ ಸಮಕಾಲೀನ ಸಂಸ್ಕೃತಿಯೇ ಹೌದು ಎಂಬ ಮಹತ್ವದ ಸಂಗತಿಯನ್ನು ಈ ಕೃತಿ ಅರ್ಥಪೂರ್ಣವಾಗಿ ಹೊರಚೆಲ್ಲುತ್ತದೆ. 'ಮೂರು ರಾಕ್ಷಸ ಸೃಷ್ಟಿಗಳು' – ಇಲ್ಲಿ ಪ್ಲಾಸ್ಟಿಕ್ ಎಂಬ ರಾಸಾಯನಿಕ ಮೂಲದ ಒಂದು ವಸ್ತು, ಕಲ್ಪಿತ ವಾಸ್ತವ ಎಂಬ ತಂತ್ರಜ್ಞಾನ ಹಾಗೂ ತದ್ರೂಪಿ ಎಂಬ ಅನೈಸರ್ಗಿಕವಾದ ಜೀವಜಂತುವಿನ ಸೃಷ್ಟಿ– ಈ ಸಂಕೀರ್ಣ ಸಂಗತಿಗಳಲ್ಲಿ ಪ್ರಸನ್ನ ಹತ್ತಾರು ಹೊಳವುಗಳನ್ನು ಅರಳಿಸುತ್ತಾರೆ.

ರಾಮಕೃಷ್ಣ ಪರಮಹಂಸರು, ನಾರಾಯಣ ಗುರುಗಳು, ರಮಣ ಮಹರ್ಷಿಗಳು, ಅರವಿಂದೋ ಆದಿಯಾಗಿ ಕಳೆದ ಶತಮಾನದ ಸಂತರುಗಳ ಜೀವನ ಪದ್ಧತಿ ಅತ್ಯಂತ ಸರಳ, ಅಪ್ಪಟ ಭಾರತೀಯ ಅಲ್ಲದೆ ಆಧುನಿಕವಾದದ್ದು ಸಹ. ಇವರಲ್ಲಿನ ಜಾತಿರಹಿತ ಆಧ್ಯಾತ್ಮಿಕತೆ, ಕಾರ್ಯಪರಿಣತತೆ, ಚಟುವಟಿಕೆ, ಪರಿಸರ ಪ್ರೀತಿ, ನಿರಾಡಂಬರ ಬದುಕು – ಇವೆಲ್ಲಾ ಅನನ್ಯ. ಧ್ಯಾನವನ್ನು ದುಡಿಸಿಕೊಂಡ ರೀತಿ ಬಹು ಕುತೂಹಲ. ಇವರಿಗೆ ಧ್ಯಾನ ಏಕಾಗ್ರತೆಯ ಸಾಧನವೂ ಹೌದು, ಕಾಯಕವೂ ಹೌದು. ಇದೇ ಅವರ ಸಂಸ್ಕೃತಿ ಸಹ. ಸಂಸ್ಕೃತಿ ಎಂದರೆ ಕಾವ್ಯನಾಟಕ ಸಂಗೀತ ಚಿತ್ರಕಲೆ ಇತ್ಯಾದಿ, ಇವುಗಳ ಅಭಿವ್ಯಕ್ತಿಗಳ ಸಂಗಡ ಅವರ ಜೀವನ ಪದ್ಧತಿಯೂ ಹೌದು.

'ಯಕ್ಷಗಾನದ ಹಿತ್ತಲ ಚಿತ್ರಗಳು' – ಇದು ಬೇರೊಂದು ಸಂದರ್ಭಕ್ಕಾಗಿ ಬರೆದದ್ದಾದರೂ ಈ ಕೃತಿಯ ರಕ್ತಕ್ಕೆ ಸೇರುವಂತಹ ದ್ರವ್ಯ. ಬಹು ಅಪರೂಪದ ಛಾಯಾಚಿತ್ರಗ್ರಾಹಕ ಕೆ. ಜಿ. ಸೋಮಶೇಖರ ಅವರನ್ನು ಯಕ್ಷಗಾನದ ಹಿತ್ತಲಲ್ಲಿ ಓಡಾಡಿಸಿ ಸೆರೆಹಿಡಿದ ತೆರೆಯ ಹಿಂದಿನ ಅವಸ್ಥಾಂತರ ಬದುಕಿನ ಛಾಯಾಚಿತ್ರಗಳನ್ನು ನೀಡುತ್ತಾರೆ. ತೆರೆಯ ಹಿಂದಿನ ಚಿತ್ರಗಳು ಮರ್ತ್ಯವೂ ಹೌದು ಯಕ್ಷವೂ ಹೌದು. ಈ ಹಿತ್ತಲಿನ ಹುಡುಕಾಟ ಒಂದು ನೆಪವಾದರೂ ಯಕ್ಷಗಾನದ ಇಂದಿನ ಆಕಾರ ಹಾಗೂ ಆಶಯಗಳ ಮೇಲೆ ಬೀರಿರುವ ಬೆಳಕು ಬಹು ವಿಶೇಷ. ಭಾರತೀಯ ರಂಗಭೂಮಿಯ ಹಲವು ಪ್ರಕಾರಗಳಲ್ಲಿ ಸಾಧ್ಯವಾಗದ ಬದಲಾವಣೆಗಳು ಯಕ್ಷಗಾನದಲ್ಲಿ ಸಾಧ್ಯವಾಗಿವೆ. ಮಣಿಪುರದ ರಂಗಪ್ರಕಾರ, ಕೇರಳದ ರಂಗಪ್ರಕಾರ, ಯಕ್ಷಗಾನ ಇಂಥವುಗಳಲ್ಲಿ ಬದಲಾಗಿಯೂ ಬದಲಾಗದೆ ಉಳಿದಿರುವುದರ ಬಗ್ಗೆ ಈ ಕೃತಿ ಸ್ಪಷ್ಟಪಡಿಸುತ್ತದೆ. 'ಎರಡು ಚಿತ್ರಗಳು, ಎರಡು ಆಯ್ಕೆಗಳು' ಈ ಭಾಗದಲ್ಲಿ ಫರ್ಡಿನೆಂಡ್ ಲೆಗರ್‌ನ ಕಾರ್ಮಿಕರು ಎಂಬ ಅರ್ಥಪೂರ್ಣ ಚಿತ್ರ ಹಾಗೂ ವಾರ್ಧಾದ ಗಾಂಧೀ ಆಶ್ರಮ ಚಿತ್ರ – ಈ ಎರಡೂ ಚಿತ್ರಗಳ ವಸ್ತುವಿನ್ಯಾಸ, ಜೀವನದೃಷ್ಟಿ ಹಾಗೂ ಸೌಂದರ್ಯ ಪ್ರಜ್ಞೆ ಈ ಲೇಖಕರನ್ನು ಗಾಢವಾಗಿ ಕಾಡಿವೆ. ಲೆಗರ್‌ನ ಚಿತ್ರಯಂತ್ರ-ರಂಗದ ಪ್ರತೀಕವಾದರೆ ವಾರ್ಧಾ ಆಶ್ರಮ ದೇಸಿ ಜೀವನ ಪದ್ಧತಿ ಪ್ರತೀಕ. ಮೊದಲ ಚಿತ್ರದಲ್ಲಿ ಲೋಹವು ಧಾತುವಾದರೆ ಎರಡನೆಯದರಲ್ಲಿ ಸುಟ್ಟಾವೆ, ಮಣ್ಣಿನ ಹಂಚು, ತಡಿಕೆ ಗೋಡೆ, ಬಿದಿರುಗಳುವಿನ ಬೇಲಿ. ಈ ದಾರ್ಶನಿಕರಿಬ್ಬರೂ ತಮ್ಮ 'ಆಯ್ಕೆ'ಗಳಿಗೆ ಆಕಾರ ಕೊಟ್ಟಿದ್ದಾರೆಯೇ ಹೊರತು ತಮ್ಮ ಪರಿಸ್ಥಿತಿಗಲ್ಲ. ಲೆಗರ್‌ನ ಚಿತ್ರದಲ್ಲಿ ಯಂತ್ರ, ಹಾಗೂ ಮಾನವರ ನಡುವಿನ ಸಂಬಂಧ

(೫೮ನೇ ಪುಟಕ್ಕೆ)



ಪ್ರಕಾಶನ
ಒಂಟಿದನಿ ಪ್ರಕಾಶನ
ಹೆಗ್ಗೋಡು
ಪುಟ : ೧೩೦ ಬೆಲೆ : ರೂ. ೧೦೦

# ಸಂದೇಹದಿಂದ ಸವೆಯಿತ್ತು ಲೋಕವು



ತತ್ವಶಾಸ್ತ್ರವನ್ನು ಕುರಿತು ಮಾತನಾಡುವಾಗ ಪುನರಾವರ್ತನೆ ಅನಿವಾರ್ಯ. ಒಬ್ಬನೇ ವ್ಯಕ್ತಿಯ ಒಂದೇ ಅಭಿಪ್ರಾಯ ಬೇರೆ ಬೇರೆ ರೂಪಧಾರಣೆ ಪಡೆದು ಪುನಃ ಪುನಃ ಅವತರಿಸಬೇಕಾಗಿರುವುದನ್ನು ತಪ್ಪಿಸುವುದಕ್ಕೆ ಯಾರಿಂದಲೂ ಸಾಧ್ಯವಿಲ್ಲ. ಒಬ್ಬ ತತ್ವಜ್ಞಾನಿಯ ಅಂತರಂಗ ಪ್ರಾಚೀನ ಮತ್ತು ಅರ್ವಾಚೀನಗಳ ನೂರಾರು ದಾರ್ಶನಿಕ ಸ್ವರ-ಲಯಗಳ, ತಾಳ-ಮೇಳಗಳ ಸಂಘರ್ಷದ ಕುಲುಮೆಯಾಗಿರುತ್ತದೆ. ತನ್ನ ತಿಳಿವಳಿಕೆಯನ್ನು ಸೀಮಾತೀತಗೊಳಿಸಬೇಕಾದರೆ ಈ ಅಂತರಂಗ ಮೂಸೆಯಲ್ಲಿ ತನ್ನನ್ನು ತಾನೇ ದಹಿಸಿಕೊಂಡ ಹೊರತು ಅನ್ಯಮಾರ್ಗಗಳಿರುವುದಿಲ್ಲ. ವೇದ-ಉಪನಿಷತ್ತುಗಳ ವೈದಿಕ ಋಷಿಗಳಿರಲಿ, ಬುದ್ಧನಿರಲಿ, ಮಹಾವೀರನಿರಲಿ, ಬಸವನಿರಲಿ, ಅಲ್ಲಮನಿರಲಿ ಬೇರೆ ಯಾರೆ ಇರಲಿ ಈ ಅಂತರಂಗ ಶುದ್ಧಿಗೆ ಬೆಲೆ ತೆರದೆ ದೊಡ್ಡದನ್ನು ಪಡೆದವರಾಗಿರುವುದಿಲ್ಲ. ಹಾಗೆ ಪಡೆದ ದೊಡ್ಡದು ಬೇರೆ ಎಲ್ಲಿಂದಲೋ ಬಂದಿರುವುದೂ ಇಲ್ಲ. ತನ್ನನ್ನು ತಾನೆ ಸಂಶೋಧಿಸಿಕೊಂಡ ಅನುಭವ ಅದು. ಈ ಕುರಿತಂತೆ ಅಲ್ಲಮ ಪ್ರಭುವಿನ ಒಂದು ವಚನವಿದೆ ಕೇಳಿ –

*ಇಲ್ಲವೆಯ ಮೇಲೊಂದು ಉಂಟೆಂಬ ಪರಿಭಾವ,*
*ಅಲ್ಲಿ ಇಲ್ಲಿ ಎನ್ನದೆ ತಾನೆ ನಿಂದಿತ್ತು ನೋಡಾ !*
*ತನ್ನಲ್ಲಿಯ ಪ್ರಕೃತಿಯ ತಾನೆ ಹಿಂಗಿಸಲು;*
*ಅಲ್ಲಿಯೇ ಜ್ಞಾನ ಉದಯಿಸಿತ್ತು !*
*ಎಲ್ಲಾ ಎಡೆಯಲ್ಲಿ ನಿಂದ ನಿಜಪದವ*
*ಗುಹೇಶ್ವರಾ ನಿಮ್ಮ ಶರಣ ಬಲ್ಲ ॥೩೭೮॥*

ಇಲ್ಲಿರುವ ದರ್ಶನ ಅಗಾಧವಾದುದೇನೂ ಅಲ್ಲ; ಅಸಾಮಾನ್ಯವಾದುದೂ ಅಲ್ಲ. ಈಗಾಗಲೇ ನಮ್ಮ ಗಮನದಲ್ಲಿರುವ ಬೇರೆ ಕೆಲವು ವಚನಗಳಿಗೆ ಹೋಲಿಸಿದಾಗ ಕೂಡ ಇದು ತೀರ ಸರಳ ಮಾದರಿಯ ರಚನೆಯಾಗಿದೆ. ವಚನ ರಚನೆ ರಂಜನೆಯ ವಿಷಯವಲ್ಲ ಎಂಬುದನ್ನು ಈ ಮೂಲಕ ಅಲ್ಲಮ ತೋರಿಸುತ್ತಿರುವಂತೆ ಕೂಡ ಈ ವಚನ ದೇವಸ್ಥಾನವಿದೆ. ಇದು ಯಾವುದೋ ಒಂದು ಮತಶಾಸ್ತ್ರಕ್ಕೆ ಸಂಬಂಧಿಸಿದಂತೆ ಕೂಡ ಇಲ್ಲ. ಆವರೆಗೆ ಬೆಳೆದು ಬಂದಿರುವ ಭಾರತೀಯ ತಾತ್ವಿಕ ಚಿಂತನೆಯನ್ನೆಲ್ಲ ಘನೀಕರಿಸಿದರೆ ಬಹುಶಃ ಅದು ಇದಕ್ಕಿಂತ ಬೇರೆಯಾಗಿ ಇರುವುದಿಲ್ಲ. ಈ ಅಂಶ ವಚನದ ಕಡೆಯ ಸಾಲು 'ಗುಹೇಶ್ವರಾ ನಿಮ್ಮ ಶರಣ ಬಲ್ಲ' ಎಂಬುದನ್ನು ಕೈಬಿಟ್ಟು ಓದಿಕೊಂಡರೆ ಸಾಕು ಯಾರಿಗಾದರೂ ಗೊತ್ತಾಗುವಂತಿದೆ. ಅಥವಾ ಮತೀಯ ವಾಸನೆಯ ಆ ಸಾಲಿಗೆ ಬದಲು ತಮಗೆ ಬೇಕಾದ ಅದೇ ಛಂದದ ಸಾಲನ್ನು ಸೇರಿಸಿಕೊಂಡು ಓದಿಕೊಳ್ಳಲೂಬಹುದು.

ಈ ವಚನದ ವಿಶೇಷತೆಯಿರುವುದು ಹೇಳುತ್ತಿರುವ ರೀತಿಯಲ್ಲಿ ಮತ್ತು ಬಳಸುತ್ತಿರುವ ಭಾಷೆಯಲ್ಲಿ. ಮೊದಲಿಗೆ ಭಾಷೆಯನ್ನೇ ಗಮನಿಸಿದರೆ, ಸಂಸ್ಕೃತ ಪದಗಳನ್ನು ಹುಡುಕಿ ನೋಡಬೇಕಾಗಿದೆ. ಹಾಗೆ ಬಳಕೆಯಾಗಿರುವ ಒಂದೆರಡು ಸಂಸ್ಕೃತ ಪದಗಳೂ ಅಲ್ಲಿಯೇ ಬಳಕೆಯಾಗಿರುವ ಸರಳಗನ್ನಡ ಪದಗಳಿಗಿಂತಲೂ ಹೆಚ್ಚು ಸರಳ ಸಾಮಾನ್ಯವಾಗಿವೆ.

*ಇಲ್ಲವೆಯ ಮೇಲೊಂದು ಉಂಟೆಂಬ ಪರಿಭಾವ,*
*ಅಲ್ಲಿ ಇಲ್ಲಿ ಎನ್ನದೆ ತಾನೆ ನಿಂದಿತ್ತು ನೋಡಾ !*

ಭಾಷೆ ನಮಗೆ ಆತ್ಮೀಯವಾಗುತ್ತಿದ್ದಂತೆಯೇ ಅದು ಹೇಳುತ್ತಿರುವ ವಿಚಾರ ಕೂಡ ನಮ್ಮ ಒಳಗಿನದೆ ಎಂಬ ಅನುಭವ ನಮ್ಮದಾಗುತ್ತದೆ. ವೈದಿಕ ಋಷಿಗಳಿಗೆ ಇದು ಅಲ್ಲಮನ ಸಂದೇಶದಂತಿದೆ. ಸಂಸ್ಕೃತ ದೇವಭಾಷೆಯಾದದ್ದೆ ಅದರ ದೊಡ್ಡ ಅಪರಾಧವಾಗಿದೆ. ಅದು ಅಭಿವ್ಯಕ್ತಿಸುತ್ತಿದ್ದ ಅನುಭವ 'ಪರಾ'ದಂತೆ ಕಾಣಿಸುತ್ತಿತ್ತೇ ಹೊರತು ಜೀವತತ್ವದಂತೆ ತಿಳಿವಳಿಕೆಯಾಗುತ್ತಿರಲಿಲ್ಲ. ಹಾಗಾಗಿ ಅದು ಜೀವನಾನುಭವವೂ ಆಗದಂತೆ ಗುಡಿಗೋಪುರಗಳಲ್ಲಿ ಉಳಿದುಹೋದ ದೈವವಾಣಿಯಾಗಿಬಿಟ್ಟಿತು. ನುಡಿನಡೆಯಾಗದ್ದರ ಕುರಿತೇ ಅಲ್ಲಮ ನೂರಾರು ವಚನ ಕಟ್ಟಿದ್ದಾನೆ. ನಿರೀಶ್ವರಿ ಅಥವಾ ಅನಾತ್ಮವಾದಿಗಳಾದ ಬುದ್ಧ, ಮಹಾವೀರರ ಮಾತೂ ಇಲ್ಲಿಗೇ ಸಲ್ಲುವಂತಿರುವುದನ್ನೂ ನಾವು ಗಮನಿಸಬೇಕಾಗಿದೆ. ಜೀವನಕ್ಕೆ ಬೇಕಾದುದನ್ನು 'ಜೀವ'ನ ಭಾಷೆಯಲ್ಲಿ ಅಥವಾ ನುಡಿಯಲ್ಲಿಯೇ ನೀಡಬೇಕಾಗಿರುವುದು ಇದರ ತಾತ್ಪರ್ಯ. ತಿಳಿವಳಿಕೆ ನಡವಳಿಕೆಯಾಗುವುದು ಯಾವಾಗಲೂ ಕಷ್ಟ.

*ತನ್ನಲ್ಲಿಯ ಪ್ರಕೃತಿಯ ತಾನೆ ಹಿಂಗಿಸಲು,*
*ಅಲ್ಲಿಯೆ ಜ್ಞಾನ ಉದಯಿಸಿತ್ತು.*

ಸಾಕಷ್ಟು ಮಾರ್ಮಿಕವಾಗಿರುವ ಸಾಲುಗಳು. ಪುರುಷ ಪ್ರಕೃತಿಯ ಘರ್ಷಣೆ ಜ್ಞಾನದ ಹುಟ್ಟಿನ ಮೂಲ. ಈ ಘರ್ಷಣೆಯಲ್ಲಿ ಸಾವಿನ ಮಾತೂ ಒಂದಿದೆ. ತನ್ನನ್ನು ಹಿಂಸಿಸುವ ಪ್ರಕೃತಿಯನ್ನು ಹಿಂಗಿಸಬೇಕಾಗಿದೆ. ಹಿಂಸೆ ಕೂಡ ಸೃಷ್ಟಿಯ ದಾರಿಯಲ್ಲಿ ಒಂದು ಅನಿವಾರ್ಯ ಘಟನೆ. ಸಾವಿಗೂ ಇದೇ ಮಾತನ್ನು ಹೇಳುವುದು ರೂಢಿಯಲ್ಲಿದ್ದರೂ ಅಲ್ಲಮ ಅದನ್ನು ಪರಿಣಾಮ ಕ್ರಿಯೆಯಾಗಿ ಕಂಡುಕೊಂಡವನಂತೆ ಹಿಂಗಿಸಲು ಪ್ರಯತ್ನಿಸುತ್ತಾನೆ. ಹಿಂಗಿಸುವುದು ಖಂಡಿತ ಸಾವಲ್ಲ; ಅದುಮಿಕೊಳ್ಳುವುದು. ಎಷ್ಟೋ ವಿಚಾರಗಳನ್ನು, ಭಾವಗಳನ್ನು ಅದುಮಿಕೊಳ್ಳದೆ ಹೋದರೆ ಆತ್ಮೋದ್ಧಾರವೂ ಮುಂದುಮುಂದಕ್ಕೆ ಹೋಗುತ್ತದೆ. ಆತ್ಮ ಸುಖಿ-ಪ್ರಭುವಿನ ಪರಿಭಾಷೆಯಲ್ಲಿಯೇ ಹೇಳುವುದಾದರೆ ತನುಗುಣಾದಿಗಳ, ಮನಗುಣಾದಿಗಳ, ಭಾವಗುಣಾದಿಗಳ ಬಿಡುಗಡೆಯಲ್ಲಿ ಇರುತ್ತದೆ. ಬಿಡುಗಡೆ ಎಂದರೆ ಅನಾವಶ್ಯಕವಾದುದನ್ನು ಹತೋಟಿಸುವುದು, ಹಾಗಾಗಿ ಜ್ಞಾನೋದಯವೆಂದರೆ ತನ್ನಲ್ಲಿಯ ಪ್ರಕೃತಿ ತತ್ವವನ್ನು ಮೀರುವುದು ಎಂದರ್ಥ. ಅಂದರೆ, ಪ್ರಕೃತಿ ಯಾವ ಮೂಲದಿಂದ ತನ್ನ ಹುಟ್ಟನ್ನು ಕಂಡುಕೊಂಡಿರುತ್ತದೋ ಅದನ್ನು ಕಂಡು ಹಿಡಿಯುವುದು ಅಥವಾ 'ಅರಿ'ಯುವುದು.

*ಮಾಯಾಮಲಿನ ಮನದಿಂದಗಲದೆ,*
*ಕಾಯದ ದಂದುಗ ಕಳೆಯಿಂದಗಲದೆ,*
*ಅರಿವು ಬರಿದೆ ಬಪ್ಪುದೆ ? ನಿಜವು ಬರಿದೆ ಸಾಧ್ಯವಪ್ಪುದೆ ?*
*ಮರುಳೆ ಗುಹೇಶ್ವರಲಿಂಗವನರಿಯ ಬಲ್ಲಡೆ,*
*ನಿನ್ನ ನೀ ತಿಳಿದು ನೋಡು ॥೩೭೩॥*
*ಮತ್ತು*
*ನಿಮ್ಮಲ್ಲಿ ನೀವು ತಿಳಿದು ನೋಡಿರೆ, ಅನ್ಯವಿಲ್ಲ ಕಾಣಿರಣ್ಣಾ !*
*ಅರಿವು ನಿಮ್ಮಲ್ಲಿಯೇ ತದ್ಗತವಾಗಿಯದೆ.*

*ಸಂದೇಹದಿಂದ ಸವೆಯಿತ್ತು ಲೋಕವು.*

**ಈ ಮೇಲಿನ ವಚನದಲ್ಲಿ ಎರಡು ಬಹುಮುಖ್ಯ ವಿಚಾರಗಳ ನಡುವೆ ಈ ಹೇಳಿಕೆಯನ್ನು ಪ್ರಭು ಬಿತ್ತಿದ್ದಾನೆ. ಎಂಟು ನೂರಕ್ಕೂ ಹೆಚ್ಚು ವರ್ಷಗಳ ಹಿಂದಿನ ಈ ಮಾತು ಆ ಹಿಂದಿನ ಎಷ್ಟೋ ವರ್ಷಗಳ ಮಾನವೇತಿಹಾಸದ ಸವೆತವನ್ನು ದಾಖಲಿಸುತ್ತದೆ. ಮಾತ್ರವಲ್ಲ, ಅಂದಿನಿಂದ ಇಂದಿನವರೆಗೆ ನಡೆಯುತ್ತಿರುವ ಎಲ್ಲ ವಿಪ್ಲವಗಳಿಗೂ ಈ ಸಂದೇಹವೇ ಕಾರಣವಾಗಿದೆ. ಇದು ಮಾನವಲೋಕದ ಮಹಾದುರಂತ.**

**ಎನ್. ಬೋರಲಿಂಗಯ್ಯ**

*ಅನ್ಯಭಾವವ ನೆನೆಯದೆ ತನ್ನೊಳಗೆ ತಾನೆಚ್ಚರ ಬಲ್ಲಡೆ*
*ತನ್ನಲ್ಲಿಯೇ ತನ್ಮಯವು ಗುಹೇಶ್ವರಲಿಂಗವು. ॥೩೭೬॥*

ಈ ಸರಣಿಗೆ ಸೇರಬಹುದಾದ ಅನೇಕ ವಚನಗಳು ಅಲ್ಲಮನಲ್ಲಿ ಇನ್ನೂ ಇವೆ. ಹೇಳಿಕೆಗಳೇನೋ ತುಂಬ ಆದರ್ಶಯುತವಾಗಿ ಕೇಳಿಸುತ್ತವೆ. ಆದರೆ, ಅಲ್ಲಮ ಪದೇ ಪದೇ ಹೇರುತ್ತಿರುವ ಒತ್ತಡವನ್ನು ನೋಡಿದರೆ ಇದು ಬಿಟ್ಟು 'ಅನ್ಯವಿಲ್ಲ ಕಾಣಿರಣ್ಣಾ' ಎಂಬಂತೆ ಆತ್ಯಂತಿಕವಾಗಿ ಇರುವುದನ್ನು ಗಮನಿಸಬೇಕು. ಅಲ್ಲಮ ಹೇಳುತ್ತಿರುವ ವಿಚಾರ ಅಥವಾ ಅರಿವು ಬೇರೆಲ್ಲೋ ಇದ್ದಿದ್ದರೆ ನಾವು ಹೆಚ್ಚು ತಲೆಕೆಡಿಸಿಕೊಳ್ಳಬೇಕಾಗಿರಲಿಲ್ಲ. 'ಅರಿವು ನಿಮ್ಮಲ್ಲಿಯೇ ತದ್ಗತವಾಗಿಯದೆ' ಎಂಬುದೇ ಇಲ್ಲಿಯ ಮಹತ್ವದ ಸಂಗತಿ. 'ಮರುಳೆ ಗುಹೇಶ್ವರ ಲಿಂಗವನರಿಯ ಬಲ್ಲಡೆ ನಿನ್ನ ನೀ ತಿಳಿದುನೋಡು' ಎಂದು ಎಷ್ಟು ಸಾಧ್ಯವೋ ಅಷ್ಟೆಲ್ಲ ಬಗೆಯಲ್ಲಿ ಗೋಗರೆಯುತ್ತಾನೆ, ಅಲ್ಲಮ. ಅಲ್ಲಮಪ್ರಭುವಿನ ಸಾಮಾಜಿಕ ಕಾಳಜಿಗಳನ್ನೂ ಈ ಮೂಲಕವೇ ಭೇದಿಸಬೇಕಾಗುತ್ತದೆ.

ಈ ಮೇಲಿನ ವಚನಗಳ ತಾತ್ವಿಕ ರಚನೆಯಲ್ಲಿ ಪುರುಷ ಪ್ರಕೃತಿಯನ್ನು ಕುರಿತಂತೆ ಒಂದು ಕುತೂಹಲದ ಸಂಗತಿಯೂ ಇದೆ. ಹನ್ನೆರಡನೆಯ ಶತಮಾನದ ಒಟ್ಟು ವಚನ ವಿಸ್ತಾರವೆಲ್ಲ ಬರಿಯ ಶರಣನನ್ನು ಕುರಿತಂತೆ ಇರುವುದು ಲಿಂಗ ಸಮನ್ವಯದ ದೃಷ್ಟಿಯಿಂದ ಪ್ರಶ್ನಾತೀತವೆಂಬಂತೇನೂ ಕಾಣಿಸುತ್ತಿಲ್ಲ. ಅಲ್ಲಮನಂಥ ಅಲ್ಲಮನಲ್ಲಿಯೂ ಇದು ಪರಿಶೀಲನೆಗೆ ಒಳಗಾಗುವಂಥದೇ ಆಗಿದೆ. ಒಟ್ಟು ಕನ್ನಡ ಸಾಹಿತ್ಯದಲ್ಲಿ ವಚನ ಚಳವಳಿಯಲ್ಲಿ ಭಾಗಿಯಾಗಿರುವ ಹೆಂಗಳೆಯರ ಸಂಖ್ಯೆ ಗಮನಾರ್ಹವಾಗಿದ್ದಾಗ ಕೂಡ ಈ ಚರ್ಚೆ ಮುಖ್ಯವಾಗುತ್ತದೆ.

*ತನ್ನಲ್ಲಿಯ ಪ್ರಕೃತಿಯ ತಾನೆ ಹಿಂಗಿಸಲು*
*ಅಲ್ಲಿಯೆ ಜ್ಞಾನ ಉದಯಿಸಿತ್ತು*
*ಮಾಯಾಮಲಿನ ಮನದಿಂದಗಲದೆ*

...........

*ಅರಿವು ಬರಿದೆ ಬಪ್ಪುದೆ ?*

ಎಂಬಂಥ ಈ ಸಾಲುಗಳನ್ನೇ ಈ ದೃಷ್ಟಿಯಿಂದ ನೋಡಬಹುದಾಗಿದೆ. ಮೊದಲನೆಯದು, ಪುರುಷ-ಪ್ರಕೃತಿಗೆ ಸಂಬಂಧಿಸಿದ ಮಾತಾಗಿದ್ದರೆ ಎರಡನೆಯದು ಮಾಯೆಯನ್ನು ಮಲಿನವೆಂದು ಹೀಗಳೆಯುವ ಸಂಗತಿಯಾಗಿದೆ. ವಚನಕಾರರಲ್ಲಿ 'ಹೆಣ್ಣಿಗೆ ಗಂಡಾಗಿ ಕಾಡಿತ್ತು ಮಾಯೆ, ಗಂಡಿಗೆ ಹೆಣ್ಣಾಗಿ ಕಾಡಿತ್ತು ಮಾಯೆ', ಗಡ್ಡಮೀಸೆ ಬಂದರೆ ಗಂಡೆಂಬರು, ಮೊಲೆ ಮೂಡಿಬಂದರೆ ಹೆಣ್ಣೆಂಬರು, ಒಳಗೆ ಸುಳಿವ ಆತ್ಮ ಗಂಡೂ ಅಲ್ಲ ಹೆಣ್ಣೂ ಅಲ್ಲ' ಎಂಬಂಥ ಮಾತುಗಳೇನೋ ಇವೆ. ಆದರೆ ಈ ಎಲ್ಲವೂ ಮೋಕ್ಷಗಮನದ ತಾತ್ವಿಕ ನೆಲೆಯವಲ್ಲ. ಪ್ರಾಸಂಗಿಕ ನೆಲೆಯವು ಮಾತ್ರ.

*ತನ್ನಲ್ಲಿಯ ಪುರುಷನ ತಾನೆ ಹಿಂಗಿಸಲು*
*ಅಲ್ಲಿಯೇ ಜ್ಞಾನ ಉದಯಿಸಿತ್ತು*

– ಎಂಬಂತೆ ಯಾವ ಮಹಿಳೆಯೂ ಈವರೆಗೆ ಬರೆದಿರುವಂತೆ ನನ್ನ ಗಮನಕ್ಕೆ ಬಂದಿಲ್ಲ. ಒಂದು ವೇಳೆ ಉಚಾಯಿಸಿ ಬರೆದಿರಬಹುದಾದರೂ ಅದು ಈವರೆಗೆ ಭೂಮಿಯ ಮೇಲೆ ನಡೆದಿರುವ ಆತ್ಮದ ಕುರಿತ ಚರ್ಚೆಯ ಓತಪ್ರೋತತೆಯನ್ನು ಸಮಗ್ರವಾಗಿ ಎದುರಿಸಿ ನಿಂತಂತೆ ತೋರುತ್ತಿಲ್ಲ. ವಚನಕಾರರ ನೆಲೆಯಿಂದ ಮಾತಾಡುವುದಾದರೆ ಅಲ್ಲಿಯೂ –

*ಅಂಗದಲ್ಲಿ ಮಾಡುವ ಸುಖ,*
*ಲಿಂಗಕ್ಕದು ಭೂಷಣವಾಯ್ತು ॥೨೦೪॥*

ಎಂಬಂತೆ ಲಿಂಗಪಾರಮ್ಯವನ್ನು ವರ್ಣಿಸುತ್ತದೆ. ಶೈವ ತಾಂತ್ರಿಕತೆಯಲ್ಲಿ ವೀರ್ಯಸ್ಫೋಟಕ್ಕಿರುವ ಸಂಭ್ರಮ ಅಂಗಸ್ರಾವಕ್ಕಿಲ್ಲ. ವೀರ್ಯಸ್ಫೋಟವಿಲ್ಲದೆ ಅಂಗಸ್ರಾವ ಫಲದಾಯಕವಲ್ಲ ಎನ್ನುವಂತೆಯೇ ಅಂಗಸ್ರಾವವಿಲ್ಲದ ವೀರ್ಯಸ್ಫೋಟವೂ ವ್ಯರ್ಥ ಆರ್ಭಟವಾಗುತ್ತದೆ ಎಂದೂ ಹೇಳಬಹುದಾಗಿದೆ. ಆದ್ದರಿಂದ ಪುರುಷ ಶಾಶ್ವತ, ಪ್ರಕೃತಿ ನಶ್ವರ ತಿಳಿವಳಿಕೆಯಿಂದ ವಚನಕಾರರೂ ಹೊರಗೆ ಬರಲಾಗಿಲ್ಲ. ಹಾಗಾಗಿ ಶರಣರ ಕಾಲದ ಮಹಿಳಾ ಸ್ವಾತಂತ್ರ್ಯ ಮತ್ತು ಸಮಾನತೆಗಳು ಬರಿಯ ಉದ್ಗಾರಗಳಾಗಿ ಕೇಳಿಸುತ್ತವೆ. ಇಲ್ಲಿರುವುದು ಮುಖ್ಯವಾಗಿ ಸ್ವಾತಂತ್ರ್ಯ ಸಮಾನತೆಗಳಂಥ ಸಾಮಾಜಿಕ ನೆಲೆಯ ಮೌಲ್ಯ ವಿವೇಚನೆಗೆ ಸೀಮಿತವಾದ ಸಂಗತಿಯಲ್ಲ. ಅದರಾಚೆಯ ಆಧ್ಯಾತ್ಮಿಕ ನೆಲೆಯಲ್ಲಿ ಸ್ತ್ರೀಯಾತ್ಮದ ಮೋಕ್ಷಗಮನದ ಪ್ರಶ್ನೆಯನ್ನು ಯಾವ ವಚನಕಾರ್ತಿಯರೂ ಎದುರಿಸಿ ನಿಂತಿಲ್ಲ. ಹೊನ್ನು ಮಣ್ಣುಗಳೆಂಬ ಜಡವಸ್ತುಗಳ ಜತೆಯಲ್ಲಿ 'ಹೆಣ್ಣು' ಎಂಬ ಜೀವಾತ್ಮವನ್ನು ನಿರ್ದಯವಾಗಿ ಕೂಡಿಸಿಕೊಂಡು ಕಟ್ಟಿರುವ ವಚನಗಳ ಸಂಖ್ಯೆ ಬೆರಳೆಣಿಕೆಯನ್ನೂ ಮೀರಿ ನಿಲ್ಲುತ್ತವೆ. ಅಲ್ಲಮನ ಪ್ರಸಿದ್ಧ ವಚನ ಕೇಳಿ –

*ಹೊನ್ನು ಮಾಯೆಯೆಂಬರು ಹೊನ್ನು ಮಾಯೆಯಲ್ಲ.*
*ಹೆಣ್ಣು ಮಾಯೆಯೆಂಬರು ಹೆಣ್ಣು ಮಾಯೆಯಲ್ಲ.*
*ಮಣ್ಣು ಮಾಯೆಯೆಂಬರು ಮಣ್ಣು ಮಾಯೆಯಲ್ಲ.*
*ಮನದ ಮುಂದಣ ಆಸೆಯೆ ಮಾಯೆ ಕಾಣಾ*
*ಗುಹೇಶ್ವರಾ ॥೭೨॥*

ಇದು ಬೌದ್ಧ ತಿಳಿವಳಿಕೆಯನ್ನು ಮುಂದುವರಿಸುತ್ತಿದೆಯಾದರೂ ಹೆಣ್ಣನ್ನು ಆತ್ಮವಿಕಾಸದ ಹಾದಿಯಲ್ಲಿ ತೊಡರಾಗುತ್ತಿರುವುದರ ಸಂಕೀರ್ಣತೆಯಿಂದ ಬಿಡುಗಡೆ ಮಾಡಿದಂತೇನೂ ಆಗಿಲ್ಲ. ವಚನದಲ್ಲಿರುವ ಲಯಾನ್ವಿತತೆಗೆ ನಾವು ಬೆರಗಾಗುತ್ತಿದ್ದೇವೆಯೇ ಹೊರತು ತತ್ವತೀವ್ರತೆಗಲ್ಲ. 'ಆಸೆಯೆ ದುಃಖಕ್ಕೆ ಮೂಲ' ಎಂಬುದು 'ದಯೆಯೇ ಧರ್ಮದ ಮೂಲ' ಎಂಬಂತೆ ಒಂದು ಸಾಮಾನ್ಯ ಹೇಳಿಕೆ ಮಾತ್ರ.

*ಶಿವಶಕ್ತಿ ಸಂಪುಟವೆಂಬುದೆಂತು ಹೇಳಿರಣ್ಣಾ*
*ಶಿವನೆ ಚೈತನ್ಯಾತ್ಮಕನು, ಶಕ್ತಿಯೆ ಚಿತ್ತು*
*ಇಂತು- ಚೈತನ್ಯಾತ್ಮಕನೆ ಚಿತ್‌ಸ್ವರೂಪನೆಂದರಿಯ ಬಲ್ಲಡೆ*
*ಆತನೆ ಶರಣ ಗುಹೇಶ್ವರಾ ॥೫೮೯॥*

ಅಲ್ಲಮಪ್ರಭು ಈ ವಚನದ ಮೂಲಕ ಪುರುಷ ಪಾರಮ್ಯವನ್ನು ಸ್ಪಷ್ಟವಾಗಿಯೇ ಹೇಳುತ್ತಿದ್ದಾನೆ. ಚೈತನ್ಯ ಮತ್ತು ಶಕ್ತಿಗಳ ಸಂಗಮದಲ್ಲಿಯೇ ಬದುಕು ನಡೆಯುವುದು ಎಂದು ತಿಳಿದಾಗ ಕೂಡ ವಚನ ಪ್ರಸ್ತಾಪಿಸುವ ಲಿಂಗ ತಾರತಮ್ಯವನ್ನು ಅಳಿಸುವುದಕ್ಕಾಗುವುದಿಲ್ಲ. ಶಕ್ತಿ ಶಿವನಲ್ಲಿ ಲೀನವಾಗಿಯೆ ಮುಕ್ತಳಾಗಬೇಕಾಗಿದೆ. ಶಿವಶಕ್ತಿ ಎಂಬುದು ವೈದಿಕರ ಪುರುಷ-ಪ್ರಕೃತಿಗೆ ಸಮಾನಾರ್ಥಕವಾಗಿಯೇ ಇದೆ. ಹಾಗಿಲ್ಲದಿದ್ದರೆ ತಪೋನುಷ್ಠಾನಗಳ ಹಾದಿಯಲ್ಲಿ ಮಾಯೆಯ ಉಪಟಳದ ಬಗ್ಗೆ ಇಷ್ಟೊಂದು ರಾದ್ಧಾಂತ ನಡೆಯಬೇಕಾಗಿರಲಿಲ್ಲ. ವೀರಶೈವ ಜಗತ್ತಿನಲ್ಲಿ ಮಾಯಾ ವಿಡಂಬನ ಸ್ಥಲವನ್ನು ನೆನಪು ಮಾಡಿಕೊಳ್ಳದ ಒಬ್ಬ ವಚನಕಾರನೂ ನಮಗೆ ಸಿಕ್ಕುವುದಿಲ್ಲ. ಮಾಯೆ ಎನ್ನುವುದು ಪುರುಷ-ಪ್ರಕೃತಿಗಳೆರಡಕ್ಕೂ ಸಮಾನವಾಗದಿದ್ದಾಗ ಸಮಾನತೆಯ ಪ್ರಶ್ನೆ ತೊಡಕಾಗಿಯೇ ಉಳಿಯುತ್ತದೆ. ಶಿವಶಕ್ತಿ 'ಸಂಪುಟ' ಸರಳ ತೀರ್ಮಾನಕ್ಕೆ ನಿಲುಕುವುದಿಲ್ಲ.

ಮಾಯಾದೇವಿಯಕ್ಕನನ್ನು ಮೂದಲಿಸುವಂತಿರುವ ಮತ್ತೊಂದು ವಚನ –

*ಹುಟ್ಟಿದ ಕೂಸಿಂಗೆ ಪಟ್ಟವ ಕಟ್ಟಿ, ವಿಭೂತಿಯ ಪೂಸಿ*
*ಲಿಂಗವ ತೋರಿ 'ಜೋಜೋ' ಎಂದು*
*ಜೋಗುಳವಾಡಿದಳು ಮಾಯಾದೇವಿಯಕ್ಕ !*
*'ಜೋಜೋ' ಎಂಬ ಸರ ಹರಿದು ತೊಟ್ಟಿಲು ಬಿದ್ದಿತ್ತು.*
*ಕೂಸು ಸತ್ತಿತ್ತು ! ಗುಹೇಶ್ವರನುಳಿದನು ॥೩೮೩॥*

ಹೆಣ್ಣಿನ ಮಾರ್ದವ ಕ್ರಿಯೆಯನ್ನು ಪ್ರಭು ಈ ರೀತಿ ಕಿಚಾಯಿಸಿ ಮಾತಾಡಬೇಕಾಗಿರಲಿಲ್ಲ. ಒಂದು ವೇಳೆ ಪಂಚೇಂದ್ರಿಯಗಳ ಉಪದ್ವ್ಯಾಪವೆ ಇದು ಎಂದು ತಿಳಿಯಬಹುದಾದರೂ ಆ ಇಂದ್ರಿಯಗಳು ಇಷ್ಟಕ್ಕೇ ಸೀಮಿತವಾಗಿಯೂ ವರ್ತಿಸುವುದಿಲ್ಲ. ಅವು ಸಾಕಷ್ಟು ಗುಣಾತ್ಮಕ ಕ್ರಿಯೆಗಳಲ್ಲಿಯೂ ಭಾಗವಹಿಸುತ್ತವೆ. ಒಂದು ವೇಳೆ ಇದೂ ಗುಣಾತ್ಮಕ ಅರ್ಥ ಚೈತನ್ಯವಿರುವ ವಚನ ಎಂದು ವರ್ಣಿಸಬಹುದಾದರೂ ಮಾಯಾದೇವಿಯಕ್ಕನ ಜೋಜೋ ಜೋಗುಳದ ಸರ ಮಾತ್ರ ಹರಿದು ತೊಟ್ಟಿಲು ಬಿದ್ದು ಕೂಸು ಸಾಯುವತನಕದ ಸರಣಿಕ್ರಿಯೆಯ ಅಗತ್ಯವೇನು ? ಪ್ರಭುವಿನ ಇನ್ನೊಂದು ವಚನದ –

*ಹಂಸೆಯ ಮೇಲೆ ತುಂಬಿ ಕುಳ್ಳಿರ್ದು ಸ್ವರಗೈಯುವ*
*ಘೋಷವಿದೇನೊ*
*ಆತನಿರ್ದ ಸರ ಹರಿಯದೆ ಇದ್ದಿತ್ತು.*

ಈ ಸಾಲುಗಳ ಭಾವದ ಜತೆ ಹೋಲಿಸಿ ನೋಡಿದರೆ ನಾನು ಹೇಳಲೆಳಸುತ್ತಿರುವ ವಚನಕಾರರ ಲಿಂಗ ತಾರತಮ್ಯದ ಅಂಶ ಹೊಳೆಯದಿರದು. ಶರಣರೂ ವೈದಿಕರಂತೆ ಮೋಕ್ಷಕ್ಕೆ ಸಲ್ಲುವ ಜೀವ ಗಂಡೇ ಸರಿ ಎಂದು ತಿಳಿಯುತ್ತಿರುವುದರಲ್ಲಿ ಸಂಶಯವಿಲ್ಲ. ಯಾಕೆಂದರೆ, ಆಕೆಯ ಜೋಜೋ ಎಂಬ ಸರ ಹರಿದುಬೀಳುತ್ತದೆ, ಆತನಿರ್ದ ಸರ ಹರಿಯದೆ ಇರುತ್ತದೆ. ಈ ಕುರಿತು ಇನ್ನೂ ಚರ್ಚೆ ಆರಂಭವಾಗಬೇಕಿದೆ. ಪ್ರಕೃತಿ-ಪುರುಷನಿಗಿಂತ ಮೇಲುಗೈ ಸಾಧಿಸಬೇಕಿಲ್ಲವಾದರೂ ಆತ್ಮ ಸಮಾನತೆಯನ್ನಾದರೂ ಕಂಡುಕೊಳ್ಳಬೇಕಿದೆ.

ಆದರೆ, ಅಲ್ಲಮ ಬೇರೊಂದು ನೆಲೆಯಿಂದ ಇದಕ್ಕೆ ಉತ್ತರಿಸಲು ಹವಣಿಸುತ್ತಿರುವಂತಿದೆ. ಗಾಬರಿ ಹುಟ್ಟಿಸುವಂತಿರುವ ಒಂದು ಚಿಕ್ಕ ವಚನ ಕೇಳಿ –

*ಪರಿಮಳವಿದ್ದು ಗಮನಾಗಮನವಿಲ್ಲವಿದೇನೊ*
*ಬಯಲ ಸಿಡಿಲು ಹೊಯ್ದಡೆ*
*ಹಿಂದೆ ಹೆಣನ ಸುಡುವರಿಲ್ಲ ಗುಹೇಶ್ವರಾ.*

ವಚನದ ಮೊದಲನೆಯ ಸಾಲು ನಿಸ್ಸಂದೇಹವಾಗಿ ಪ್ರಕೃತಿ ಪ್ರಧಾನ ಲೈಂಗಿಕ ಪ್ರತಿಮೆಯಿಂದ ಕೂಡಿರುವುದು ತುಂಬ ಗಮನಾರ್ಹ. ಇಡೀ ಪ್ರಕೃತಿ ಹೂದುಂಬಿ ಪರಿಮಳಭರಿತವಾಗಿದ್ದರೂ ತುಂಬಿಯ ಗಮಾಗಮನವಿಲ್ಲದಿರುವ ವಿಸ್ಮಯದ ಕಡೆಗೆ ಪ್ರಭು ಗಮನ ಸೆಳೆಯುತ್ತಿದ್ದಾನೆ. ಇದೊಂದು ಘನಾಡಂಬರದ ಸಂದರ್ಭ; ಲೌಕಿಕ ನಿರ್ಲೇಪಿತ ಶೃಂಗಾರಮಯ ವಾತಾವರಣ. ಇದೊಂದು ಅದ್ಭುತರಮ್ಯ ಆತ್ಮಲೋಕ.

ಇನ್ನು ಮುಂದಿನ ಸಾಲುಗಳು ಈ ಸಾಲು ಹೊಮ್ಮಿಸುವ

ಅರ್ಥ ಮಾರ್ದವತೆಗೆ ತೀರ ವ್ಯತಿರಿಕ್ತವಾಗಿರುವಂತೆ ಕಂಡು ಬಂದರೂ ಪ್ರಭುವಿನ ತತ್ವಜಿಜ್ಞಾಸೆಯ ವೈಖರಿ ಇದಕ್ಕೆ ಸ್ವಲ್ಪವೂ ಧಕ್ಕೆಯಾಗದಂತೆ ಆ ರುದ್ರ ಭಯಾನಕತೆಯನ್ನೂ ಈ ಸುಮ ಕೋಮಲ ದೃಶ್ಯಾವರಣಕ್ಕೆ ಪೂರಕವಾಗಿಯೇ ನಿಲ್ಲಿಸುತ್ತದೆ.

*ಬಯಲ ಸಿಡಿಲು ಹೊಯ್ದಡೆ*
*ಹಿಂದೆ ಹೆಣನ ಸುಡುವರಿಲ್ಲ ಗುಹೇಶ್ವರಾ.*

ಕರಾರುವಾಕ್ಕಾಗಿ ಇದೇ ಅರ್ಥ ಹುಟ್ಟಿಸುವ ನಮ್ಮ ಈ ಮೊದಲ ವಚನದ ಕಡೆಯ ಎರಡು ಸಾಲುಗಳು ಈ ಘಳಿಗೆಗೆ ನೆನಪಾಗುತ್ತಿವೆ –

*ಎಲ್ಲಾ ಎಡೆಯಲ್ಲಿ ನಿಂದ ನಿಜಪದವ*
*ಗುಹೇಶ್ವರಾ ನಿಮ್ಮ ಶರಣ ಬಲ್ಲ.*

ಅಲ್ಲಮನ ಅನುಭವಗಳ ಅಭಿವ್ಯಕ್ತಿ ವೈವಿಧ್ಯಕ್ಕೆ ಮಿತಿ-ಮೇರೆಗಳಿದ್ದಂತಿಲ್ಲ. ಇದು ಕಾವ್ಯ ಮಾಧ್ಯಮ ಕೊಡುವ ಇಂಬು ಕೂಡ. ಇಲ್ಲಿಯ ಮೊದಲನೆಯದು ಮೇಲುನೋಟಕ್ಕಾದರೂ ಭಯಂಕರ ಸುಡುಗಾಡನ್ನು ನೆನಪಿಸುವಂತಿದ್ದರೆ, ಎರಡನೆಯದು ಸರ್ವಾಂತರ್ಯಾಮಿ ಭಗವಂತನ ಕೃಪಾಶೀರ್ವಾದದ ಕ್ಷೇಮಂಕರ ವಲಯವನ್ನು ಸೂಚಿಸುವಂತಿದೆ. ಆದರೆ, ಎರಡನೆಯದು ಸವಕಲು ನಾಣ್ಯದಂತೆ ಉದಾಸೀನಕ್ಕೆಡೆಮಾಡಿ ಅನಾಕರ್ಷಕ ವಾಗಿದ್ದರೆ, ಮೊದಲನೆಯದು ಅರ್ಥ ಸಂಕೀರ್ಣ ನಾವೀನ್ಯ ದಿಂದ ಕೂಡಿ ಮನಂಬೊಕ್ಕು ನಿಂತುಬಿಡುವಂತಿದೆ. ಮಾತ್ರವಲ್ಲ, ಅದನ್ನು ಅರ್ಥವಿಸುವುದೂ ಕೊಂಚ ಕಷ್ಟದ ಕೆಲಸ. ಕಷ್ಟ ಇಲ್ಲಿಯ ಮೊದಲ ಸಾಲಿನಿಂದಲೇ ಪ್ರಾರಂಭ ವಾಗುತ್ತದೆ. 'ಬಯಲ ಸಿಡಿಲು ಹೊಯ್ದಡೆ' ಎಂಬ ಸಾಲನ್ನು 'ಬಯಲೆಂಬ ಸಿಡಿಲು ಹೊಯ್ದಡೆ' ಎಂಬುದಾಗಿಯೂ ಓದಿಕೊಳ್ಳಬಹುದು, ಬಯಲನ್ನು ಸಿಡಿಲು ಹೊಯ್ದಡೆ ಎಂಬುದಾಗಿಯೂ ನೋಡಬಹುದು. ಹೇಗೆ ಓದಿದರೆ ಅಲ್ಲಮನ ನಿರೀಕ್ಷೆ ಸಫಲವಾಗುತ್ತದೆ ಮತ್ತು ಓದುಗನಿಗೂ ತೃಪ್ತಿಯಾಗುತ್ತದೆ ಎಂಬುದು ಇಲ್ಲಿಯ ಸಮಸ್ಯೆ.

ಬಯಲು ವಚನಕಾರರಲ್ಲಿ ಶೂನ್ಯವೆಂದಾಗುತ್ತದೆ. ಈ ದೃಷ್ಟಿಯಿಂದ ನೋಡಿದಾಗ ಬಯಲಿಗೆ ಬದಲಾವಣೆ ಇರುವುದಿಲ್ಲ. ಹಾಗಾಗಿ 'ಬಯಲ ಸಿಡಿಲು' ಎಂದು ಸಮಸ್ತ ಪದವಾಗಿ ಗ್ರಹಿಸಿ ಅರ್ಥವಿಸಿದರೇ ಪ್ರಯೋಜನ ಹೆಚ್ಚು. ಬಯಲಿನ ಸಿಡಿಲು ಹೊಡೆದರೆ ಹಿಂದೆ ಹೆಣನ ಸುಡುವರಿಲ್ಲ. ಯಾಕೆಂದರೆ, ಅಲ್ಲಿ ಎಲ್ಲವೂ ಬಯಲಾಗಿ ಬಿಡುತ್ತದೆ. ಶೂನ್ಯದಲ್ಲಿ ಕ್ರಿಯೆಯಿರುವುದಿಲ್ಲ. ಇದೇ ಅರ್ಥವನ್ನು ಕೊಡುತ್ತಿರುವ ಮತ್ತೊಂದು ವಚನ ಇಲ್ಲಿದೆ –

*ಅಂಗದಲ್ಲಿ ಮಾಡುವ ಸುಖ ಲಿಂಗಕ್ಕದು*
*ಭೂಷಣವಾಯ್ತು.*
*ಕಾಡುಗಿಚ್ಚಿನ ಕೈಯಲ್ಲಿ ಕರಡ ಕೊಯಿಸುವಂತೆ*
*ಹಿಂದೆ ಮೆದೆಯಿಲ್ಲ ಮುಂದೆ ಹುಲ್ಲಿಲ್ಲ.*
*ಅಂಗಲಿಂಗವೆಂಬನ್ನಕ್ಕರ ಫಲದಾಯಕ,*
*ಲಿಂಗೈಕ್ಯವದು ಬೇರೆ ಗುಹೇಶ್ವರಾ.*

ಅಲ್ಲಿಯ ಬಯಲಸಿಡಿಲು ಈ ವಚನದಲ್ಲಿ ಕಾಡು ಗಿಚ್ಚಾಗಿದೆ. ಉಳಿದಂತೆ ಎರಡೂ ವಚನಗಳ ಪರಿಣಾಮ ಕ್ರಿಯೆ ಏಕ ಬಗೆಯದೆ ಆಗಿದೆ. 'ಅಂಗಲಿಂಗವೆಂಬನ್ನಕ್ಕರ ಫಲದಾಯಕ' ಎಂದು ಹೇಳುತ್ತಿರುವ ಈ ವಚನದಲ್ಲಿ ಲೌಕಿಕ ನೆಲೆಯ ಫಲಾಪೇಕ್ಷೆಯಿಂದ ಶಾಶ್ವತ ಸುಖಾಂಕ್ಷಿ ಯಾದ ಲಿಂಗೈಕ್ಯದ ಸ್ವರೂಪವನ್ನು ಬೇರ್ಪಡಿಸುತ್ತಿರುವ ಅಂಶವೊಂದು ಇಲ್ಲುಂಟು. ಇದು ಅಂಗ-ಲಿಂಗ ತಾರತಮ್ಯಕ್ಕೆ ಸಂಬಂಧಪಟ್ಟ ವಿಚಾರವಾಗಿದೆ ಎಂಬುದನ್ನು ಈ ಮೊದಲೇ ಸೂಚಿಸಲಾಗಿದೆ.

ಒಟ್ಟಿನಲ್ಲಿ ಶರಣಪಾರಮ್ಯವನ್ನು ಸಾರುವುದು ಅಲ್ಲಮನ ಇರಾದೆ. ಅವನಲ್ಲಿ ಈ ತಿಳಿವಳಿಕೆ ಅತೀತ ನೆಲೆಯದು. ಮನುಷ್ಯ ಚೈತನ್ಯದ ಘನೀಕೃತ ರೂಪವದು. ಅದು ನಿತ್ಯ ನಿರಂತರ ಸಮಾಧಿ ಸ್ಥಿತಿ; ಅರ್ಪಿತಾನರ್ಪಿತ ಗಳನ್ನು ಮೀರಿದ ಸ್ಥಿತಿ, ಧನಾಪೇಕ್ಷೆಯಾದ ಬಸವನ ಜಂಗಮ ಪಾರಮ್ಯ ಕಲ್ಪನೆ ಇಲ್ಲಿಗೆ ಅನ್ವಯವಾಗುವುದಿಲ್ಲ. ಇಲ್ಲಿಂದ ಪಡೆಯಬಹುದೇ ಹೊರತು ಇದಕ್ಕೆ ಏನನ್ನೂ ಕೊಡಲಾಗುವುದಿಲ್ಲ.

*ಸಂದೇಹದಿಂದ ಸವೆಯಿತ್ತು ಲೋಕವು.*

ಈ ಮೇಲಿನ ವಚನದಲ್ಲಿ ಎರಡು ಬಹು ಮುಖ್ಯ ವಿಚಾರಗಳ ನಡುವೆ ಈ ಹೇಳಿಕೆಯನ್ನು ಪ್ರಭು ಬಿತ್ತಿದ್ದಾನೆ. ಎಂಟು ನೂರಕ್ಕೂ ಹೆಚ್ಚು ವರ್ಷಗಳ ಹಿಂದಿನ ಈ ಮಾತು ಆಹಿಂದಿನ ಎಷ್ಟೋ ವರ್ಷಗಳ ಮಾನವೇತಿಹಾಸದ ಸವೆತವನ್ನು ದಾಖಲಿಸುತ್ತದೆ. ಮಾತ್ರವಲ್ಲ ಅಂದಿನಿಂದ ಇಂದಿನ ವರೆಗೆ ನಡೆಯುತ್ತಿರುವ ಎಲ್ಲ ವಿಪ್ಲವಗಳಿಗೂ ಈ ಸಂದೇಹವೇ ಕಾರಣವಾಗಿದೆ. ಇದು ಮಾನವಲೋಕದ ಮಹಾದುರಂತ.

ಈ ವಚನ ಪ್ರಸ್ತಾಪಿಸುತ್ತಿರುವ ಮೊದಲನೆಯ ವಿಚಾರವೆಂದರೆ –

*ಎನ್ನಲ್ಲಿ ನಾನು ದೃಷ್ಟನೆಂದಡೆ*
*ನಿಮ್ಮಲ್ಲಿ ನೀವು ಮೆಚ್ಚುವಿರೆ ?*

ಎಂಬುದು. ಈ ಪ್ರಶ್ನೆಯನ್ನೇಕೆ ಪ್ರಭು ಕೇಳುತ್ತಿದ್ದಾನೆ ? ಒಬ್ಬ ಲೋಕೋತ್ತರ ತತ್ವಜ್ಞಾನಿಗೆ ಈ ಅನುಮಾನವೇಕೆ ? ವ್ರತ ತಪಾದಿ ಅನುಷ್ಠಾನಗಳು ತನ್ನಂಥವರಿಗಲ್ಲ ಎಂಬಂಥ ಹೀಗಳಿಕೆಗೇನಾದರೂ ಪ್ರಭು ಗುರಿಯಾಗಿದ್ದಿರಬಹುದೇ ? ಇವನು ಹೇಗೆ ಎಲ್ಲಿ ಈ ಇಂಥ ಸಿದ್ಧಿಯನ್ನು ಪಡೆದಿರ ಬಹುದು ! ಮುಂತಾಗಿ ಪ್ರಭುವಿನ ಕಿವಿಗೆ ಕೇಳುವಂತೆಯೇ ಮಾತುಕತೆಯಾಗಿದ್ದಿರಬಹುದೆ ? ಊಹೆ ತತ್ತರಿಸುತ್ತದೆ. ಪ್ರಭುವಿನ ಗುರುಪರಂಪರೆ ಎದ್ದು ಕಾಣುವಂಥದೇನೂ ಅಲ್ಲ. ವಚನಗಳು ಈ ಬಗ್ಗೆ ಬಹಳ ಹೇಳುತ್ತಿಲ್ಲ. ಹೇಳುತ್ತಿ ರುವುದು ವಸ್ತುತಃ ಆಗಿರಲೂ ಸಾಧ್ಯವಿಲ್ಲ. 'ಗುರುವಿನಿಂದ ಎಳತಟವಾಗುವ ಮುನ್ನವೆ ಅರ್ಪಿತವ ಮಾಡಬೇಕು' ಎಂಬಂಥ ಒಂದು ಮಾತು ಕೂಡ ಪ್ರಭುವಿನಲ್ಲಿ ಇದೆ. ಅನಿಮಿಷನಿಂದ ಸಿಕ್ಕಿದ ಒಂದು ಚಿಕ್ಕ ಲಿಂಗ ಇವನನ್ನು ಏಕಲವ್ಯ ಪರಂಪರೆಗೆ ಸೇರಿಸಿದ್ದರೂ ಇರಬಹುದು. ಎಲ್ಲವೂ ಕಲ್ಪನೆಗೆ ಹಚ್ಚುವ ರೆಕ್ಕೆಪುಕ್ಕಗಳು. ಆದರೂ 'ಸಂದೇಹದಿಂದ ಸವೆಯಿತ್ತು ಲೋಕವು' ಎಂಬಂಥ ಒಂದು ಲೋಕೋತ್ತರ ಅನುಭವದ್ರವ್ಯ ಅಸಮಾನವೆ ಸರಿ.

(ಟಿಪ್ಪಣಿಯಲ್ಲಿ ಉದಾಹರಿಸಿರುವ ವಚನಗಳನ್ನು 'ಅಲ್ಲಮ ಪ್ರಭುದೇವರ ವಚನ ಸಂಪುಟ', ಸಂಪಾದಕರು ಡಾ॥ ಬಿ. ವ್ಹಿ. ಮಲ್ಲಾಪುರ. ಪ್ರಕಾಶಕರು : ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು. ಪ್ರಥಮ ಮುದ್ರಣ - ೧೯೯೩- ಕೃತಿಯಿಂದ ಉಲ್ಲೇಖಿಸಲಾಗಿದೆ.)

ಎನ್. ಬೋರಲಿಂಗಯ್ಯ
ನಿವೃತ್ತ ಪ್ರಾಧ್ಯಾಪಕರು, ಯುವರಾಜಾ ಕಾಲೇಜು, ಮೈಸೂರು

### ಚಿತ್ತೆ

ಇನ್ನು ಕೆಲವೇ ವರ್ಷಗಳಲ್ಲಿ
ಎಲ್ಲರಿಗೂ ವಿದ್ಯುತ್
ಎಂದು ಸರ್ಕಾರದ ಭರವಸೆ
'ವಿದ್ಯುಚ್ಚಿತ್ತೆ'
ಎಂದಿರಬೇಕಿತ್ತಲ್ಲವೇ ?

ಸಿ.ಪಿ.ಕೆ.
ಮೈಸೂರು

(೫೫ನೇ ಪುಟದಿಂದ) **ಕಾಯಕ ನಿಷ್ಠೆಯ ಕೃತಿ**

ಇತ್ಯಾತ್ಮಕವಾಗಿದೆ. ಇಲ್ಲಿ ಯಂತ್ರಗಳು ದುಡಿಯುವ ಜನರ ಬಿಡುಗಡೆಯ ಅಸ್ತ್ರಗಳು. ಗಾಂಧೀಜಿ ಯಂತ್ರಗಳನ್ನು ಬಿಡುಗಡೆಯ ಅಸ್ತ್ರವನ್ನಾಗಿ ಕಾಣಲಿಲ್ಲ. ಈ ಎರಡೂ ಚಿತ್ರಗಳ ಮೂಲಕ ಜಗತ್ತು ಕಂಡಿರುವ ಸಫಲತೆ, ಸೋಲುಗಳನ್ನು ಪ್ರಸನ್ನ ವಿಸ್ತೃತಗೊಳಿಸಿದ್ದಾರೆ.

ಟಿಪ್ಪಣಿಗಳೆಂದು ಕರೆಸಿಕೊಂಡಿರುವ ನಾಲ್ಕು ಪುಟ್ಟ ಶೀರ್ಷಿಕೆಗಳಲ್ಲಿ ಗಾಂಧಿ, ಅಂಬೇಡ್ಕರ್, ದಲಿತ – ಹೀಗೆ ಕೆಲವು ಗಂಭೀರ ಸ್ಥಿತಿಗತಿಗಳ ಬಗ್ಗೆ ಕೊಟ್ಟಿರುವ ಹೊಳವುಗಳು ಬಹುಮಾನ್ಯ. ಒಂದು ಚಿತ್ರದಲ್ಲಿ ತುಂಬ ಬಟ್ಟೆ ತೊಟ್ಟುಕೊಂಡಿರುವ ಅಂಬೇಡ್ಕರ್ ಮತ್ತೊಂದರಲ್ಲಿ ಬಟ್ಟೆ ಕಳಚಿರುವ ಗಾಂಧೀಜಿ. ಅಂಬೇಡ್ಕರ್ ಆಗಿನ ಆಳುವ ವರ್ಗದ ಪ್ರತಿನಿಧಿಯಂತೆ ಕಂಡರೆ ಗಾಂಧೀಜಿ ಅಪ್ಪಟ ದೇಸೀಯ ಮನುಷ್ಯನಂತೆ ಕಾಣುತ್ತಾರೆ. ದಲಿತ ಕುಟುಂಬದ ಅಂಬೇಡ್ಕರ್ ಹಾಗೂ ಮೇಲ್ಜಾತಿಯ ಗಾಂಧೀಜಿಯ ಉಡುಪುಗಳು ಪ್ರತಿನಿಧಿಸುವ ತಾತ್ವಿಕ ಅನಿವಾರ್ಯತೆಗಳ ಸುತ್ತ ಪ್ರಸನ್ನ ಬಹು ಸೂಕ್ಷ್ಮವಾಗಿ ಸುತ್ತುತ್ತಾರೆ. ಇವರಿಬ್ಬರ ಪರಸ್ಪರ ಉಡುಪನ್ನು ಅದಲು ಬದಲು ಮಾಡಿ ಇವರಿಬ್ಬರು ಕಾಣುವ ಪರಿ ಮತ್ತು ಪ್ರಜ್ಞೆಯನ್ನು ವಿಶ್ಲೇಷಣೆ ಮಾಡಲಾಗಿದೆ. ಪ್ರಕೃತಿ ಸಹಜವಾದ ಆಕಾರಗಳನ್ನು ಸೃಷ್ಟಿಸಿದರೆ, ಮನುಷ್ಯನ ಸೃಷ್ಟಿಯ ಆಕಾರಗಳಲ್ಲಿ ಅವರ ಆಕಾಂಕ್ಷೆಗಳು ಪ್ರತಿಧ್ವನಿಸುತ್ತವೆ. ಅಂಬೇಡ್ಕರ್ ಹಾಗೂ ಗಾಂಧೀಜಿ ಅವರ ವ್ಯಕ್ತಿತ್ವ ಅವರ ಆಕಾಂಕ್ಷೆಯೇ ಹೊರತು ಅವರ ವಾಸ್ತವದ ಪ್ರತೀಕವಲ್ಲ. ಹೀಗೆ ಇಡೀ ಕೃತಿಯ ತುಂಬ ಎಳೆಎಳೆಯಾದ ಹೊಳವುಗಳು ಹಬ್ಬಿವೆ. ಇವು ಎಲ್ಲೂ ನೆಲವನ್ನು ಬಿಟ್ಟು ಗಾಳಿಯಲ್ಲಿ ತೇಲಾಡುವುದಿಲ್ಲ. ಚಿಂತಕ, ಸಾಹಿತಿ, ಕವಿ, ನಾಟಕಕಾರ, ರಂಗಕರ್ಮಿ ಮತ್ತು ಹೋರಾಟಗಾರನೊಬ್ಬನ ಕಾಳಜಿ ತಳಮಳಗಳನ್ನು ದಾಖಲಾಗಿಸಿರುವ ಕೃತಿಯಿದು. ಈ ಗದ್ಯಕ್ಕೆ ತನ್ನದೆ ಸ್ಪಷ್ಟ ಲಯ, ಅನಿಸಿದ್ದನ್ನು ತಕ್ಷಣವೇ ಹೇಳುವ ಜಾಯಮಾನವಿದೆ. ಅಕ್ಷರನಿಷ್ಠವಾದ ಪರಿಯಲ್ಲಿಯೇ ಸಂಸ್ಕೃತಿ ನಿಷ್ಠವೂ ಆಗಿರುವುದು ಈ ಕೃತಿಯ ವೈಶಿಷ್ಟ್ಯ. ಪ್ರಸನ್ನರ ಸೃಜನಶೀಲ ನಡೆಗೆ ಏಕಕಾಲದಲ್ಲಿ ಹಲವಾರು ಕ್ರಿಯೆಗಳಲ್ಲಿ ತೊಡಗುವ ಪ್ರತಿಭೆಯಿರುವುದರಿಂದ ಈ ಕೃತಿಗೆ ಹೆಚ್ಚಿನ ಗಾಢತೆ, ಸಾಧ್ಯತೆಗಳು ದಕ್ಕಿವೆ.

ಎಲಿಯಂ
೧೫/೧೩, ಎರಡನೇ ತಿರುವು, ನೆಹರೂ ನಗರ, ಸಾಗರ - ೫೭೭ ೪೦೧


ಚಿತ್ರ ಕೃಪೆ : ಫ್ರಂಟ್‌ಲೈನ್

# ಸುನಾಮಿ ಒಂದು ನೆನಪು

## ಪರಿಹಾರ ಕಾರ್ಯಕ್ರಮಗಳಲ್ಲಿ ತೊಡಗಿದ್ದ ತಂಡವೊಂದರ ವಿಶಿಷ್ಟ ಅನುಭವಗಳು

**ಕ**ಡಲತೀರ ಎಂದರೆ ಅದೆಷ್ಟು ಸುಂದರ ! ಕಣ್ಣಿನ ದೃಷ್ಟಿ ಹಾಯುವವರೆಗೂ ಕ್ಷಿತಿಜದ ಅಂಚಿನಾದ್ಯಂತ ಕಡುನೀಲಿ ಬಣ್ಣದ ನೀರು, ಸಂಜೆಯಾಗುತ್ತಿದ್ದಂತೆ ಸೂರ್ಯಾಸ್ತಮ ಸಮೀಪಿಸಿದಾಗ ಇವೆಲ್ಲವೂ ಬಂಗಾರದ ಬಣ್ಣ ಪಡೆದು ರಂಜಿಸುವುದಂತೂ ವರ್ಣನಾತೀತ. ತೀರದಲ್ಲಿ ಫಳಫಳ ಹೊಳೆಯುವ ಮರಳು ದಂಡೆಯಾದ್ಯಂತ ಸಾಲು ಸಾಲು ತೆಂಗು ಇಲ್ಲವೆ ತಾಳೆಮರಗಳು, ಅಲ್ಲಲ್ಲಿ ಅಲೆಗಳು ತಂದುಹಾಕಿದ ಕಪ್ಪೆಚಿಪ್ಪು, ಶಂಖಗಳ ರಾಶಿ ರಾಶಿ ಇದರ ಜೊತೆಗೆ ಸಮುದ್ರದಲ್ಲಿ ಜೀವಿಸುವ ಏಡಿ, ನಕ್ಷತ್ರಮೀನುಗಳ ರಾಶಿ, ಕೆಲವು ಜೀವಂತವಿದ್ದರೆ ಇನ್ನು ಕೆಲವು ಮರಣವನ್ನಪ್ಪಿ ಮರಳಿನಲ್ಲಿ ಹರಡಿರುವುದು... ಇನ್ನೂ ಇತ್ಯಾದಿ. ಆದರೆ ಈ ಸುಂದರ ಕಡಲು ಮುನಿದಾಗ ಏನಾಗಬಹುದೆಂಬುದರ ಪ್ರತ್ಯಕ್ಷದರ್ಶನ ಈ ಲೇಖನ.

**ದುರಂತ ಅಪ್ಪಳಿಸಿದಾಗ ಮಾನವೀಯತೆ ಒಂದುಗೂಡಿಸುತ್ತದೆ**

೨೬ ಡಿಸೆಂಬರ್ ೨೦೦೪ – ದಕ್ಷಿಣ ಭಾರತದಾದ್ಯಂತ ಕಡಲ ತೀರದಲ್ಲಿ ಸುನಾಮಿ ಎಂಬ ದೈತ್ಯ ಅಲೆಯ ಅಟ್ಟಹಾಸ. ತಮಿಳುನಾಡು, ಪಾಂಡಿಚೇರಿ, ಕೇರಳದಾದ್ಯಂತ ನೂರಾರು ಸಾವುನೋವು, ಆಸ್ತಿಪಾಸ್ತಿ ಹಾನಿ ಇವೆಲ್ಲವನ್ನೂ ದಿನಪತ್ರಿಕೆಗಳಲ್ಲಿ ಮತ್ತು ದೂರದರ್ಶನದ ವಿವಿಧ ಚಾನೆಲ್‌ಗಳಲ್ಲಿ ಕಾಣುತ್ತಿದ್ದ ನಮಗೆ ನಮ್ಮ ನೆಚ್ಚಿನ ಕಾಲೇಜಾದ ಎಂ. ಎಸ್. ರಾಮಯ್ಯ ವೈದ್ಯಕೀಯ ಮಹಾವಿದ್ಯಾಲಯ ಈ ಸುನಾಮಿ ದೈತ್ಯನ ಅಬ್ಬರದ ಪ್ರತ್ಯಕ್ಷದರ್ಶನ ಮಾಡಿ ಅಲ್ಲಿ ಬದುಕುಳಿದವರಿಗೆ ವೈದ್ಯಕೀಯ ಸೇವೆಯನ್ನು ನೀಡುವ ಸುಯೋಗವನ್ನು ನಮ್ಮ ವೈದ್ಯಕೀಯ ತಂಡಕ್ಕೆ ಒದಗಿಸಿ ಕೊಟ್ಟಿತು. ತಂಡವು ನಿಗದಿತ ದಿನದಂದು ಸೇವೆ ಒದಗಿಸಲು ನಿಯೋಜಿಸಿದ್ದ ಪಾಂಡಿಚೇರಿ ಪ್ರಾಂತ್ಯದ, ಒಮ್ಮೆ ಸುಂದರ ಕಡಲತೀರದ ನಗರವಾಗಿದ್ದ ನಾಗಪಟ್ಟಣಂ ಎಂಬ ಸ್ಥಳಕ್ಕೇ ಪ್ರಯಾಣಿಸಿತು. ಇಲ್ಲಿನ ಘಟನೆಗಳು ನಂಬಲಸಾಧ್ಯ ಎನಿಸಿದರೂ ಅಕ್ಷರಶಃ ಸತ್ಯ. ಈ ಸುನಾಮಿ ಅಲೆಗಳು ದುರಂತಕ್ಕೆ ಕಾರಣವಾಗಿ ಕಡಲಿಗೆ ಹಿಂತಿರುಗಿದ ನಂತರ ಅಲ್ಲಿನ ಜನರು ಅವರ ಬಂಧುಬಳಗದ ಬಗ್ಗೆ ತೋರುವ ವಿಚಿತ್ರ ಮೂಢನಂಬಿಕೆಗಳ ಬಗ್ಗೆ ನಮ್ಮ ಒಳಗಣ್ಣನ್ನು ತೆರೆಸುವುದಷ್ಟೇ ಅಲ್ಲದೆ ಈ ದುರಂತವು ಭಾರತಾದ್ಯಂತ ಜನತೆಯ ಮೇಲೆ ಬೀರಿದ ಪರಿಣಾಮದ ಬಗ್ಗೆ ಒಂದು ಚಿತ್ರಣವನ್ನು ನಮ್ಮ ಮನದಲ್ಲಿ ಮೂಡಿಸಿತು. ಈ ದೈತ್ಯ ಅಲೆಯು ಮಾಡಿಹೋದ ದುರಂತವು ಮನೆಮನೆಯ ಮಾತಾಯಿತು.

**ನೆಲದ ಮೇಲೆ ಹಡಗು**

'ಡೇ ಆಫ್ಟರ್ ಟುಮಾರೋ' ಆಂಗ್ಲ ಭಾಷಾ ಚಲನಚಿತ್ರದಲ್ಲಿ ಭಾರಿ ಹಡಗೊಂದು ಪಟ್ಟಣದ ಮಧ್ಯದಲ್ಲಿ ಬಂದು ನಿಂತಿರುವುದನ್ನು ಕಾಲ್ಪನಿಕವಾಗಿ ಚಿತ್ರೀಕರಿಸಲಾಗಿದೆ. ಆದರೆ ಈ ಸುನಾಮಿ ಪೀಡಿತ ಪ್ರದೇಶದ ಅನೇಕ ಸ್ಥಳಗಳಲ್ಲಿ, ಅದರಲ್ಲೂ ವಿಶೇಷವಾಗಿ ನಾಗಪಟ್ಟಣಂನಲ್ಲಿ ಇಂತಹ ಹಲವು ದೃಶ್ಯಗಳು ಸರ್ವೇಸಾಮಾನ್ಯವಾಗಿತ್ತು. ಒಂದು ಭಾರೀ ಗಾತ್ರದ ಅಂದರೆ ಎರಡು ಅಂತಸ್ತಿನ ಕಟ್ಟಡದಷ್ಟು ಎತ್ತರದ ಮೀನುಗಾರಿಕೆ ದೋಣಿಯೊಂದನ್ನು ಈ ದೈತ್ಯ ಅಲೆಗಳು ನಗರದ ಮಧ್ಯಭಾಗದಲ್ಲಿದ್ದ ಫ್ಲೈ ಓವರ್‌ನ ಮೇಲೆ ಆಸೀನವಾಗುವಂತೆ ಮಾಡಿದ್ದವು. ಒಂದು ರೈಲ್ವೆ ನಿಲ್ದಾಣವು ಬಂದರಾಗಿ ಮಾರ್ಪಟ್ಟಿತ್ತು. ಎರಡು ದೊಡ್ಡ ದೋಣಿಗಳನ್ನು ಈ ಸುನಾಮಿ ದೈತ್ಯ ಅಚ್ಚುಕಟ್ಟಾಗಿ ರೈಲ್ವೆ ನಿಲ್ದಾಣಗಳ ಹಳಿಗಳ ಮೇಲೆ ಲಂಗರು ಹಾಕುವಂತೆ ಮಾಡಿದ್ದ. ದೈತ್ಯ ಅಲೆಗಳೊಂದಿಗೆ ಬಂದ ಸಮುದ್ರದ ನೀರು ಹಿಂತಿರುಗಿಹೋಗುವಾಗ ಈ ದೋಣಿಗಳನ್ನು ರೈಲ್ವೇಹಳಿಯ ಮೇಲೆ ಎಲ್ಲೆಂದರಲ್ಲಿ ಇರಿಸಿಹೋಗಿತ್ತು. ಇನ್ನು ರೈಲು ಹೊರಡಿಸುವ ಸಂಭವವೆಲ್ಲಿ? ಇದರ ಜೊತೆಗೆ ಈ ಅಲೆಗಳು ನೂರಾರು ಮೀನುಗಾರಿಕೆಯ ಯಾಂತ್ರಿಕ ದೋಣಿಗಳು, ಮನೆಯಾಕಾರದ ದೋಣಿಗಳು, ತೆಪ್ಪಗಳು, ಮೀನುಗಾರರ ನಾಡದೋಣಿಗಳು ಮುಂತಾದುವನ್ನು ಒಂದೊಮ್ಮೆ ಉತ್ತಷ್ಟು ಭತ್ತದ ಫಸಲನ್ನು ನೀಡುತ್ತಿದ್ದ ಗದ್ದೆಗಳಲ್ಲಿ, ಡಾಂಬರು ರಸ್ತೆಗಳ ಮೇಲೆ ಅತಿ ದೂರಕ್ಕೆ ಅಂದರೆ ಸುಮಾರು ೨ ಕಿ.ಮೀ. ಅಂತರದ ವರೆಗೂ ಚೆಲ್ಲಾಪಿಲ್ಲಿಯಾಗುವಂತೆ ಮಾಡಿದ್ದವು. ಅಲ್ಲೇ ಇದ್ದ ಕೆಲವು ಮೀನುಗಾರರು ಈ ದೋಣಿಗಳು ಬಹುಭಾರವುಳ್ಳವಾಗಿದ್ದು ಅವನ್ನು ಸಮುದ್ರಕ್ಕೆ ಎಳೆದು ತರುವುದು ದುಸ್ಸಾಹಸವೇ ಸರಿ ಎಂದೆನಿಸಿ ಇವನ್ನು ಬಿಡಿಬಿಡಿಯಾಗಿ ಮಾಡಿ ಮತ್ತೆ ಜೋಡಿಸಬೇಕು; ಇಲ್ಲದೆ ಇದ್ದರೆ ನಿರ್ದಾಕ್ಷಿಣ್ಯವಾಗಿ ತುಂಡುತುಂಡುಗಳಾಗಿ ಕತ್ತರಿಸಿ ಅನುಪಯುಕ್ತ ವಸ್ತುಗಳೆಂದು ಮಾರುವುದೊಂದೇ ಉಳಿದಿರುವ ದಾರಿ ಎಂದು ಕರುಣಾಜನಕವಾಗಿ ಹೇಳುತ್ತಿದ್ದರು.

ಇಂತಹ ದೋಣಿಗಳ ಅವಶೇಷಗಳ ನಡುವೆ ಓಡಾಡುತ್ತಿದ್ದ ಜನರು ಈ ದೋಣಿಗಳಲ್ಲಿ ಸಿಕ್ಕಿಹಾಕಿಕೊಂಡ ಮೃತದೇಹಗಳಿಂದ ಹೊಟ್ಟೆ ತೊಳೆಸುವಂತೆ ಬರುತ್ತಿದ್ದ ದುರ್ವಾಸನೆಯನ್ನು ತಡೆಯಲು ಗತ್ಯಂತರವಿಲ್ಲಧೆ ತಮ್ಮ ಮೂಗನ್ನು ಬಟ್ಟೆಗಳಿಂದ ಮುಚ್ಚಿಕೊಂಡು ಓಡಾಡುತ್ತಿದ್ದರು. ಈ ದೋಣಿಗಳನ್ನು ಬಿಡಿಸಿದ ಸ್ವಯಂಸೇವಕರು ನಿಜಕ್ಕೂ ಅಭಿನಂದನೀಯರು.

**ಫುಟ್‌ಬಾಲ್ ತಂಡ**

ಈ ಕಡಲತೀರಕ್ಕೆ ಅತಿ ಸಮೀಪವಿರುವ ಹಳ್ಳಿಯೊಂದರಲ್ಲಿ ನಡೆದ ಘಟನೆ ಇನ್ನಷ್ಟು ದಾರುಣ. ಆ ಹಳ್ಳಿಯ ಹುಡುಗರು ಕಡಲತೀರದಲ್ಲಿ ಪ್ರತಿ ಮುಂಜಾನೆ ಫುಟ್‌ಬಾಲ್ ಆಡುತ್ತಿದ್ದುದು ಸಾಮಾನ್ಯವಾಗಿತ್ತು. ಇವರೆಲ್ಲರೂ ಸುಮಾರು ೭ರಿಂದ ೯ ವರ್ಷ ವಯಸ್ಸಿನ ಪುಟಾಣಿಗಳು. ಆ ಸುನಾಮಿ ದೈತ್ಯ ಈ ಕಡಲತೀರವನ್ನು ಅಪ್ಪಳಿಸಿದ ದಿನವೂ ಸಹಾ ಇವರು ಎಂದಿನಂತೆ ಕಡಲತೀರದಲ್ಲಿ ಫುಟ್‌ಬಾಲ್ ಆಡುತ್ತಿದ್ದರು. ಈ ಭಾರಿ ಅಲೆಗಳು ಅಪ್ಪಳಿಸಿದ ನಂತರ ಇಡೀ ಫುಟ್‌ಬಾಲ್ ತಂಡವೇ ಮಾಯವಾಗಿದ್ದರೂ ಒಂದೇ ಒಂದು ದೇಹವೂ ಕಡಲಿನಿಂದ ತೇಲಿ ದಡ ಸೇರಲಿಲ್ಲ. ಆದರೆ ಮಾರನೆಯ ದಿನ ಫುಟ್‌ಬಾಲ್ ಚೆಂಡು ಮಾತ್ರ ಕಡಲತೀರದಲ್ಲಿ ತೇಲುತ್ತಿತ್ತು. ಈ ಕಂದಮ್ಮಗಳ ತಾಯಂದಿರಿಗಂತೂ

ಡಾ|| ವಿ. ಅಂಬರೀಶ್



ಇದೊಂದು ದೊಡ್ಡ ಆಘಾತವಾಗಿ ಕಾಡಿದ್ದಷ್ಟೇ ಅಲ್ಲದೆ, ಅವರ ದುಃಖದ ಜೊತೆಗೆ ಪ್ರತಿರಾತ್ರಿ ಈ ಸುನಾಮಿ ದೈತ್ಯ ಅಲೆಗಳು ಬಂದು ಎಲ್ಲರನ್ನೂ ಸೆಳೆದುಕೊಂಡುಹೋದಂತೆ ಮೇಲಿಂದ ಮೇಲೆ ದುಃಸ್ವಪ್ನಗಳು ಅವರನ್ನು ಕಾಡಹತ್ತಿದವು.

**ಆಗಂತುಕರು**

ಇಲ್ಲಿ ಬದುಕುಳಿದ ಸುನಾಮಿ ಸಂತ್ರಸ್ತರು ಇವರಿಗೆ ನೆರವಾಗಲು ಸೈನ್ಯದೋಪಾದಿಯಲ್ಲಿ ಬರುತ್ತಿದ್ದ ಜನಸಾಗರವನ್ನು ಕಂಡು ಆಶ್ಚರ್ಯಚಕಿತರಾಗಿದ್ದರು. ಇಲ್ಲಿನ ಪರಿಸ್ಥಿತಿಯನ್ನು ಸುಧಾರಿಸಿ ಬದುಕುಳಿದಿರುವ ಸಂತ್ರಸ್ತರಿಗೆ ಈ ಪ್ರದೇಶವನ್ನು ಒಂದು ಸುಂದರ ವಾಸಸ್ಥಾನವನ್ನಾಗಿ ಮಾಡಿ ಹಿಂತಿರುಗಬೇಕೆಂಬ ಭಾವವೇ ಈ ಆಗಂತುಕರೆಲ್ಲರ ಹೃದಯಾಂತರಾಳದಲ್ಲಿ ತುಂಬಿತ್ತು. ಇಲ್ಲಿನ ಜನರೂ ಸಹ ಒಮ್ಮೆಲೇ ಈ ಪ್ರದೇಶಕ್ಕೆ ಇಷ್ಟೊಂದು ಜನರು ಬಂದದ್ದನ್ನು ಹಿಂದೆಂದೂ ಕಂಡಿರಲಿಲ್ಲ. ಭಾರತೀಯರು ಸಂಕಷ್ಟ ಪರಿಸ್ಥಿತಿಯಲ್ಲಿ ನೆರವಾಗಲು ಯಾವ ರೀತಿ ಮುಂದೆ ಬರಬಲ್ಲರು ಎಂಬುದನ್ನು ಇಲ್ಲಿ ಕಾಣಬಹುದಿತ್ತು.

ಇಲ್ಲಿಗೆ ಬಂದ ಆಗಂತುಕರಲ್ಲಿ ಅಳಿದುಳಿದ ಭಗ್ನಾವಶೇಷಗಳನ್ನು ತೆಗೆಯಲು ಬಂದವರು, ವೈದ್ಯರು, ಪರಿಹಾರ ಸಾಮಗ್ರಿಗಳನ್ನು ವಿತರಿಸುತ್ತಿದ್ದ ಸರಕಾರೇತರ ಸಂಸ್ಥೆಗಳ ಸ್ವಯಂಸೇವಕರು, ಆರಕ್ಷಕರು, ದೂರದರ್ಶನ ವಾಹಿನಿಗಳ ಸಿಬ್ಬಂದಿ, ಪತ್ರಕರ್ತರು, ಅಗ್ನಿಶಾಮಕ ದಳದವರು, ಬಹುತೇಕ ರಾಜಕಾರಣಿಗಳು ಕಡೆಯ ಕ್ಷಣದಲ್ಲಿ ಬಂದರಾದರೂ ಈ ರಾಜಕಾರಣಿಗಳು ಪದೇ ಪದೇ ಸುನಾಮಿ ದೈತ್ಯ ಹಾನಿಮಾಡದೆ ಬಿಟ್ಟಿದ್ದ ರಸ್ತೆಗಳಲ್ಲಿ, ಹಾನಿಗೀಡಾಗಿದ್ದ ಪ್ರದೇಶಗಳ ಭೇಟಿಗೆ ತಮ್ಮ ಪಕ್ಷಗಳ ವಾಹನಗಳ ಸಾಲಿನೊಂದಿಗೆ ಬಂದು ಆಹಾರ, ನೀರು, ಬಟ್ಟೆ ಒದಗಿಸುತ್ತಿದ್ದ ಸಂಸ್ಥೆಗಳ ಮತ್ತು ಚಿಕಿತ್ಸೆ ನೀಡಲು ಬಂದ ವೈದ್ಯಕೀಯ ತಂಡಗಳ ಹಾದಿಗೆ ಅಡ್ಡಲಾಗಿ ಬಂದು ಪರಿಹಾರ ಕಾರ್ಯಗಳಿಗೆ ಅಡಚಣೆಯನ್ನುಂಟುಮಾಡುತ್ತಿದ್ದರು.

ಬದುಕುಳಿದ ಸುನಾಮಿ ಸಂತ್ರಸ್ತರಿಗೆ ಈ ಶ್ವೇತ ವಸ್ತ್ರಧಾರಿ ರಾಜಕಾರಣಿಗಳು ತಿಮಿಂಗಿಲಗಳ ಗಾತ್ರದ ಭಾರಿ ಭರವಸೆಯನ್ನು ನೀಡುತ್ತಿದ್ದರೆ, ಆರಕ್ಷಕರು ಅವರಿಗೆ ಭದ್ರತೆಯನ್ನು ನೀಡಲು ಸುತ್ತುವರಿದು ಆ ರಾಜಕಾರಣಿಗಳು ಸ್ಥಳವನ್ನು ಬಿಟ್ಟುಹೋಗುವ ತನಕ ಆ ಪ್ರದೇಶದಲ್ಲಿ ಪರಿಹಾರ ಕಾಮಗಾರಿಗಳು ಮಾಡಲು ಸಾಧ್ಯವಾಗದಂತೆ ಮಾಡುತ್ತಿದ್ದರು. ಇದರಿಂದ ಸುನಾಮಿ ಪೀಡಿತರಿಗೆ ಆದ ತೊಂದರೆಯನ್ನು ನಿಜಕ್ಕೂ ಪರಮಾತ್ಮನೇ ಬಲ್ಲ.

**ಬೇಡಿಕೆ ಇರದ ಪರಿಹಾರ**

ಗುಜರಾತ್‌ನ ಭುಜ್ ಮತ್ತು ಮಹಾರಾಷ್ಟ್ರದ ಲಾತೋರ್‌ನಲ್ಲಿ ಸಂಭವಿಸಿದ ಭೀಕರ ಭೂಕಂಪದ ನಂತರ ಹಳೆಯ ಮತ್ತು ಉಪಯೋಗಿಸಿದ ಬಟ್ಟೆಗಳನ್ನು ಸಂತ್ರಸ್ತರಿಗೆ ಹಂಚಲು ಜನತೆಯಿಂದ ಸಂಗ್ರಹಿಸಿ ಅದನ್ನು ಸಂತ್ರಸ್ತರಿಗೆ ಹಂಚುವ ಕೆಲಸವು ಕೆಲವು ಸಾಮಾಜಿಕ ಸೇವಾಸಂಸ್ಥೆಗಳಿಗೆ ಮಾಮೂಲಾಗಿಬಿಟ್ಟಿದೆ. ಹಲವಾರು ಬಾರಿ ಏಕೆ, ಪ್ರತಿಸಲವೂ ಇಂತಹ ಸಂಗ್ರಹಿಸಿದ ಬಟ್ಟೆಗಳಲ್ಲಿ ಹರಿದವು ಮತ್ತು ಮಲಿನವಾಗಿರುವವನ್ನು ವಿಂಗಡಿಸುವ ಕಾರ್ಯವನ್ನು ಈ ಸಂಸ್ಥೆಗಳು ಮಾಡುವುದೇ ಇಲ್ಲ. ಇದರ ಪರಿಣಾಮವಾಗಿ ಚರ್ಮಸಂಬಂಧಿ ರೋಗಗಳು, ಕಜ್ಜಿ ಇತ್ಯಾದಿ ಹರಡಲು ಕಾರಣವಾಗುತ್ತವೆ. ಹೀಗೆ ಸಂತ್ರಸ್ತರಿಗೆಂದು ಬಂದ ಬಟ್ಟೆಗಳು ರಾಶಿರಾಶಿಯಾಗಿ ರಸ್ತೆಬದಿಗಳಲ್ಲಿ, ಖಾಲಿ ಜಾಗಗಳಲ್ಲಿ, ಆಟದ ಮೈದಾನದಲ್ಲಿ ತೆಗೆದುಕೊಳ್ಳುವವರೇ ಇಲ್ಲದೆ ಬಿದ್ದಿದ್ದವು. ಆದರೂ ಕೆಲ ಬಡಜನರು ಈ ಬಟ್ಟೆಗಳ ರಾಶಿಗಳ ನಡುವೆಯೇ ತೊಟ್ಟುಕೊಳ್ಳಬಹುದಾದ ಬಟ್ಟೆಗಳಿಗೆ ಹುಡುಕಾಟ ನಡೆಸುತ್ತಿದ್ದುದು ಕರುಣಾಜನಕವಾಗಿತ್ತು.

ನಮಗೆಲ್ಲಾ ತಿಳಿದಿರುವಂತೆ ಅಕ್ಕಿ ದಕ್ಷಿಣ ಭಾರತೀಯರ ಪ್ರಮುಖ ಆಹಾರಧಾನ್ಯ. ಇದು ನಾಗಪಟ್ಟಿಣಂಗೂ ಹೊರತೇನಲ್ಲ. ಆದರೆ ಈ ನಗರದಲ್ಲಿ ಪರಿಹಾರ ಕಾರ್ಯಕ್ರಮಗಳಲ್ಲಿ ತೊಡಗಿದ್ದ ಸಂಸ್ಥೆಗಳು ರಾಶಿಗಟ್ಟಲೆ ಬ್ರೆಡ್ಡು ಮತ್ತು ರೊಟ್ಟಿಯನ್ನು ಬದುಕುಳಿದವರ ಬಳಿ ಒಯ್ದರೂ ಅವನ್ನು ಮುಟ್ಟದಿದ್ದ, ಹಾಗೆಯೇ ಬಿಟ್ಟಿದ್ದ ಮತ್ತು ಕೊಳೆತು ನಾರುತ್ತಿದ್ದ ಬ್ರೆಡ್ಡು ಮತ್ತು ರೊಟ್ಟಿಗಳ ರಾಶಿಯನ್ನು ಹಲವಾರು ಕಡೆ ಕಾಣಬಹುದಾಗಿತ್ತು. ಬದುಕುಳಿದವರಿಗೆ ಬೇಕಾಗಿದ್ದು ಅಕ್ಕಿ ಮಾತ್ರ. ಇಷ್ಟಾದರೂ ಈ ರೀತಿ ಕೊಳೆತು ನಾರುತ್ತಿದ್ದ ಬ್ರೆಡ್ಡು ಮತ್ತು ರೊಟ್ಟಿಗಳೂ ಸಹ ಉಪಯೋಗಕ್ಕೆ ಬಂದವು ಎನ್ನುವುದಕ್ಕೆ ಈ ಮುಂದಿನ ಘಟನೆಗಳು ಸಾಕ್ಷಿಯಾಗುತ್ತವೆ.

**ಪರಿಹಾರದ ಅಗತ್ಯವಿಲ್ಲದವರಿಗೆ ಪರಿಹಾರ**

ದಿನಗಳು ಉರುಳುತ್ತಿದ್ದಂತೆ ಲಾರಿಗಟ್ಟಲೆ ಪರಿಹಾರ ಸಾಮಗ್ರಿಗಳು, ಪ್ಯಾಕ್ ಮಾಡಿದ ಆಹಾರಗಳು, ಹೊಚ್ಚಹೊಸ ಪಾತ್ರೆಗಳು, ಬಕೆಟ್‌ಗಳು, ಚಾದರಗಳು, ಗುಡಾರಗಳು ಮತ್ತು ಇತರೆ ಗೃಹೋಪಯೋಗಿ ಸಾಮಗ್ರಿಗಳು ನಮ್ಮ ವಿಶಾಲ ದೇಶದ ವಿವಿಧೆಡೆಗಳಿಂದ ಬರಲು ಪ್ರಾರಂಭವಾಯಿತು. ಇಂತಹ ಸಾಮಗ್ರಿಗಳಿಗೆ ತಮಿಳುನಾಡಿನ ಯಾವುದೇ ತನಿಖಾ ಠಾಣೆಗಳಲ್ಲಿ ತಡೆ ಒಡ್ಡದಂತೆ ತಮಿಳುನಾಡು ಸರ್ಕಾರ ಸೂಚನೆ ನೀಡಿತ್ತು. ಇದರ ಪರಿಣಾಮ ಪರಿಹಾರ ಸಾಮಗ್ರಿಗಳ ಅತಿವೃಷ್ಟಿಯ ಮಹಾಪೂರ. ಈ ಪರಿಹಾರ ಸಾಮಗ್ರಿಗಳನ್ನು ಸಂತ್ರಸ್ತರಿಗೆ ಹಂಚಲು ಹೋದ ಸಂಸ್ಥೆಯವರು ಕಂಡಿದ್ದು ಅವರ ಬಳಿ ಯಥೇಚ್ಛವಾಗಿ ಬೇರೊಂದು ಸಂಸ್ಥೆಯಿಂದ ಹಂಚಿಕೆಯಾಗಿದ್ದ ಪರಿಹಾರ ಸಾಮಗ್ರಿಗಳು. ಇದನ್ನು ಕಂಡು ಅವರಿಗೆ ತಬ್ಬಿಬ್ಬು! ಇಂತಹ ಪ್ರಕರಣಗಳು ವಿಶೇಷವಾಗಿ ಅದರಲ್ಲೂ ನಾಗಪಟ್ಟಿಣಂನಲ್ಲಿ ಹೆಚ್ಚಿನ ಮಟ್ಟಿಗೆ ಕಂಡುಬಂತು.

ಈ ಸಾಮಗ್ರಿಗಳನ್ನು ವಾಪಸ್ಸು ಒಯ್ಯಲು ಈ ಸಂಸ್ಥೆಗಳಿಗೆ ಇಷ್ಟವಿಲ್ಲದ್ದರಿಂದ ಅನಿವಾರ್ಯವಾಗಿ ಎಲ್ಲರೂ ಅವರವರ ಊರುಗಳಿಗೆ ಹಿಂತಿರುಗುವ ಮಾರ್ಗದಲ್ಲಿ ದುರಂತದಿಂದ ದೂರ ಉಳಿದಿದ್ದ ರಸ್ತೆಬದಿಯ ಹಳ್ಳಿಗಳ ಜನತೆಗೆ ಹಂಚಿ ಸಂತೃಪ್ತರಾದರು. ಇಂತಹ ಅನೇಕ ಹಳ್ಳಿಗಳು ಕಡಲತೀರದಿಂದ ಬಹು ದೂರವಿದ್ದು ಸುನಾಮಿಯಿಂದ ಯಾವುದೇ ಹಾನಿಗೀಡಾಗಿರಲಿಲ್ಲ. ಆದರೆ ಆಶ್ಚರ್ಯಕರ ಸಂಗತಿಯೆಂದರೆ ಇಲ್ಲಿನ ಜನರೂ ಸಹ ಪರಿಹಾರ ಸಾಮಗ್ರಿಗಳನ್ನು ತೆಗೆದುಕೊಳ್ಳಲು ಕಾತುರರಾಗಿದ್ದರು. ಬಹುಶಃ ಇವೆಲ್ಲಾ ಹೊಚ್ಚ ಹೊಸ ವಸ್ತುಗಳಾದ್ದರಿಂದ ಅವುಗಳನ್ನು ಸಂಗ್ರಹಿಸಿ ಬೇರೆಡೆ ಮಾರಾಟ ಮಾಡಲು ಅವರು ಉದ್ದೇಶಿಸಿದ್ದರೆಂದೆನಿಸುತ್ತದೆ.

**ಪರಿಹಾರ ಒದಗಿಸಲು ಬಂದವರಿಗೆ ಪರಿಹಾರ**

ಇನ್ನೊಂದು ವಿರಳ ಪ್ರಕರಣದಲ್ಲಿ ಈ ಪ್ರದೇಶದಲ್ಲಿ ವೈದ್ಯಕೀಯ ನೆರವು ಒದಗಿಸಲು ಉತ್ತರ ಕರ್ನಾಟಕದಿಂದ ಬಂದಿದ್ದ ವೈದ್ಯರ ತಂಡದ ಒಂದು ಗುಂಪು ಹಳ್ಳಿಗಳ ಒಳರಸ್ತೆಯಲ್ಲಿ ಹಾದಿತಪ್ಪಿ ನಮ್ಮ ತಂಡಕ್ಕೆ ಎದುರಾಯಿತು. ಅವರಿಗೆ ಸರಿಯಾದ ಮಾರ್ಗದರ್ಶನದ ಅವಶ್ಯಕತೆ ಇತ್ತು. ಆಗ ಮಧ್ಯಾಹ್ನ ಊಟದ ಸಮಯವಾಗಿದ್ದು ಮೂಲ ಶಿಬಿರಕ್ಕೆ ಆ ವೇಳೆಗೆ ತಲುಪುವಂತೆ ಇವರಿಗೆ ಸಹಕರಿಸಲು ನಿಯೋಜಿಸಿದ್ದ ಸಂಸ್ಥೆ ತಿಳಿಸಿತ್ತು. ಇನ್ನೊಂದು ವೈದ್ಯರ ತಂಡ ಗುಡ್ಡಗಾಡಿನ ಈ ಏರಿಳಿತದ ಹಾದಿಯಲ್ಲಿ ಪ್ರಯಾಣಿಸಿ ಬಳಲಿ ಬೆಂಡಾಗಿತ್ತು. ಅವರೆಲ್ಲಾ ಸಹಜವಾಗಿಯೇ ಹಸಿದಿದ್ದರು. ನಮ್ಮಲ್ಲಿ ಹೆಚ್ಚುವರಿ ಬ್ರೆಡ್ ಪೊಟ್ಟಣಗಳು ಇದ್ದುದರಿಂದ ಅವರಿಗೆ ಹಂಚಲು ನಮಗೆ ಅತೀವ ಸಂತಸವಾಯಿತು. ಬ್ರೆಡ್ಡು ತಿಂದು ಮೂಲ ಶಿಬಿರಕ್ಕೆ ಮರಳುವ ಮುನ್ನ ಅವರು ನಮ್ಮನ್ನೆಲ್ಲಾ ಅಭಿನಂದಿಸಿದರು.

ಪರಿಹಾರ ಒದಗಿಸಲು ಬಂದ ಜನರಲ್ಲಿ ಹಲವರು ಕಾಲರಾ ಅಥವಾ ವೈರಲ್ ಜ್ವರದ ಬಾಧೆಗೆ ಈಡಾದರು. ಇದಕ್ಕೆ ವೈದ್ಯರುಗಳು ಸಹ ಹೊರತೇನಾಗಿರಲಿಲ್ಲ. ಅವರಲ್ಲೂ ಕೆಲವರಿಗೆ ಈ ಪೀಡೆ ಬಾಧಿಸಿತ್ತು.

**ಚಿತೆಯ ಬೆಂಕಿ**

ಕೊಳೆತ, ಊದಿಕೊಂಡ ಮೃತ ದೇಹಗಳನ್ನು ವಿಲೇವಾರಿ ಮಾಡುವುದೇ ಇಲ್ಲಿನ ಜನರಿಗೆ ದುಸ್ಸಾಧ್ಯವಾದ ಕೆಲಸವಾಗಿತ್ತು. ಇಂತಹ ಸಂದರ್ಭದಲ್ಲಿ ಬೇಡಿಕೆ ಇಲ್ಲದೆ ಬಿದ್ದಿದ್ದ ಪರಿಹಾರ ಸಾಮಗ್ರಿಗಳು ಉಪಯೋಗಕ್ಕೆ ಬಂದವು. ಕಡಲ ತೀರದಲ್ಲಿ ಭೂಪ್ರದೇಶದುದ್ದಕ್ಕೂ ಈ ಮೃತದೇಹಗಳಿಗೆ ಚಿತೆ ಮಾಡಿ ಬೆಂಕಿ ಇಟ್ಟದ್ದರು. ಈ ಬೆಂಕಿಗೆ ಬಳಸಿದ್ದು ಉಪಯೋಗಕ್ಕೆ ಬಾರದಿದ್ದ ಮೂಟೆಗಟ್ಟಲೆ ಬಟ್ಟೆ, ಹುಳುಬಿದ್ದ ಬ್ರೆಡ್, ಒಣಗಿ ನಾರುತ್ತಿದ್ದ ರೊಟ್ಟಿಗಳೇ ಪೂರಕ ಇಂಧನವಾಗಿ ಬಳಕೆಯಾದವು. ಎಲ್ಲಾ ಭೂಪ್ರದೇಶವೂ ಅಲೆಯ ಹೊಡೆತಕ್ಕೆ ಸಿಕ್ಕಿ ಹಸಿಯಾಗಿದ್ದುದರಿಂದ ಒಣಗಿದ ಕಟ್ಟಿಗೆ ದೊರೆಯುವುದಂತೂ ಸಾಧ್ಯವೇ ಇರಲಿಲ್ಲ. ಹೀಗಾಗಿ ಪರಿಹಾರ ಸಾಮಗ್ರಿಗಳಲ್ಲದೆ ಮುರಿದ ಪ್ಲಾಸ್ಟಿಕ್ ಬಕೆಟ್‌ಗಳು ಸುನಾಮಿಯಿಂದ ಹಾನಿಗೀಡಾಗಿದ್ದ ಗೃಹೋಪಯೋಗಿ ವಸ್ತುಗಳು ಮತ್ತು ಒಣಗಿದ್ದ ಎಲ್ಲಾ ತರದ ವಸ್ತುಗಳೂ ಈ ಕೊಳೆತ ದೇಹಗಳ ಚಿತೆಯ ಬೆಂಕಿಗೆ ಅರ್ಪಿತವಾದವು.

**ದುರಂತ ಪ್ರವಾಸಿಗ**

ನಾಗಪಟ್ಟಣಂ ನಗರವು ಹಲವಾರು ಸಂಸ್ಥೆಗಳಿಂದ ಪರಿಹಾರ ಒದಗಿಸಲು ಬಂದಿದ್ದ

ಸ್ವಯಂಸೇವಕರ ಭಾರಿ ಜನಸಾಗರದಿಂದ ತುಂಬಿತುಳುಕಾಡುತ್ತಿತ್ತು. ಈ ಸಂಸ್ಥೆಗಳು ಪರಿಹಾರ ಒದಗಿಸಲು ಜನತೆಯ ಬಳಿ ಹೋದರೆ ಈಗಾಗಲೇ ಬೇರೊಂದು ಸಂಸ್ಥೆಯಿಂದ ಅವರು ಪರಿಹಾರ ಪಡೆದಿದ್ದುದು ಕಂಡುಬಂತು. ಇದಲ್ಲದೆ ಪರಿಹಾರ ಸಾಮಗ್ರಿಗಳನ್ನು ಸುನಾಮಿ ದುರಂತಪೀಡಿತ ಪ್ರದೇಶದಲ್ಲಿ ಹಂಚಲು ಇವರನ್ನು ಆಯಾ ಪ್ರದೇಶಗಳಿಗೆ ಕರೆದೊಯ್ಯಲು ನೇಮಕಗೊಂಡಿದ್ದ ಸಂಸ್ಥೆಯು ಈ ಸ್ವಯಂಸೇವಕರಿಗೆ ಸಂಚಲನಾ ಸೌಕರ್ಯ ಒದಗಿಸಲು ವಿಫಲವಾಗಿದ್ದರಿಂದ ಇಂತಹವರು ಗತ್ಯಂತರವಿಲ್ಲದೆ ಮತ್ತು ಮಾಡಲು ಬೇರೆ ಕೆಲಸವಿಲ್ಲದೆ ಕಡಲ ತೀರದಾದ್ಯಂತ ಸುತ್ತಾಡುತ್ತಾ ಅಲ್ಲಿ ಅಲೆಗಳು ತಂದುಹಾಕಿದ್ದ ಚಿತ್ರವಿಚಿತ್ರ ಸಮುದ್ರ ಚಿಪ್ಪುಗಳ ಸಂಗ್ರಹಣೆಯಲ್ಲಿ ತೊಡಗಿದ್ದರು. ಇನ್ನು ಕೆಲವರು ಪಾಳುಬಿದ್ದಿದ್ದ ನಗರದ ರಸ್ತೆಗಳಲ್ಲಿ ಅಡ್ಡಾಡುತ್ತ ಅಲ್ಲಿ ಸುನಾಮಿ ದೈತ್ಯ ಅಲೆಗಳು ತಂದು ಹಾಕಿದ್ದ ದೋಣಿಗಳ ಅವಶೇಷಗಳ ಬಳಿ ನಿಂತು ಭಾವಚಿತ್ರಗಳನ್ನು ತೆಗೆಸಿಕೊಳ್ಳುತ್ತಿದ್ದರು, ಅವರು ತಮ್ಮ ಊರಿಗೆ ಹಿಂತಿರುಗಿದ ಮೇಲೆ ಮನೆಯವರಿಗೆ ತೋರಿಸಲೇನೋ ಎಂಬಂತೆ. ಈ ಪ್ರಕರಣವು ಅಲ್ಲಿನ ಪ್ರವಾಸಿಗರನ್ನು 'ದುರಂತ ಪ್ರವಾಸಿಗ' ಎಂಬ ಹೊಸ ಹೆಸರಿನಿಂದ ಕರೆಯಲು ಕಾರಣವಾಯಿತು.

**ವೈದ್ಯಕೀಯ ಕಾಲೇಜು**

ಪಾಂಡಿಚೇರಿ ಕೇಂದ್ರಾಡಳಿತ ಪ್ರದೇಶಕ್ಕೆ ಸೇರಿದ ಕಾರೈಕಲ್ ನಗರದಲ್ಲಿ ಕಡಲತೀರದಿಂದ ಸುಮಾರು ೩ ಕಿ.ಮೀ. ದೂರದಲ್ಲಿರುವ ಪ್ರತಿಷ್ಠಿತ ವೈದ್ಯಕೀಯ ಕಾಲೇಜು ಅತಿ ಪ್ರಾಚೀನವಾದದ್ದು. ಕರಾಳ ಸುನಾಮಿ ದೈತ್ಯ ಈ ಕಡಲತೀರಕ್ಕೆ ಅಪ್ಪಳಿಸಿದಾಗ ತೆಂಗಿನ ಮರದಷ್ಟು ಎತ್ತರದ ಅಲೆಗಳು ಈ ಕಾಲೇಜಿನ ಕಟ್ಟಡವನ್ನೂ ಸಹ ಹಾನಿಮಾಡದೆ ಬಿಡಲಿಲ್ಲ. ಈ ಆವರಣದಲ್ಲಿ ವಾಸವಿದ್ದ ನಾಲ್ಕು ಕಾವಲುಗಾರರ ಕುಟುಂಬದವರನ್ನು ಸೆಳೆದೊಯ್ದ ಈ ದೈತ್ಯ ಅಲೆಗಳು ಮತ್ತೆ ಅವರನ್ನು ಹಿಂತಿರುಗಿಸಲೇ ಇಲ್ಲ. ಅಂದು ಕಾಲೇಜಿಗೆ ರಜೆ ದಿನವಾಗಿದ್ದರಿಂದ ಮತ್ತು ವಿದ್ಯಾರ್ಥಿಗಳು ಹೆಚ್ಚಿನ ಸಂಖ್ಯೆಯಲ್ಲಿ ಇಲ್ಲದ್ದರಿಂದ ಭಾರಿ ಸಾವುನೋವುಗಳು ಉಂಟಾಗಲಿಲ್ಲ.

ಅಲೆಯ ಹೊಡೆತಕ್ಕೆ ಸಿಕ್ಕಿ ಈ ಕಾಲೇಜಿನಲ್ಲಿದ್ದ ಅತ್ಯಂತ ಅಮೂಲ್ಯ ಮತ್ತು ಭಾರಿ ಬೆಲೆಯ ವೈದ್ಯಕೀಯ ಗ್ರಂಥಗಳು ಕಾಲೇಜಿನ ಆವರಣದಲ್ಲೆಲ್ಲಾ ಒದ್ದೆಮುದ್ದೆಯಾಗಿ ಹರಡಿಬಿದ್ದಿದ್ದವು. ಈ ಪುಸ್ತಕಗಳೆಲ್ಲಾ ಸಂಪೂರ್ಣ ಒದ್ದೆಯಾಗಿದ್ದು ಮುದುರಿ ಕೊಂಡಿದ್ದರಿಂದ ಒಣಗಿದರೂ ಸಹಾ ಉಪಯೋಗಕ್ಕೆ ಬಾರದ ಸ್ಥಿತಿಯಲ್ಲಿದ್ದವು.

ಒಂದೊಮ್ಮೆ ಉಪನ್ಯಾಸ ಕೊಠಡಿಗಳಾಗಿದ್ದ, ಪ್ರಯೋಗಶಾಲೆಗಳಾಗಿದ್ದ ಕೊಠಡಿಗಳು ಯಾವುದೇ ಪೀಠೋಪಕರಣಗಳಾಗಲೀ, ಉಪಕರಣಗಳಾಗಲೀ ಇಲ್ಲದೆ ಖಾಲಿ ಖಾಲಿಯಾಗಿ ಸಮುದ್ರದತ್ತ ದೃಷ್ಟಿಬೀರಿ ನಿಂತಿದ್ದವು. ಕಿಟಕಿಗಳು ಗೋಡೆಗಳಿಂದ ಕಿತ್ತು ಬಂದಿದ್ದರೆ ಪೀಠೋಪಕರಣಗಳು ಮತ್ತು ಭಾರಿ ಬೆಲೆಯ ಪ್ರಯೋಗಶಾಲಾ ಉಪಕರಣಗಳು ಸಮುದ್ರದ ನೀರು ನುಗ್ಗಿಬಂದ ರಭಸಕ್ಕೆ ಕೊಠಡಿಗಳಿಂದ ಹೊರಬಂದು ಸುನಾಮಿ ಅಲೆಗಳು ಹಿಂತಿರುಗುವಾಗ ಅಲ್ಲಲ್ಲಿ ನಿರ್ಮಿಸಿಹೋಗಿದ್ದ ಸಣ್ಣಸಣ್ಣ ಉಪ್ಪುನೀರಿನ ಸರೋವರಗಳಲ್ಲಿ ಮುಳುಗಿದ್ದರೆ ಕೆಲವು ಅರ್ಧಂಬರ್ಧ ತೇಲಾಡುತ್ತಿದ್ದವು.

ಕೆಲವು ವಿದ್ಯಾರ್ಥಿಗಳ ಓಎಚ್‌ಪಿ ಪಾರದರ್ಶಕ ಹಾಳೆಗಳು ವೈದ್ಯಕೀಯ ಕಾಲೇಜು ಬಳಿ ಇದ್ದ ಸಮುದ್ರತೀರದಲ್ಲಿ ಕಂಡುಬಂದವು. ತಮಾಷೆಯ ಸಂಗತಿಯೆಂದರೆ, ಅಂತಹ ಒಂದು ಹಾಳೆಯ ಮೇಲೆ 'ದುರಂತ ಸಂಭವಿಸಿದಾಗ ಕೈಗೊಳ್ಳಬೇಕಾದ ಕ್ರಮಗಳು' ಎಂದು ಬರೆದಿತ್ತು (ಆ ವಿದ್ಯಾರ್ಥಿಗೆ ಈ ದಾರುಣ ಸುನಾಮಿಯ ಮುನ್ಸೂಚನೆಯಿತ್ತೆ?)

**ಚಮ್ಮಾರ**

ಸುನಾಮಿ ಬಿಟ್ಟುಹೋಗಿದ್ದ ಅವಶೇಷಗಳ ಮಧ್ಯೆ ನಾವು ತಿರುಗಾಡುತ್ತಿದ್ದಾಗ ನಮ್ಮ ಸಂಗಾತಿಯೊಬ್ಬರ ಬೂಟಿನ ಚರ್ಮದ ಪಟ್ಟಿ ಕಿತ್ತುಹೋಯಿತು. ತಕ್ಷಣವೇ ಅಲ್ಲೊಬ್ಬ ಚಮ್ಮಾರ ಸಿಕ್ಕಿದ. ಬೂಟನ್ನು ತುಂಬಾ ಅಚ್ಚುಕಟ್ಟಾಗಿ ರಿಪೇರಿ ಮಾಡಿಕೊಟ್ಟ. ಆದರೆ ರಿಪೇರಿಗೆ ಅವನು ಕೇಳಿದ ದುಬಾರಿ ಬೆಲೆಯನ್ನು ಕಂಡು ಬೆರಗಾಗುವ ಸರದಿ ನಮ್ಮದಾಯಿತು. ಹೊರಗಿನಿಂದ ಬಂದವರಿಗೆ ಇಂತಹ ಜನ ಹೆಚ್ಚಿನ ಬೆಲೆ ಕೇಳುವುದು ಸರ್ವೇಸಾಮಾನ್ಯ. ಏಕೆಂದರೆ, ಇದರಿಂದ ಅವರು ಅತಿ ಶೀಘ್ರವಾಗಿ ಹೆಚ್ಚಿಗೆ ಹಣ ಗಳಿಸಬಹುದಲ್ಲವೇ? ಅಷ್ಟರಲ್ಲಿ ಆತ, ''ನೀವು ಇಲ್ಲಿ ದುರಂತಕ್ಕೊಳಗಾದ ನಮ್ಮ ಅಣ್ಣ ತಮ್ಮಂದಿರು, ಅಕ್ಕ ತಂಗಿಯರಿಗೆ ಸಹಾಯ ಮಾಡಲು ದೂರದಿಂದ ನಮ್ಮೂರಿಗೆ ಬಂದಿದ್ದೀರಿ. ನಿಮ್ಮಿಂದ ನನಗೆ ಯಾವುದೇ ಹಣ ಬೇಡ'' ಎಂದಾಗ ನಮಗೆ ಅತ್ಯಾಶ್ಚರ್ಯವಾಯಿತು (ಆದರೂ ನಾವು ಅವನಿಗೆ ಬಲವಂತ ಮಾಡಿ ಹಣನೀಡಿ ನಸುನಗುತ್ತಾ ಆ ಜಾಗದಿಂದ ಕದಲಿದೆವು).

**ಸರೋವರಗಳ ಪಟ್ಟಣ**

ನಾಗಪಟ್ಟಿಣಂ ನಗರದಲ್ಲಿ ಹೆಚ್ಚಾಗಿ ಯಾವುದೇ ಕೆರೆಗಳಾಗಲೀ, ಸರೋವರಗಳಾಗಲೀ ಇರಲಿಲ್ಲ. ಆದರೆ ಸುನಾಮಿಯ ನಂತರ ಹಲವಾರು ಉಪ್ಪು ನೀರಿನ ಸರೋವರಗಳು ಅಲ್ಲಲ್ಲಿ ನಿರ್ಮಾಣಗೊಂಡಿದ್ದವು. ಮನೆಗಳು ಮತ್ತು ಹಲವು ಶ್ರೀಮಂತರ ಭಾರಿ ಬಂಗಲೆಗಳನ್ನು ಸುತ್ತುವರಿದಿದ್ದ ಈ ಸರೋವರಗಳು ಅವರು ಯಾರೂ ಮನೆಬಿಟ್ಟು ಹೊರಗೆ ಬಾರದಂತೆ ಮಾಡಿದ್ದವು. ಶ್ರೀಮಂತ ವ್ಯಾಪಾರಿಗಳ ಉಗ್ರಾಣಗಳೆಲ್ಲಾ ಅಲೆಗಳ ಹೊಡೆತಕ್ಕೆ ಸಿಕ್ಕಿ ಕೊಚ್ಚಿಹೋಗಿ ಅವರನ್ನು ದಾರಿದ್ರ್ಯದ ಮಡಿಲಲ್ಲಿ ತಳ್ಳಿತ್ತು. ಕೆಲವು ಭಾರಿ ಶ್ರೀಮಂತರು ಸಹ ಸಂತ್ರಸ್ತರ ಶಿಬಿರಗಳಲ್ಲಿ ಕಡುಬಡವರ ಜೊತೆ ಒಂದೇ ಸೂರಿನಡಿ ಇರುವಂತೆ ಈ ಸುನಾಮಿ ಮಾಡಿತ್ತು. ಇದನ್ನು ಕಂಡಾಗ ಸುನಾಮಿಯು ಇವರೆಲ್ಲರನ್ನೂ ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಒಗ್ಗೂಡಿಸಿರುವಂತೆ ಭಾಸವಾಯಿತು.

**ಗುಂಪು**

ಒಂದು ದಿನ ಸಂತ್ರಸ್ತರಿಗೆ ವೈದ್ಯಕೀಯ ನೆರವನ್ನು ಒದಗಿಸಿ ನಾವು ಹಿಂತಿರುಗುತ್ತಿದ್ದಾಗ ನಮ್ಮ ವಾಹನವನ್ನು ದಾರಿಯ ಮಧ್ಯೆ ಸುಮಾರು ೬-೭ ಜನರಿದ್ದ ತಂಡವೊಂದು ತಡೆದುನಿಲ್ಲಿಸಿತು. ಆಗ ಸುಮಾರು ರಾತ್ರಿ ೮ ಘಂಟೆಯ ಸಮಯ. ನಾವು ಹೊರಗಿನಿಂದ ಬಂದವರಾದ್ದರಿಂದ ತುಂಬಾ ಆತಂಕಗೊಂಡೆವು. ಇದಲ್ಲದೆ ಪತ್ರಿಕೆಗಳಲ್ಲಿ ಇಂತಹ ಗುಂಪುಗಳು ಲೂಟಿಯಲ್ಲಿ ತೊಡಗಿದ್ದಾರೆಂಬ ಸುದ್ದಿಯನ್ನು ಬೇರೆ ಓದಿದ್ದೆವು. ಅದೂ ಅಲ್ಲದೆ ನಮ್ಮ ವಾಹನದ ಮುಂದೆ ಕಟ್ಟಿದ್ದ ಭಿತ್ತಿಪತ್ರದಲ್ಲಿ ಕನ್ನಡ ಮತ್ತು ಇಂಗ್ಲಿಷ್ ಭಾಷೆಯಲ್ಲಿ ಮಾತ್ರ ಘೋಷಣೆಗಳು ಇದ್ದುದ್ದರಿಂದ ನಮ್ಮನ್ನು ಹೊರರಾಜ್ಯದವರೆಂದು ಗುರುತಿಸಲು ಕಷ್ಟವಿರಲಿಲ್ಲ. ಅವರ ದಾಳಿಯನ್ನು ಎದುರಿಸಲು ನಾವೆಲ್ಲಾ ನಿಟ್ಟುಸಿರುಬಿಟ್ಟು ಮಾನಸಿಕವಾಗಿ ಸಿದ್ಧರಾದೆವು. ಅಷ್ಟಕ್ಕೂ ಅಬ್ಬಬ್ಬಾ ಎಂದರೆ ಅವರು ನಾವು ಹಿಂತಿರುಗುವ ದಾರಿಯಲ್ಲಿ ಜನರಿಗೆ ಹಂಚಲೆಂದು ನಮ್ಮೊಡನೆ ಇಟ್ಟುಕೊಂಡಿದ್ದ ''ಗುಡ್ ಲೈಫ್'' ಹಾಲಿನ ಪೊಟ್ಟಣಗಳನ್ನು ತೆಗೆದುಕೊಂಡು ಹೋಗಬಹುದಾಗಿತ್ತೇ ಹೊರತು ಬೇರೇನೂ ಇರಲಿಲ್ಲ. ಆಗಲೇ ಅವರಲ್ಲೊಬ್ಬ ನಮಗೆ ಅರ್ಥವಾಗದ ತಮಿಳು ಭಾಷೆಯಲ್ಲಿ ಮಾತನಾಡಿ ಅದೇ ಭಾಷೆಯಲ್ಲಿ ಮುದ್ರಿತವಾಗಿದ್ದ ಕೆಲವು ಚೀಟಿಗಳನ್ನು ನಮಗೆ ಕೊಟ್ಟ. ನಮಗೋ ತಮಿಳು ಓದಲುಬಾರದು. ಆದ್ದರಿಂದ ಈ ಗುಂಪು ನಮ್ಮಿಂದ ಹಣವನ್ನೇನಾದರೂ ಕೇಳುತ್ತಿರಬಹುದೇ ಎನಿಸಿತು. ಆ ವೇಳೆಗೆ ಆ ಗುಂಪಿನವರೆಲ್ಲಾ ನಮ್ಮ ವಾಹನದ ಕಿಟಕಿಗಳ ಹತ್ತಿರ ಬಂದು ನಿಂತಿದ್ದರು. ಮುಂದೆ ದಾರಿ ಸುಗಮವಾಗಿತ್ತು. ಈ ಸಮಯವನ್ನರಿತ ನಮ್ಮ ಚಾಲಕ ವಾಹನವನ್ನು ಕೂಡಲೇ ಚಾಲನೆಮಾಡಿ ರಭಸದಿಂದ ಅತಿವೇಗವಾಗಿ ಮುನ್ನುಗ್ಗಿದ. ನಾವೆಲ್ಲರೂ ಸದ್ಯ ಆ ಗುಂಪಿನಿಂದ ಪಾರಾದೆವಲ್ಲ ಎಂದುಕೊಂಡು ಸಮಾಧಾನದ ನಿಟ್ಟುಸಿರುಬಿಟ್ಟೆವು. ನಮ್ಮ ಮೂಲ ಶಿಬಿರದಲ್ಲಿದ್ದ ಒಬ್ಬರು ಆ ಚೀಟಿಯಲ್ಲಿದ್ದುದನ್ನು ಭಾಷಾಂತರ ಮಾಡಿ ನಮಗೆ ಓದಿಹೇಳಿದರು.

''ಭಾರತದೇಶದ ಮೂಲೆ ಮೂಲೆಗಳಿಂದ ಬಂದಿರುವ ನಮ್ಮ ಸಹೋದರ ಸಹೋದರಿಯರೆ, ಆರಕ್ಷಕರೇ, ಅಗ್ನಿಶಾಮಕದಳದವರೇ, ವೈದ್ಯರುಗಳೇ, ಸ್ವಯಂಸೇವಕರೇ ಮತ್ತು ಪರಿಹಾರ ಕಾಮಗಾರಿಗಳಲ್ಲಿ ತೊಡಗಿರುವ ಎಲ್ಲಾ ಬಾಂಧವರೇ, ನಾಗಪಟ್ಟಿಣಂನ ಆಟೋ ಚಾಲಕರ ಸಂಘದ ಸದಸ್ಯರಾದ ನಾವುಗಳು ಇಂತಹ ಸಂಕಷ್ಟದ ಸಮಯದಲ್ಲಿ ನಾಗಪಟ್ಟಿಣಂಗೆ ಬಂದು ನಮ್ಮೆಲ್ಲರಿಗೂ ಸಹಾಯ ಮಾಡಿದ್ದಕ್ಕೆ ನಿಮಗೆಲ್ಲಾ ನಾಗಪಟ್ಟಿಣಂನ ಎಲ್ಲಾ ಜನತೆಯ ಪರವಾಗಿ ಹೃತ್ಪೂರ್ವಕ ವಂದನೆಗಳನ್ನು ಅರ್ಪಿಸುತ್ತಿದ್ದೇವೆ. ಆ ಭಗವಂತನು ನಿಮ್ಮನ್ನೆಲ್ಲಾ ಹರಸಲಿ. ವಂದನೆಗಳು! ವಂದನೆಗಳು! ವಂದನೆಗಳು!'' ಎಂದು ಆ ಚೀಟಿಯಲ್ಲಿ ಮುದ್ರಿತವಾಗಿತ್ತು. ಇದರಿಂದ ನಾವು ಕಲಿತ ಪಾಠವೆಂದರೆ ಯಾರನ್ನೂ ಸರಿಯಾಗಿ ಅರ್ಥಮಾಡಿಕೊಳ್ಳದೆ ಅವರ ಬಗ್ಗೆ ಯಾವುದೇ ತೀರ್ಮಾನ ಕೈಗೊಳ್ಳಬಾರದೆಂಬುದೇ. ಭಾರವಾದ ಹೃದಯದಿಂದ ಸತ್ತವರ ಆತ್ಮಕ್ಕೆಲ್ಲಾ ಶಾಂತಿ ಕೋರುತ್ತಾ ನಮ್ಮ ಕೈಲಾದಷ್ಟು ವೈದ್ಯಕೀಯ ಸೇವೆ ಒದಗಿಸಿದ ತೃಪ್ತಿಯಿಂದ ಬೆಂಗಳೂರಿಗೆ ಬಂದಾಗ ಆಗಲೇ ಅರುಣೋದಯವಾಗಿ ಎಂದಿನಂತೆ ಬೆಂಗಳೂರಿನ ಜನಜೀವನ ಪ್ರಾರಂಭವಾಗಿತ್ತು.



ಡಾ|| ವಿ. ಅಂಬರೀಶ್
ಸ್ನಾತಕೋತ್ತರ ವೈದ್ಯಕೀಯ ಪದವಿ ವಿದ್ಯಾರ್ಥಿ
ದೈಹಿಕ ಶಾಸ್ತ್ರ ವಿಭಾಗ
ಎಂ. ಎಸ್. ರಾಮಯ್ಯ ಕಾಲೇಜು, ಬೆಂಗಳೂರು

# ಕಾಯ ಒಡೆಯಬೇಕು

ಶ್ರೀಮು

ಕನ್ನಡ ನಿಘಂಟಿನ ಪ್ರಕಾರ ಕಾಯ ಎಂದರೆ ದೇಹ, ಶರೀರ ಹಾಗೂ ಕಾಯ್ ಎಂದರೆ ಕಾಪಾಡು, ರಕ್ಷಿಸು, ಅಪಕ್ವ ಫಲ, ಬೀಜಕೋಶ, ತೆಂಗಿನಕಾಯಿ ಮುಂತಾದ ಅರ್ಥಗಳು ಇವೆ.

ಕಾಯ ಒಡೆಯಬೇಕು ಎಂಬ ಮಾತು ಜ್ಞಾನಿಗಳ ಬಾಯಿಂದ ಸಂದರ್ಭಾನುಸಾರ ಬರುತ್ತಲೇ ಇರುತ್ತದೆ. ಅಂದರೆ ದೇಹದಲ್ಲಿ ಮನೆ ಮಾಡಿಕೊಂಡಿರುವ ಅರಿಷಡ್ವರ್ಗಗಳಾದ ಕಾಮ, ಕ್ರೋಧ, ಲೋಭ, ಮೋಹ, ಮದ ಮತ್ತು ಮಾತ್ಸರ್ಯ ಎಂಬ ಮನುಷ್ಯನೊಳಗಿನ ಆರು ಶತ್ರುಗಳು ಹಾಗೂ ಅಜ್ಞಾನ, ಅಂಧಕಾರ, ಅಹಂಕಾರ ಮುಂತಾದ ಮೌಢ್ಯಗಳನ್ನು ತೊಡೆದುಹಾಕಿ (ನಿರ್ಮೂಲನ ಮಾಡಿ) ಸುಜ್ಞಾನವೆಂಬ ತಿರುಳನ್ನು ಪಡೆದು ಮಾನವನಾಗಿ, ದೇವಮಾನವನಾಗಿ ಸುಖಶಾಂತಿಯಿಂದ ಬದುಕಬೇಕೆಂಬುದೇ ಜ್ಞಾನಿಗಳ ಆಶಯ.

ಜ್ಞಾನಿಗಳ ಮಾತನ್ನು ಸರಿಯಾಗಿ ಅರ್ಥಮಾಡಿಕೊಳ್ಳದೆ, ಕಾಯ ಎಂದರೆ ತೆಂಗಿನಕಾಯಿ ಎಂದು ಪಾಮರ ಪಂಡಿತರು (ಮೂಢ) ಅರ್ಥೈಸಿ ಪ್ರಚುರಪಡಿಸಿದರು. ಹೀಗಾಗಿ ಜನಸಾಮಾನ್ಯರು ತೆಂಗಿನಕಾಯಿಯನ್ನು ದೇವಾಲಯಗಳಲ್ಲಿ ಒಡೆದು ಅದರಲ್ಲಿರುವ ತಿರುಳನ್ನು ತಿನ್ನುತ್ತಿದ್ದಾರೆ. ಹಾಗೆಯೇ ಬಾಳೇಹಣ್ಣಿನ ಸಿಪ್ಪೆ ತೆಗೆದು ಅದರೊಳಗಿರುವ ತಿರುಳನ್ನು ಉಪಯೋಗಿಸುತ್ತಾರೆ. ತಿರುಳನ್ನು ತಿಂದು ಚಿಪ್ಪು ಮತ್ತು ಸಿಪ್ಪೆಗಳನ್ನು ಬಿಸಾಡುತ್ತಾರೆ. ಇದರಿಂದ ಹೊಟ್ಟೆ ತುಂಬುತ್ತದೆಯೇ ಹೊರತು ಜ್ಞಾನ ಬರುವುದಿಲ್ಲ.

ಸ್ವಾರ್ಥಿಗಳಾದ ಪುರೋಹಿತ, ಪೂಜಾರಿ ವರ್ಗ ತಾವು ಸುಲಭವಾಗಿ ಹೊಟ್ಟೆ ಹೊರೆಯುವ ಸಲುವಾಗಿ ಕಾಯಿ ಎಂದರೆ ತೆಂಗಿನಕಾಯಿ, ಬಾಳೇಹಣ್ಣು ಮುಂತಾದ ಅನೇಕ ಫಲಗಳನ್ನು, ಹಾಲು, ಜೇನುತುಪ್ಪ ಮುಂತಾದ ಪದಾರ್ಥಗಳನ್ನು ತರಿಸಿಕೊಂಡು ಸಂಸ್ಕರಿಸಿ ದೇವರ ಹೆಸರಿನಲ್ಲಿ ನೈವೇದ್ಯ ಮಾಡಿ (ಇದರಲ್ಲಿ ದೇವರು ಸ್ವಲ್ಪವಾದರೂ ತಿನ್ನುತ್ತಾನೆಯೆ?) ತಾವೂ ತಿಂದು, ಭಕ್ತರು ಎಂದು ಹೆಸರಿಸಿದ ಜನರಿಗೆ ದೇವರ ಪ್ರಸಾದ ಎಂಬ ಹೆಸರಿನಲ್ಲಿ ಕೊಡುತ್ತಾರೆ. ಇಂತಹವರನ್ನು ನೋಡಿಯೇ ವೇಮನಯೋಗಿ ಮತ್ತು ಸರ್ವಜ್ಞ ಈ ರೀತಿ ಪ್ರಶ್ನಿಸುತ್ತಾರೆ –

*ಕಲ್ಲುಗೊಂಬೆಗೇಕೆ – ರಂಗುವಸ್ತ್ರಂಗಳು*<br>
*ಗುಡಿಯು ಗೋಪುರಗಳು – ಉತ್ಸವಗಳು*<br>
*ಕೂಳು ಬಟ್ಟೆ ಕೇಳುವನೆ – ದೇವನಿಳೆಯೊಳು ?*<br>
*ವಿಶ್ವತೋಭಿರಾಮ ಕೇಳು ವೇಮಾ ॥*

*ಲಿಂಗಕ್ಕೆ ತೋರಿಸುತ ನುಂಗುವಾತನೆ ಕೇಳು*<br>
*ಲಿಂಗವುಂಬುವುದೇ ? ಇದನರಿದು, ಕಪಿಯೇ ನೀ*<br>
*ಜಂಗಮಗೆ ನೀಡು ಸರ್ವಜ್ಞ॥*

ಇಂತಹ ಕಾರ್ಯಗಳೆಲ್ಲವೂ ಸ್ವಾರ್ಥಿಗಳ ಆಟಕ್ಕೆ ಹಾಗೂ ಸಾಮಾನ್ಯರ ಪರದಾಟಕ್ಕೆ ಎಂಬುದನ್ನು ಸರ್ವಜ್ಞ ಹೀಗೆ ವಿವರಿಸುತ್ತಾರೆ –

*ಅರ್ಥ ಸಿಕ್ಕರೆ ಬಿಡರು । ವ್ಯರ್ಥದಿ ಶ್ರಮ ಬಡವರ ।*<br>
*ನರ್ಥಕ್ಕೆ ಪರರ ನೂಂಕಿಪರು, ವಿಪ್ರರಿಂ ।*<br>
*ಸ್ವಾರ್ಥರಿನ್ನಿಲ್ಲ ಸರ್ವಜ್ಞ॥*

ಕಾಯ ಹೇಗೆ ಒಡೆಯಬೇಕು ಎಂಬುದನ್ನು ವೇಮನಯೋಗಿಯನ್ನು ಕೇಳೋಣ –

*ಅಜ್ಞಾನವೆಂಬ ಕಾಡಂ ।*<br>
*ಸುಜ್ಞಾನವೆಂಬ ಖಡ್ಗದಿಂ ಕಡಿದಿಡುತಂ ।*<br>
*ಅಜ್ಞಾನ ತನುವ ತೊಳೆದೊಡೆ*<br>
*ಸುಜ್ಞಾನ ಬ್ರಹ್ಮ ಪದವಿ ದೊರೆಗುಂ ವೇಮಾ ॥*

ಸುಮಾರು ೧೮ನೇ ಶತಮಾನದ ಪೂರ್ವಾರ್ಧದಲ್ಲಿ ಇದ್ದ ಲಕ್ಷ್ಮೀಂಕರಾ ಎಂಬ ಸಂತ ಮಹಿಳೆ ತನ್ನ ಅದ್ವಯ ಸಿದ್ಧಿಯೆಂಬ ಗ್ರಂಥದಲ್ಲಿ, ಸಂನ್ಯಾಸ, ಧಾರ್ಮಿಕ ಶಿಷ್ಟಾಚಾರ, ಮೂರ್ತಿಪೂಜೆ ಖಂಡಿಸಿ ಎಲ್ಲ ದೇವತೆಗಳಿಗೂ ಆಶ್ರಯಸ್ಥಾನವಾದ ಈ ಶರೀರಕ್ಕೆ ಮಹತ್ವ ನೀಡಬೇಕೆಂದು ಹೇಳಿದ್ದಾಳೆ. ನಿತ್ಯವೂ ಈ ಕಾಯವನ್ನೇ ಶಾಂತಚಿತ್ತದಿಂದ ಪೂಜಿಸಿ ಎನ್ನುತ್ತಾಳೆ. ಅಂದರೆ ಶಾಂತಚಿತ್ತತೆಯಿಂದ ಇದ್ದರೆ ಈ ಕಾಯದೊಳಗೆ ಗುಪ್ತವಾಗಿರುವ ಜ್ಞಾನನಿಧಿ ದೊರೆಯುತ್ತದೆ ಎಂಬುದೇ ಲಕ್ಷ್ಮೀಂಕರರ ಅಭಿಮತವಾಗಿದೆ.

ಕಾಯ ಒಡೆಯುವ ಮಾರ್ಗವನ್ನು ಕ್ರಿ.ಶ. ೯೬೦ರಲ್ಲಿ ಜೀವಿಸಿದ್ದ ಸಿದ್ಧಿಪುರುಷ ತಿಲೋಪಾನ ಮಾತಿನಲ್ಲಿ ನೋಡಿದರೆ – ತೀರ್ಥ ತಪೋವನಗಳ ಸೇವೆ ಮಾಡಬೇಡ. ಇದರಿಂದ ದೇಹ ಶುಚಿಯಾಗದು. ಪಾಪ ತೊಲಗದು. ಬ್ರಹ್ಮ-ವಿಷ್ಣು-ಮಹೇಶ್ವರ ದೇವತೆಗಳು, ಬೋಧಿಸತ್ವ ಇವರ ಸೇವೆ ಮಾಡಬೇಡವೋ! ದೇವನ ಪೂಜಿಸಬೇಡ, ತೀರ್ಥಯಾತ್ರೆ ಮಾಡಬೇಡ, ದೇವಪೂಜೆಯಿಂದ ದೊರಕದು ಮೋಕ್ಷ, ಅವಿಕಲಚಿತ್ತನಾಗಿ ಬುದ್ಧನನ್ನು ಆರಾಧಿಸು. ಭವನಿರ್ಮಾದಲೆ ಲೀನನಾಗಿರದಿರು.

ಕಣ್ಹಪಾ ಎಂಬ ನಾಥಸಿದ್ಧ, ಪರಮಾರ್ಥ ಪ್ರವೀಣರೆಂದು ಉಬ್ಬುಬ್ಬಿ ಕೊಚ್ಚಿಕೊಳ್ಳುವವರನ್ನು ನಂಬದಿರುವಂತೆ ಎಚ್ಚರಿಕೆ ಕೊಡುತ್ತಾನೆ. ಆಗಮ ವೇದ ಪುರಾಣಗಳ ಮೇಲೆ ಹೆಮ್ಮೆಪಟ್ಟು ಬೀಗುವ ಪಂಡಿತರನ್ನು, ಬಲಿತ ತೆಂಗಿನಕಾಯಿಯ ಮೇಲೆ ಹೊರಹೊರಗೇ ಸುತ್ತುವ ದುಂಬಿಯಂತೆ ಎನ್ನುತ್ತಾ, ಇವರು ತಿರುಳನ್ನು ಕಾಣದೆ ಸಿಪ್ಪೆಗೆ ಅಂಟುಕೊಂಡಿದ್ದಾರೆ ಎಂದು ಖಂಡಿಸುತ್ತಾನೆ.

ಗೋರಕ್ಷಮತದ ಪ್ರಥಮ ಸಿದ್ಧಾಂತವೇ ''ಬ್ರಹ್ಮಾಂಡದಲ್ಲಿ ಇರುವುದೆಲ್ಲ ಪಿಂಡದಲ್ಲಿದೆ''. ಈ ಪಿಂಡವು ಬ್ರಹ್ಮಾಂಡದ ಸಂಕ್ಷಿಪ್ತ ಸಂಸ್ಕರಣದಂತಿದೆ. ಮನುಷ್ಯ ಶರೀರವನ್ನೇ ಪ್ರಧಾನಪಿಂಡವೆಂದು ವ್ಯಾಖ್ಯೆ ಮಾಡಲಾಗಿದೆ. ಅಂದರೆ – ''ಮನುಷ್ಯನಲ್ಲಿ ಎಷ್ಟೆಲ್ಲ ನಾಡಿಗಳು, ದ್ವಾರಗಳು, ಆಧಾರಗಳು ಇವೆಯೋ ಅಷ್ಟೆಲ್ಲಾ ಸಮಸ್ತ ಬ್ರಹ್ಮಾಂಡದಲ್ಲಿದೆ. ಅಷ್ಟೇ ಈ ಬ್ರಹ್ಮಾಂಡದ ಪರಮಾಣುವಿನಲ್ಲೂ ಇದೆ.''

ಹಂಪಿಯ ಬ್ರಹ್ಮಶ್ರೀ ಸದಾಶಿವಯೋಗಿಗಳ ಪ್ರಕಾರ ಈ ಮನುಷ್ಯನ ಶಿರವೇ ಬ್ರಹ್ಮಾಂಡ, ಕಾಣುವ ಜಗವೇ ಪಿಂಡಾಂಡವಾಗಿದೆ. ಗೋರಖ್‌ನಾಥ್ ಹೇಳುವಂತೆ – ಎಲ್ಲಾ ತೀರ್ಥಗಳು ಮನುಷ್ಯ ಶರೀರದಲ್ಲೇ ಇವೆ. ಮನವೇ ಗಂಗೆ, ತನುವೇ ಕಾಶಿ. ಗೋರಖ್‌ನಾಥ್‌ರಿಗೆ ನುಡಿಗಿಂತ ನಡೆ ಪ್ರಧಾನ. ಯೋಗಿ ಮಾತ್ರವೇ ಅಲ್ಲ, ಶೀಲವಂತನಾದ ಗೃಹಸ್ಥ ಕೂಡ ಪವಿತ್ರ. ನಿಮ್ಮ ಶಕ್ತಿ ಜಗದೊಳಗಿಪ್ಪುದು; ಜಗದ ಶಕ್ತಿ ನಿಮ್ಮೊಳಗಿಪ್ಪುದು ಎಂಬ ಸಿದ್ಧಯೋಗಿಗಳ ಮಾತುಗಳನ್ನು ಮರೆಯಲಾಗದು.

ಜ್ಞಾನದ ಬಲದಿಂದ ಅಜ್ಞಾನದ ಕೇಡನ್ನು ನೋಡಯ್ಯಾ ಎಂಬುದು ಜ್ಞಾನಿಗಳ ಮಾತಾದರೆ, ಅಜ್ಞಾನದ ಬಲದಿಂದ ಜ್ಞಾನಿಗಳ ಹುಚ್ಚಾಟವನ್ನು ನೋಡಯ್ಯ ಎಂಬುದು ಪಾಮರ ಪಂಡಿತರ ಮಾತಾಗಿದೆ. ಕಾಯ ಒಡೆಯಬೇಕು ಎಂದು ಜ್ಞಾನಿಗಳು ಹೇಳಿದರೆ, ತೆಂಗಿನಕಾಯ ಒಡೆಯಬೇಕು ಎಂದು ಅರ್ಥೈಸಿ ಅವಿವೇಕಿಗಳು ಹೇಳುತ್ತಾರೆ. ಜ್ಞಾನವಿಲ್ಲದ ಕರ್ಮ ಏನು ಮಾಡಿದರೇನು? ಎಂದು ಗೋಪಾಲದಾಸರು ಪ್ರಶ್ನಿಸುತ್ತಾರೆ.

ಆದ್ದರಿಂದ ಮಾನವನು ತನ್ನ ಒಳಗಿರುವ ಶಕ್ತಿ ಸಾಮರ್ಥ್ಯವನ್ನು ಸಾಧನೆಯಿಂದ ಅರಿತು ನಡೆಯಬೇಕೆಂಬುದೇ ಕಾಯ ಒಡೆಯಬೇಕು ಎಂಬ ಮಾತಿನ ಅರ್ಥವಾಗಿದೆ.

ಎಸ್. ಸಿ. ರಂಗನಾಥ್
ಶ್ರೀ ಶಿವಾನಂದ ಯೋಗಾಶ್ರಮ, ಅಂಚೆ ಹಂಪಿ
ಹೊಸಪೇಟೆ ತಾಲ್ಲೂಕು - ೫೮೩೨೩೯, ಬಳ್ಳಾರಿ ಜಿಲ್ಲೆ



ಪ್ರಸ್ತುತವಿದೆ
ಹಿಂದೆಂದಿಗಿಂತಲೂ
ಉತ್ತಮವಾದ ಹೊಸ
ಸಂತೂರ್

ಇದೀಗ ಹೊಸ ಸಂತೂರ್ ಬಳಸಲು ಇನ್ನಷ್ಟು ಕಾರಣಗಳು

**ನ್ಯಾಚುರಲ್ ಸ್ಕಿನ್ ಸಾಫ್ಟನರ್ಸ್**
ನೀಡುವುದು ಕೋಮಲ
ಹಾಗೂ ನುಣುಪಾದ ತ್ವಚೆ

ಮೈಮರೆಸುವ **ಹೊಸ ಪರಿಮಳ**
ನೀಡುವುದು, ಆಹ್ಲಾದಕರ
ಸ್ನಾನದ ಅನುಭವ

**ಚಂದನ ಮತ್ತು ಅರಿಸಿನದ**
**ಅಡ್ವಾನ್ಸ್ಡ್ ಎಕ್ಸ್‌ಟ್ರಾಕ್ಟ್ಸ್**
ನೀಡುವುದು
ತಾರುಣ್ಯ ಭರಿತ ತ್ವಚೆ




ಹೊಸ ಸಂತೂರ್

ನಿಮಗೆಂದೇ ವಿಶೇಷವಾಗಿ

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. G. Ramakrishna

**HOSATHU** Kannada Monthly / August 2006 Rs. 12
Registered CPMG / KA / BGE – 7 / 2006-08. Posted at Bangalore PSO on the 28th of every month
WPP No. 14. Licenced to post without prepayment. RNI Regn. No. KARKAN/1999/614.